# ಇತಾಲಿಯಾ ನಾನು ಕಂಡಂತೆ

ಕು. ಶಿ. ಹರಿದಾಸಭಟ್ಟ




ವಿಶ್ವ ಕನ್ನಡ ಸಮ್ಮೇಳನ
14-3 ಎ, ನೃಪತುಂಗ ರಸ್ತೆ
ಬೆಂಗಳೂರು-560 002

Vishwa Kannada Sahitya Male

Italiya Naanu Kandanthe by Ku. Shi. Haridasabhatta

Published by K. Jayacharya, K.A.S., Additional Director. Directorate of Kannada & Culture (Vishwa Kannada Sammelana), 14/3 A, Nrupathunga Road. Bangalore - 560 002.





1983, 5,0





ಪ್ರಿಂಟರ್ಸ್
೪೪೩, ೪೪ನೇ ಅಡ್ಡರಸ್ತೆ, ಒಂದನೇ ಮುಖ್ಯರಸ್ತೆ,
೮ನೇ ಹಂತ, ಜಯನಗರ, ಬೆಂಗಳೂರು-೫೬೦ ೦೮೨

ಆರ್. ಗುಂಡೂರಾವ್
ಮುಖ್ಯಮಂತ್ರಿ



ವಿಧಾನಸೌಧ
ಬೆಂಗಳೂರು

ದಿನಾಂಕ : ೧೮-೯-೮೨

## ಸಂಕಲ್ಪ....ಸಿದ್ಧಿ

ಸುಮಾರು ಎರಡು ಸಾವಿರ ವರ್ಷಗಳಿಗೂ ಹೆಚ್ಚು ದೀರ್ಘವಾಗಿ ಐತಿಹಾಸಿಕ ಪರಂಪರೆ ಕನ್ನಡ ನಾಡಿನದು. ಈ ಅವಧಿಯಲ್ಲಿ ಕನ್ನಡ ಭಾಷೆ, ಸಾಹಿತ್ಯ, ಕಲೆ, ಸಂಸ್ಕೃತಿಗಳು ಸಮೃದ್ಧವಾಗಿ, ಶ್ರೀಮಂತವಾಗಿ ಬೆಳೆದು, ಈ ನಾಡಿನ ಇತಿಹಾಸವನ್ನು ಭವ್ಯವಾಗಿಸಿವೆ.

ಒಂದು ನಾಡಿನ ಅಂತಃಸತ್ವ ಅಡಕವಾಗಿರುವುದೇ ಅದರ ಸಾಂಸ್ಕೃತಿಕ ನೆಲೆಗಟ್ಟಿನಲ್ಲಿ. ಈ ನೆಲೆಗಟ್ಟು ಭದ್ರವಾಗಿರಬೇಕಾದರೆ ಸಾಂಸ್ಕೃತಿಕ ಪರಂಪರೆ ಉತ್ಕರ್ಷಕ್ಕೆ ಏರಲು ಔನ್ನತ್ಯ ಸಾಧಿಸಲು ನಿರಂತರವಾದ ಪ್ರಯತ್ನಗಳು ನಡೆಯಬೇಕು.

ಭಾರತೀಯ ಸಂಸ್ಕೃತಿಯಲ್ಲಿ ಹಾಸುಹೊಕ್ಕಾಗಿ ಬೆಸೆದುಕೊಂಡಿದ್ದರೂ ಕನ್ನಡ ತನ್ನದೇ ಆದ ವಿಶಿಷ್ಟ ಸಂಸ್ಕಾರಗಳನ್ನು, ಸಂಸ್ಕೃತಿಯನ್ನು ಹೊಂದಿದೆ.

ಕನ್ನಡ ನಾಡಿನ ಭವ್ಯ ಪರಂಪರೆಯನ್ನು ಜಾಗತಿಕ ಹಿನ್ನೆಲೆಯಲ್ಲಿ ಚಿತ್ರಿಸಿ, ವಿಶ್ವಕ್ಕೆ ಕನ್ನಡ ಸಂಸ್ಕೃತಿಯ ಹಿರಿಮೆಯನ್ನು ಸಾರುವ ಸದುದ್ದೇಶದಿಂದ ಪ್ರಥಮ ವಿಶ್ವ ಕನ್ನಡ ಸಮ್ಮೇಳನವನ್ನು ಕರ್ನಾಟಕದ ಪ್ರಮುಖ ಸಾಂಸ್ಕೃತಿಕ ಕೇಂದ್ರವಾದ ಮೈಸೂರಿನಲ್ಲಿ ಏರ್ಪಡಿಸಿದ್ದೇವೆ. ಇದೊಂದು ಚರಿತ್ರಾರ್ಹವಾದ ಸಂದರ್ಭವೆಂದು ನನ್ನ ನಂಬಿಕೆ. ಈ ಚರಿತ್ರಾರ್ಹ ಸಮ್ಮೇಳನ ಸಾರ್ಥಕವಾಗಲು ಮತ್ತು ಬಹುಕಾಲ ಇದರ

ಸವಿ ನೆನಪು ಉಳಿಯಲು ಹಲವು ಯೋಜನೆಗಳನ್ನು ರೂಪಿಸಿದ್ದೇವೆ. ಕನ್ನಡದ ಖ್ಯಾತ ಲೇಖಕರ ಮಹತ್ವದ ಕೃತಿಗಳನ್ನು ಪ್ರಕಟಿಸಿ, ಸುಲಭ ಬೆಲೆಗೆ ಒದಗಿಸುವುದು ಈ ಯೋಜನೆಗಳಲ್ಲಿ ಒಂದು. ಇದರಂತೆ ಒಂದುನೂರಾ ಎರಡು ಕೃತಿಗಳನ್ನು, ಹದಿನೇಳು ಸಂಕಲನಗಳನ್ನು ಆಯ್ಕೆ ಮಾಡಿ ಪ್ರಕಟಿಸುತ್ತಿದ್ದೇವೆ. ಈ ಸಾಹಿತ್ಯ ಮಾಲಿಕೆಯಲ್ಲಿ ಕವನ, ಕಾದಂಬರಿ, ನಾಟಕ, ವಿಚಾರದ ಸಾಹಿತ್ಯ ಕೃತಿಗಳಲ್ಲದೆ ಕನ್ನಡ ಸಾಹಿತ್ಯದ ಸತ್ವವನ್ನು, ವೈವಿಧ್ಯವನ್ನು ಪ್ರತಿಫಲಿಸುವ ವಿವಿಧ ಬಗೆಯ ಸಂಕಲನಗಳು ಇವೆ. ಅನ್ಯಭಾಷಿಕರಿಗೆ ಕನ್ನಡ ಸಾಹಿತ್ಯದ ಕಂಪು ಬೀರುವಂತೆ ಕೆಲವು ಆಯ್ದ ಕೃತಿಗಳ ಇಂಗ್ಲಿಷ್ ಭಾಷಾಂತರವನ್ನು ಕೂಡ ಪ್ರಕಟಿಸುತ್ತಿದ್ದೇವೆ. ಸಾಹಿತ್ಯಮಾಲೆಯ ಈ ಕೃತಿರತ್ನಗಳನ್ನು ಸಹೃದಯ ವಾಚಕರು ಓದಿ ಆಸ್ವಾದಿಸಿದರೆ ನಮ್ಮ ಶ್ರಮ ಸಾರ್ಥಕ ; ಸಮ್ಮೇಳನ ಅರ್ಥಪೂರ್ಣವಾಗುವುದೆಂದು ನನ್ನ ಅಭಿಲಾಷೆ.

ಈ ಕೃತಿಗಳನ್ನು ಆಯ್ಕೆ ಮಾಡುವಲ್ಲಿ ಸಾಹಿತ್ಯ ಸಮಿತಿಯ ಪರಿಣತ ಸದಸ್ಯರು ಸಾಕಷ್ಟು ಶ್ರಮಿಸಿದ್ದಾರೆ. ಸುದೈವದಿಂದ ಕನ್ನಡದಲ್ಲಿ ಪ್ರತಿಭಾವಂತ ಲೇಖಕರ ಅಮೂಲ್ಯ ಕೃತಿಗಳಿಗೆ ಕೊರತೆ ಇಲ್ಲ. ಈ ಹಿನ್ನೆಲೆಯಲ್ಲಿ ನಿಶ್ಚಿತ ಸಂಖ್ಯೆಯಲ್ಲಿ ಸಾಹಿತ್ಯ ಕೃತಿಗಳನ್ನು ಆಯ್ಕೆ ಮಾಡುವುದು ಸುಲಭದ ಕೆಲಸವಲ್ಲ. ಆದರೂ ಬಹುಜನರಿಗೆ ಒಪ್ಪಿಗೆಯಾಗುವಂತೆ ಸಾಹಿತ್ಯ ಸಮಿತಿ ತನ್ನ ಕರ್ತವ್ಯ ನಿರ್ವಹಿಸಿದೆಯೆಂದು ಭಾವಿಸುತ್ತೇನೆ. ಈ ಸಮಿತಿಗೆ ಕೃತಜ್ಞತೆಗಳನ್ನು ಅರ್ಪಿಸುವುದು ನನ್ನ ಕರ್ತವ್ಯ. ಈ ಕೃತಿಗಳನ್ನು ಪ್ರಕಟಿಸಲು ಅನುಮತಿ ನೀಡಿ, ಲೇಖಕರು ಉಪಕರಿಸಿದ್ದಾರೆ. ಅವರ ಉದಾರ ಉಪಕಾರವನ್ನು ಈ ಸಂದರ್ಭದಲ್ಲಿ ಕೃತಜ್ಞತಾಪೂರ್ವಕವಾಗಿ ನೆನೆಯುತ್ತೇನೆ.

ಈ ಗ್ರಂಥಮಾಲೆ ಕನ್ನಡಿಗರ ಮನಸ್ಸನ್ನು ತಟ್ಟಿ, ಹೃದಯಸ್ಪಂದನ ಮಾಡಿದರೆ ನಮ್ಮ ಸಂಕಲ್ಪಕ್ಕೆ ಸಿದ್ಧಿ ದೊರಕಿದಂತೆ. ಈ ಪ್ರಯತ್ನ 'ನ ಭೂತೋ' ಎಂದು ಹೆಮ್ಮೆಯಿಂದ ಹೇಳಬಲ್ಲೆ. ತಾಯಿ ಭುವನೇಶ್ವರಿ ಈ ಪ್ರಯತ್ನವನ್ನು ಹರಸಿ, ಮಂಗಳವುಂಟುಮಾಡಲೆಂದು ವಿನೀತ ಪ್ರಾರ್ಥನೆ ಸಲ್ಲಿಸುತ್ತೇನೆ.

ರಾ. ಗುಂಡೂರಾವ್

ಮುಖ್ಯಮಂತ್ರಿ

# ಇತಾಲಿಯಾ - ನಾನು ಕಂಡಂತೆ

## (ಪ್ರವಾಸಕಥನ)

### ೦೧ ಅಂತೂ ಹೊರಟೆ

೧೯೬೨ನೆಯ ನವಂಬರ ೧೨ರಂದು ಪುಣ್ಯವಶಾತ್ ದೊರಕಿದ ಇತಾಲಿಯನ್ ಸರ್ಕಾರದ ಶಿಷ್ಯವೃತ್ತಿಯ ಬಲದಿಂದ 'ಸ್ವರ್ಗಾದಪಿ ಗರೀಯಸಿ' ಎನಿಸುವ ಈ ನನ್ನ ಜನ್ಮಭೂಮಿ ತೊರೆದು ಆಗಷ್ಟೇ ಒಳನುಗ್ಗಿದ ಚೀನೀ ಆಕ್ರಮಣದ ಅನಿಶ್ಚಿತತೆಯನ್ನು ಲೆಕ್ಕಿಸದೆ ಇತಾಲಿಯಕ್ಕೆ ಹೋಗುವ ಹಡಗು ಹತ್ತಿದೆ. ನನ್ನ ವಾಸ ಮುಂದಿನ ಆರುತಿಂಗಳ ಕಾಲ ನೇಪಲ್ಸ್ ನಗರದಲ್ಲಿ ಸ್ಥಿರವಾಗಲಿದ್ದುದರಿಂದಲೋ ಏನೋ ನನ್ನ ಹಡಗು – ಎಸ್. ಎಸ್. ರೋಮಾ – ನೇಪಲ್ಸಿನ ಫ್ಲೋತ್ತಾ ಲಾವುರೋ ಕಂಪೆನಿಗೆ ಸೇರಿದ್ದಾಗಿತ್ತು. ಹದಿನಾರು ಸಾವಿರ ಟನ್ ತೂಕದ 'ರೋಮಾ' ಬೃಹತ್ ನೌಕೆಗಳ ಸಾಲಿನಲ್ಲಿ ನಿಲಲಾರದಾದರೂ ಆಸ್ಟ್ರೇಲಿಯದಿಂದ ಇತಾಲಿಯದ ಜನೋವಾತನಕ ಸುದೀರ್ಘವಾದ ಹಾದಿಯಲ್ಲಿ ವರ್ಷಕ್ಕೆ ಆರು ಬಾರಿ ಪಯಣಿಸುತ್ತಿತ್ತು; ಪ್ರಯಾಣಿಕರಿಗೆ ಅಗತ್ಯವಾದ ಎಲ್ಲ ಆಹಾರ ವಿಹಾರ ಸುಖಸಾಧನಗಳನ್ನು ಒಳಗೊಂಡಿತ್ತು. ಕೇವಲ ೮೮೦ ರೂಪಾಯಿ ಮೊತ್ತಕ್ಕೆ ಶಾಖ ನಿಯಂತ್ರಣ ವ್ಯವಸ್ಥೆಯನ್ನು ಹೊಂದಿಸಿಕೊಂಡ ಈ ಹಡಗಿನಲ್ಲಿ ಹನ್ನೆರಡು ದಿನಗಳ ಸಭೋಜನ ಪ್ರವಾಸ ಅಷ್ಟೇನೂ ತುಟ್ಟಿ ಎಂದು ನನಗನಿಸಲಿಲ್ಲ. 'ರೋಮಾ' ಸಿಡ್ನಿಯಿಂದ ಹೊರಟು ಸಿಂಗಪುರ, ಕೊಲಂಬೊ, ಮುಂಬಯಿ, ಪೋರ್ಟ್ ಸಯ್ಯದ್, ಮಾಲ್ಟಾ, ಮೇಸ್ಸಿನಾ, ನೇಪಲ್ಸ್ ಬಂದರುಗಳನ್ನು ದಾಟಿ ಉತ್ತರ ಇತಾಲಿಯದ ಜನೋವದಲ್ಲಿ ತಂಗುವುದು. ಅದರೊಳಗಿನ ಸೌಕರ್ಯ ಮತ್ತು ಅಗ್ಗ ಬೆಲೆಯನ್ನು ಗಮನಿಸಿ ಭಾರತದಿಂದ ಲಂಡನ್ನಿಗೆ ವಲಸೆ ಹೋಗುವ ನಮ್ಮ ದೇಶದ ಜನ ಅದನ್ನೇ ಖಾಯಸು ಮಾಡಿದ್ದಾರೆ; ಆದರೆ ನಾನು ಹೊರಟ ಸಂಕಟಕಾಲದಲ್ಲಿ ರಿಸರ್ವ್ ಬ್ಯಾಂಕಿನ

ಅವಕೃಪೆಯಿಂದಾಗಿ ಹೊರಟು ನಿಂತವರೆಷ್ಟೋ ಮಂದಿ ಕೊನೆ ಗಳಿಗೆಯಲ್ಲಿ ಪ್ರಯಾಣ ರದ್ದುಗೊಳಿಸಬೇಕಾಯಿತಂತೆ. ಇದರಿಂದ ನನಗೆ ಲಾಭವಾಯಿತು: 'ಸಿ' ಡೆಕ್ಕಿನಲ್ಲಿ ನನಗೆ ನಿರ್ದಿಷ್ಟವಾದ ಸ್ಥಳದಿಂದ ತೇರ್ಗಡೆ ದೊರೆತು ನಾನು 'ಬಿ' ಡೆಕ್ಕಿನ ಪ್ರಯಾಣಿಕನಾದೆ.

ಚೀನೀಯರ ದಾಳಿಯಿಂದ ನಾಡೆಲ್ಲ ತುಂಬ ಗೊಂದಲಕ್ಕೆ ಈಡಾದ ಆ ಕಾಲದಲ್ಲಿ ದೇಶಾಂತರ ಹೊರಡುವುದು ಹೊಣೆಗಾರ ಭಾರತೀಯ ನಾಗರಿಕನಾದ ನನ್ನಂಥವನಿಗೆ ಸುಲಭವಾಗಿರಲಿಲ್ಲ. ಹಡಗು ಬಲಾರ್ಡ್‌ಪಿಯರನ್ನು ಬಿಟ್ಟು ಕದಲುವ ವರೆಗೆ ನಾನು ಕೆಳಕ್ಕೆ ನೆಗೆದು ಭರತಭೂಮಿಯ ರಕ್ಷಣೆಗೆ ಅನುವಾಗಬಹುದಾಗಿತ್ತು. ಹೊರಡುವ ಹಿಂದಿನ ರಾತ್ರಿ ನನಗೆ ನಿದ್ದೆಯೇ ಬಾರದು. ಇಡಿ ಇರುಳು ಚಡಪಡಿಸುತ್ತಲೇ ನಸುಕಿಗೆ ಎದ್ದು ನನ್ನ ಬಾಲ್ಯ ಸ್ನೇಹಿತರಾದ ಕಮಲಾಕ್ಷ ಪೈ (ಈಗ ಸಿಂಡಿಕೇಟ್ ಬ್ಯಾಂಕಿನ ಕಸ್ಟೋಡಿಯನ್) ಅವರಿಗೆ ಫೋನ್ ಮಾಡಿದೆ. ಮರ್ಯಾದೆಯಾಗಿ ಹಿಂದೆ ಬರುತ್ತೇನೆ – ನಿಮ್ಮ ಒಪ್ಪಿಗೆಯೆ ? ಎಂದು ಅವರನ್ನು ಕೇಳಿ ಅನುಕೂಲ ನಿರ್ಧಾರ ಮಾಡಿಬಿಡುತ್ತೇನೆಂದು ನಾನು ಹವಣಿಸಿದ್ದೆ. ಆದರೆ ನನ್ನ ವಾಕ್ಯ ಪೂರ್ತಾ ಮನಸ್ಸಿನಲ್ಲಿ ರಚನೆ ಆಗುವ ಮೊದಲೆ ಫೋನ್ ಗಂಟೆ ಬಾರಿಸಿತು. ಹೆಸರು ಹೇಳುವಷ್ಟರಲ್ಲಿ ಪೈ ಅವರು ಶುಭ ಪ್ರಯಾಣವನ್ನು ಕೋರಿ ನನ್ನ ಗಂಟಲು ಕಟ್ಟುವಂತೆ ಮಾಡಿದರು. ಆ ತರುವಾಯ ನಾನು ಉಳಕೊಂಡ ಮನೆಯ ಸದ್ಗೃಹಸ್ಥರಾದ ಶ್ರೀ ಲಕ್ಷ್ಮಣ ನಾಯಕರು ತಾವು ಬ್ರಾಹ್ಮೀ ಮುಹೂರ್ತದಲ್ಲೇ ಎದ್ದು ದೇವರಿಗೆ ಪೂಜೆ ಮಾಡಿ ಭಕ್ತಿಯಿಂದ ತಯಾರಿಸಿದ ತೀರ್ಥ ಪ್ರಸಾದ ಆರತಿಗಳನ್ನು ಕೊಟ್ಟು 'ಒಳ್ಳೆಯದಾಗುತ್ತದೆ' ಎಂದು ನನಗೆ ಭಗವಂತನ ನೆನಪು ಹುಟ್ಟಿಸಿದರು. ಅವರ ಪ್ರೀತಿ ವಿಶ್ವಾಸಗಳನ್ನು ನೋಡಿ ಮುಂದಿಟ್ಟ ಕಾಲನ್ನು ಹಿಂದಿಡುವುದು ವೀರೋಚಿತವಲ್ಲ ಎಂದು ಬಗೆಯುತ್ತ, ನನ್ನನ್ನು ನಾನೇ ಶಪಿಸಿಕೊಳ್ಳುತ್ತ ಬಲಾರ್ಡಪಿಯರಿಗೆ ಹೊರಟುಬಿಟ್ಟೆ. ಹಾಗಾಗಿ ನೆಹರೂರವರ ಕೈಯಿಂದ ಮೆನನ್ನರ ರಕ್ಷಣಾ ಖಾತೆಯನ್ನು ವಹಿಸಿಕೊಳ್ಳುವುದಾಗಲೀ ಅಥವಾ ಸ್ವಂತ ರಕ್ಷಣೆಯನ್ನು ಮಾಡಿಕೊಳ್ಳುವುದಾಗಲೀ ನನಗೆ ಸಾಧ್ಯವಾಗಲಿಲ್ಲ.

'ಹೋಗಲೇ ಬಿಡಲೆ' ಎಂದು ಹ್ಯಾಮ್ಲೆಟನಂತೆ ಮನಸ್ಸಿನಲ್ಲಿ ಉಯ್ಯಾಲೆಯಾಡುತ್ತಿದ್ದ ನನ್ನ ಕಷ್ಟ ನೋಡಲು ಯಾರೂ ಬರಕೂಡದೆಂದು ನನ್ನ

ಮುಂಬಯಿಯ ಸ್ನೇಹಿತರನ್ನು ನಾನೇ ನಿರುತ್ಸಾಹಗೊಳಿಸಿದ್ದೆ. ಆದರೂ ಗೆ. ರಾಮಚಂದ್ರ ಉಚ್ಚಿಲ, ವ್ಯಾಸರಾಯ ಬಲ್ಲಾಳ, ಬಿ. ಆರ್. ಭಟ್ಟರು ಮತ್ತು ಸಿಂಡಿಕೇಟ್ ಬ್ಯಾಂಕಿನ ಮುಂಬಯಿ ಮೆನೇಜರ್ ನಾಯಕರು ಬಲಾರ್ಡ್‌ಪಿಯರ್ ತನಕವೂ ಬಂದು ತಾಸೆರಡುತಾಸಿದ್ದು, ಮಾತನಾಡಿ ಶುಭಕೋರಿ ಹೊರಟು ಹೋದರು. ಭಟ್ಟರು ಅಲ್ಲಿ ತೆಗೆದ ಫೋಟೋ ನೋಡಿದರೆ ನನ್ನ ಮುಸಡಿ ಹರಳೆಣ್ಣೆ ಕುಡಿದಂತೆ ತೋರುತ್ತಿತ್ತು. ಎಲ್ಲರೂ ಹೊರಟ ಬಳಿಕ ನಾನು ಅಂತಿಮ ನಿರ್ಣಯ ಕೈಗೊಂಡು ನನ್ನ ಪ್ರಿಯ ಭರತಭೂಮಿಯ ಮಣ್ಣಿಗೆ 'ಬಿ' ಡೆಕ್ಕಿನಿಂದ ಜಿಗಿಯುವವನಿದ್ದೆ. ಆದರೆ ಶೌರ್ಯ ಸಾಹಸಗಳ ಬಗ್ಗೆ ಹಿಂದಿನ ವರ್ಷ ನನ್ನಿಂದ ಪಾಠ ಹೇಳಿಸಿಕೊಂಡ ನನ್ನೊಬ್ಬ ವಿದ್ಯಾರ್ಥಿ ಕಾಪು ಸಂಜೀವ ಶೆಟ್ಟಿ ಅಕಸ್ಮಾತ್ತಾಗಿ ಕೇಂದ್ರೀಯ ಸುಂಕದ ವಿಭಾಗದ ವಿಚಕ್ಷಣ ಅಧಿಕಾರಿಯ ರೂಪದಲ್ಲಿ ಪ್ರತ್ಯಕ್ಷನಾಗಿ, ನನ್ನ ಪಾಲಿನ ದೈವವೋ ವಿಧಿಯೋ ಆಗಿ, ಹಡಗು ಬಿಡುವ ವರೆಗೂ ನನ್ನ ಬೆನ್ನು ಬಿಡಲಿಲ್ಲ.

### ೦ ೦ ಚಿರ ಸುಂದರ ರೋಮಾ

ಮಧ್ಯಾಹ್ನ ಒಂದು ಗಂಟೆಯ ಹೊತ್ತಿಗೆ ನಾನು ಮತ್ತು ನನ್ನ ಆರು ತಿಂಗಳ ಸಹಾಧ್ಯಾಯಿ – ಸಹವಾಸಿಯಾಗಲಿದ್ದ ಅಣ್ಣಾಮಲೈ ವಿಶ್ವವಿದ್ಯಾಲಯದ ಪ್ರೊಫೆಸರ್ ಸುಬ್ಬಯ್ಯನೂ ಲೌಂಜಿನ ಹೊರಗಡೆ ವಿದಾಯದ ಚಮತ್ಕಾರಗಳನ್ನೂ ಪ್ರಕಾರಗಳನ್ನೂ ನೋಡುತ್ತಾ ನಿಂತಿದ್ದೆವು. ಲೌಂಜಿನ ಒಳಗಡೆ ಸಂಗೀತದ ಪೆಟ್ಟಿಗೆಯಿಂದ ನಾವಿಕರಿಗೆ ಪ್ರಿಯವಾದ ಯಾವುದೋ ಒಂದು ಗ್ರೀಕ್ ಹಾಡು ಮೇಲಿಂದ ಮೇಲೆ ಗಟ್ಟಿಯಾಗಿ ಕೇಳಿಸುತ್ತಿತ್ತು. ಹಡಗು ಹೊರಡುವ ವರೆಗೆ ಮುಂಬಯಿಯ ಪಾನ ಪ್ರತಿಬಂಧದ ಕಾರಣ ನಿಶ್ಶೇಷ್ಟವಾಗಿದ್ದ ಲೌಂಜಿನ 'ಬಾರು' ಒಮ್ಮಿಂದೊಮ್ಮೆ ಸಜೀವವಾಯಿತು. ಪ್ರವಾಸಿಗಳು ಬಹಳ ಆಸಕ್ತಿಯಿಂದ ಉಷ್ಣೋದಕವನ್ನೂ ಸಿಗರೇಟನ್ನೂ ಪಡೆಯಲು ಎಷ್ಟೋ ಹೊತ್ತಿನಿಂದ ಕಾದು ನಿಂತಿದ್ದರು. ಹಡಗು ಕೆಂಪು ಸಮುದ್ರದ ಕಡೆ ಮುಖಮಾಡಿ ದಿನಕ್ಕೆ ೩೫೦ ರಿಂದ ೪೦೦ ಮೈಲು

ವೇಗದಲ್ಲಿ ಓಡುತ್ತಿತ್ತು. ಮುಂದಿನ ಎಂಟು ದಿನ ಅದು ಯಾವ ಕರೆಯನ್ನೂ ಮುಟ್ಟದು. ಅಷ್ಟು ದಿನ ಸರೋವರದೊಳಗಿನ ನಾವೆಯಂತೆ ಮಿಸುಕಾಡದೆ 'ರೋಮಾ' ಮುಂದುವರಿಯಿತು. ಹಡಗಿನಲ್ಲಿ ಹೆಚ್ಚಾಗಿ ಆಸ್ಟ್ರೇಲಿಯಾಕ್ಕೆ ಕೆಲಸಕ್ಕೋಸ್ಕರ ವಲಸೆ ಹೋಗಿದ್ದ ಇತಲಿ, ಆಸ್ಟ್ರಿಯಾ, ಅಲ್ಬೇನಿಯಾ, ಹಂಗೇರಿ ಮುಂತಾದ ದಕ್ಷಿಣ ಯುರೋಪಿನ ಜನ ತುಂಬಿಕೊಂಡಿದ್ದರು. ಇತಾಲಿಯನ್ ಕೆಲಸಗಾರರು ಹಾವ-ಭಾವಯುತವಾಗಿ ಇತಾಲಿಯನ್ ಭಾಷೆಯಲ್ಲಿ ಮಾತನಾಡುವುದನ್ನು ನಾನು ಅಲ್ಲಲ್ಲಿ ನಿಂತು ಆಲಿಸುತ್ತಿದ್ದೆ. ಹಡಗು ಪ್ರಯಾಣದಲ್ಲಿ ಸ್ನೇಹಿತರನ್ನು ಸಂಪಾದಿಸದೆ ಇದ್ದರೆ ಕಾಲಹರಣ ಮಾಡುವುದು ಕಷ್ಟ. ಮದ್ರಾಸಿನ ರಾಘವನ್ ಜರ್ಮನಿಯಲ್ಲಿ ಆರೇಳು ವರ್ಷ ಅಧ್ಯಯನ ಮಾಡಿ, ಡಿಗ್ರಿ ಸಂಪಾದಿಸಿ ಇಂಡಿಯಾಕ್ಕೆ ಮರಳಿದವರು ಮತ್ತೊಮ್ಮೆ ಜರ್ಮನಿಯ ಯಾವುದೋ ಕಾರ್ಖಾನೆಯಲ್ಲಿ ಕೆಲಸ ಮಾಡಲು ಹೊರಟಿದ್ದರು. ಅವರು ಜರ್ಮನ್ ಭಾಷೆಯಲ್ಲಿ ಹಡಗಿನಲ್ಲಿದ್ದ ಅನೇಕ ಸ್ತ್ರೀ-ಪುರುಷರೊಡನೆ, ಮಕ್ಕಳೊಡನೆ ಸುಲಭವಾಗಿ ಮಾತನಾಡ ಬಲ್ಲರು. ಅವರ ಮಾತುಕತೆಗಳನ್ನು ಆಲಿಸುವುದು, ಅವರು ಜರ್ಮನಿಯಲ್ಲಿ ಪಡೆದ ಅನುಭವವನ್ನು ಕೇಳುವುದು ನನಗೆ ಬಹಳ ಇಷ್ಟವಾದ ಉದ್ಯೋಗ ವಾಯಿತು. ಅದರಂತೆ ನಮ್ಮ ನಾಡಿನ ವಿಷಯ, ನನ್ನ ಊರಿನ ವಿಷಯ ಮಾತನಾಡಲು ನನ್ನ ಜಿಲ್ಲೆಯವರೇ ಮೂವರು – ಲಂಡನಿನಲ್ಲಿ ಉದ್ಯೋಗ ವನ್ನು ಅರಸಿಕೊಂಡು ಹೊರಟ ತರುಣರಿದ್ದರು. ಲೌಂಜಿನಲ್ಲಿ ಪ್ರಪಂಚದ ಎಲ್ಲ ಪ್ರಸಿದ್ಧ ಭಾಷೆಗಳ ಜೊತೆ ನಮ್ಮ ಜಿಲ್ಲೆಯ ಮನೆಮಾತಾದ ತುಳು ವನ್ನೂ ಸೇರಿಸಿದ ಕೀರ್ತಿ ಪುತ್ತೂರಿನ ಭಂಡಾರಿಗೂ ನನಗೂ ಸಲ್ಲತಕ್ಕದ್ದು. ಅರ್ಥವಾಗದ ಹಲವು ಭಾಷೆಗಳನ್ನು ಕೇಳುವುದು ಮಾತ್ರವಲ್ಲ, ಬೇರೆ ಯವರಿಗೆ ಕೇಳಿಸಿ ಅವರ ಮೇಲಿನ ಸೇಡನ್ನು ತೀರಿಸಿಕೊಳ್ಳುವುದೂ ನಮಗೆ ಬಹಳ ಆಪ್ಯಾಯಮಾನವಾಗಿತ್ತು. ಊಟದ ಸಮಯವನ್ನು ನಮಗೆ ನಿರ್ದಿಷ್ಟವಾದ ಮೇಜಿನಲ್ಲಿಯೂ ನಿದ್ದೆಯ ಎಂಟು-ಹತ್ತು ತಾಸು 'ಕೇಬಿನಿನ' ಲ್ಲಿಯೂ ಕಳೆದು ಉಳಿದ ಎಲ್ಲ ಹೊತ್ತು ನಾವು ಲೌಂಜಿನಲ್ಲೇ ಕಳೆಯುತ್ತಿ ದ್ದೆವು. ಅಲ್ಲಿ ಕೆಲವರು ಟೇಬಲ್ ಟೆನ್ನಿಸ್ ಆಟವಾಡುತ್ತಿದ್ದರು. ಕೆಲವರು ಇಸ್ಪೀಟಿನಲ್ಲಿ ಮಗ್ನರಾಗಿದ್ದರು; ಕೆಲವರು ಒಂದು ಬಾಟ್ಲಿ ಬೀರನ್ನು ತಂದಿರಿಸಿ ಕೊಂಡು ನಿಧಾನವಾಗಿ ಸವಿಯುತ್ತಾ ಯೋಚನಾಪರರಾಗಿದ್ದರು. ಲೌಂಜಿ

ನಲ್ಲಿ ಕೂತು ಬೇಸರ ಬಂದರೆ ಹೊರಗಿನ "ಡೆಕ್ ಕಾರಿಡರ್"ನಲ್ಲಿ ಇಡಿಯ ಹಡಗಿನ ಪ್ರದಕ್ಷಿಣೆ ಬರಬಹುದಾಗಿತ್ತು.

ಪ್ರತಿದಿನ ಮುಂಜಾನೆ ಎಂಟು ಗಂಟೆಗೆ ಬೆಳಗಿನ ಉಪಾಹಾರಕ್ಕೆ ಹೋಗುವ ಮುನ್ನ ಹಡಗಿನ "ಪರ್ಸರ"ನ ಕಛೇರಿಯಲ್ಲಿ ಅಲ್ಲಿಯೇ ತಯಾರಿಸಲಾದ ದೈನಂದಿನ ವಾರ್ತೆಯನ್ನೊಳಗೊಂಡ ಸುದ್ದಿ ಪತ್ರಕ್ಕೋಸ್ಕರ ಎಲ್ಲರಂತೆ ನಾನೂ ಸಾಲು ಹಿಡಿಯುತ್ತಿದ್ದೆ. ಒಂದು ಫುಲ್‌ಸ್ಕೇಪ್ ಹಾಳೆಯ ಎರಡೂ ಮಗ್ಗುಲಲ್ಲಿ ಹಿಡಿಸಬಹುದಾದಷ್ಟು ವಾರ್ತೆ ಅದರಲ್ಲಿ ಸಿಗುತ್ತಿತ್ತು. ಒಂದೆರಡು ದಿನಗಳ ಅನುಭವದಿಂದ ನಾನು ಇಂಗ್ಲಿಷಿನ ಹಾಳೆಯ ಜೊತೆಗೆ ಇತಾಲಿಯನ್ ಹಾಳೆಯನ್ನೂ ಸಂಪಾದಿಸಿಕೊಳ್ಳುತ್ತಿದ್ದೆ. ನಮ್ಮ ಗಡಿ ಯುದ್ಧದ ಸಮಾಚಾರಕ್ಕೆ ಇತಾಲಿಯನ್ ಹಾಳೆಯಲ್ಲಿ ಹೆಚ್ಚು ಅವಕಾಶ ಸಿಗುವಂತೆ ತೋರಿದ್ದೇ ಇದಕ್ಕೆ ಕಾರಣ. ಆಮೇಲೆ ಗುಪ್ತ ಲಿಪಿಯನ್ನು ಓದುವವರಂತೆ ಇತಾಲಿಯನ್–ಇಂಗ್ಲಿಷ್ ನಿಘಂಟಿನ ಸಹಾಯದಿಂದ ಒಂದೊಂದೇ ಶಬ್ದದ ಅರ್ಥವನ್ನು ಜೋಡಿಸಿ ಒಟ್ಟರ್ಥವನ್ನು ಊಹಿಸಿ ನಮ್ಮ ಸ್ನೇಹಿತರಿಗೆಲ್ಲ ತಿಳಿಸುತ್ತಿದ್ದೆ. ಜೇಬಿನಲ್ಲಿ ಇತಾಲಿಯನ್ ನಿಘಂಟನ್ನು ಹಗಲೆಲ್ಲ ಇರಿಸಿಕೊಂಡು ಆಗುವಷ್ಟು ಪದಗಳನ್ನು ಕಲಿಯಲು ಪ್ರಯತ್ನ ಮಾಡುತ್ತಿದ್ದೆ.

ಮುಂಬಯಿ ಬಿಟ್ಟ ನಾಲ್ಕನೆಯ ದಿನ ನಮಗೆ ಅರೇಬಿಯದ ಕರಾವಳಿಯ ಭೂದರ್ಶನವಾಯಿತು. ಸುದ್ದಿ ಪತ್ರದಲ್ಲಿ ಅಂದು ರಾತ್ರಿ ಹಡಗು "ಪೆರಿಮ್" ದ್ವೀಪವನ್ನು ಬಳಸಿ ಕೆಂಪು ಸಮುದ್ರವನ್ನು ಪ್ರವೇಶಿಸುವುದೆಂಬ ವರ್ತಮಾನ ತಿಳಿದುಬಂದಿತ್ತು. ಆದರೆ ಕಗ್ಗತ್ತಲ ರಾತ್ರಿಯಲ್ಲಿ ಪೆರಿಮ್ ದ್ವೀಪದ ಮಿಣುಕುದೀಪಗಳ ಬೆಳಕಿಗೆ ನಮಗೆ ಅರಬಿಸಮುದ್ರವನ್ನು ಬಿಟ್ಟದ್ದಾಗಲೀ, ಕೆಂಪುಸಮುದ್ರವನ್ನು ಪ್ರವೇಶಿಸಿದ್ದಾಗಲೀ, ತಿಳಿಯಲಿಲ್ಲ. ಮರುದಿನ ಬಚ್ಚಲುಮನೆಯ ಗಾಜಿನ ಕಿಂಡಿಗೆ ಸಮೀಪವೇ ಸುಳಿಯುತ್ತಿದ್ದ ಕೆಂಪುಸಮುದ್ರದ ಬಣ್ಣ ಕೆಂಪಾಗಿರದೆ ಎಲ್ಲ ಸಮುದ್ರಗಳ ನೀರಿನಂತೆ ನೀಲವಾಗಿದ್ದುದನ್ನು ನೋಡಿ ಯಾರಿಗೂ ನಿರಾಸೆಯಾಗಲಿಲ್ಲ. ಅಷ್ಟಲ್ಲದೆ ಕೆಂಪುಸಮುದ್ರವು ಪ್ರಪಂಚದ ನಕಾಶೆಯಲ್ಲಿ ಕಾಣುವಂತೆ ಅಂತಹ ಅಗಲಕಿರಿದಾದ ಜಲರಾಶಿಯೂ ಆಗಿರಲಿಲ್ಲ. ಇಕ್ಕಡೆಯ ಕರಾವಳಿ ಬರಿಗಣ್ಣಿಗೆ ಕಾಣಿಸದು. ಸುಯೇಝು ಮುಟ್ಟಬೇಕಾದರೆ ಮತ್ತೆ ನಾಲ್ಕು ದಿನಗಳ ಹಾದಿ

ಯನ್ನು ಈ ಕೆಂಪುಸಮುದ್ರದಲ್ಲಿಯೇ ಕಳೆಯಬೇಕೆಂದರೆ ಅದರ ಉದ್ದದ ಅರಿವಾಗಬಹುದು. ಸುಯೇಜ್ ಮುಟ್ಟುವ ವರೆಗೆ ಹಡಗಿನ ಓಟ ಬಹಳ ಆನಂದದಾಯಕವಾಗಿತ್ತು.

## ೦ ೦ ಕೈರೋ ಯಾತ್ರೆ

ಸುಯೇಜ್ ಮುಟ್ಟುವ ನಾಲ್ಕು ದಿನಗಳ ಮೊದಲು ಆರು ಪೌಂಡಿಗೆ (ಸುಮಾರು ೮೦ ರೂಪಾಯಿ) ಕೈರೋಕ್ಕೆ ಕರೆದುಕೊಂಡು ಹೋಗುತ್ತೇವೆಂದು ಹಡಗಿನಲ್ಲಿ ಒಂದು ಪ್ರಕಟಣೆ ಹೊರಟಿತು. ನಾವು ಕೆಲವರು ಅಷ್ಟನ್ನು ಕೊಟ್ಟು ೨೦ನೆಯ ತಾರೀಕು ಮುಂಜಾನೆ ಹಡಗು ಸುಯೇಜ್ ಕಾಲುವೆಯ ಸಮೀಪ ಲಂಗರು ಹಾಕಿದಾಗ ಬೇರೊಂದು ಸಣ್ಣ ಲೋಂಚಿನಲ್ಲಿ ಸುಯೇಜ್ ಪಟ್ಟಣಕ್ಕೆ ಹೊರಟೆವು. "ಇತಾಲಿಯನ್ ಎಕ್ಸ್‌ಪ್ರೆಸ್ ಕಂಪೆನಿ" ಎಂಬ ಒಂದು ಪ್ರವಾಸೀ ಬಸ್ಸು ನಮಗಾಗಿ ಕಾದಿತ್ತು. ಆದರೆ ಮಾರ್ಗದರ್ಶಕನು ನಮ್ಮನ್ನು ಮೊದಲು ಬಸ್ಸಿನೊಳಕ್ಕೆ ಒಯ್ಯದೆ ಪಕ್ಕದಲ್ಲೆ ಇದ್ದ ಮಾರ್ಕೇಟು ಕ್ಷೇತ್ರಕ್ಕೆ ಕರೆದೊಯ್ದನು. ಅಲ್ಲಿ ಐಗುಪ್ತ ದೇಶದ ಚರ್ಮ ಮತ್ತು ಲೋಹದ ಗುಡಿಕೈಗಾರಿಕೆಗಳು ತಯಾರಿಸಿದ ಸ್ಮಾರಕ ವಸ್ತುಗಳ (Souvenir) ಹಲವು ಅಂಗಡಿಗಳು ಸಾಲಾಗಿ ಪ್ರವಾಸಿಗಳ ಕಿಸೆಯನ್ನು ಬರಿದು ಮಾಡಲು ಸರ್ವ ಸಿದ್ಧತೆಯನ್ನೂ ಮಾಡಿಕೊಂಡು-ಕಾದಿದ್ದುವು. ಅಲ್ಲಿಂದ ಹೊರಬರುವಾಗ ವರ್ತಮಾನ ಪತ್ರಗಳನ್ನು ಮಾರುವ ಒಬ್ಬನ ಕೈಯಲ್ಲಿ ಅವಸರದಿಂದ ಒಂದು ಇಂಗ್ಲಿಷ್ ದಿನಪತ್ರಿಕೆಯನ್ನು ಖರೀದಿ ಮಾಡಿದೆ. ಐಗುಪ್ತ ದೇಶದ ಹಣಕಾಸಿನ ಪರಿಚಯವಿಲ್ಲದಿದ್ದುದರಿಂದಲೂ, ನಮ್ಮ ಮಾರ್ಗದರ್ಶಕನಿಂದ ಬಸ್ಸಿಗೆ ತುರ್ತು ಆಮಂತ್ರಣ ಬಂದುದರಿಂದಲೂ, ಪೌಂಡು ನೋಟಿಗೆ ಅವನು ಕೊಟ್ಟಷ್ಟು ಇಜಿಪ್ಶಿಯನ್ ಚಿಲ್ಲರೆಯನ್ನು ತೆಗೆದುಕೊಂಡು ಪೇಪರು ಸಹಿತ ಬಸ್ಸು ಹತ್ತಿದೆ. ಬಸ್ಸು ಹೊರಟ ಮೇಲೆ ಮಾರ್ಗದರ್ಶಕನಿಂದ ಒಂದು ಇಂಗ್ಲಿಷ್ ಪೌಂಡಿಗೆ ೨೫ "ಪಿಯಾಸ್ತ್ರೆ" ಎಂಬುದನ್ನು ತಿಳಿದುಕೊಂಡು ನನ್ನ ಬಳಿಯಿದ್ದ "ಪಿಯಾಸ್ತ್ರೆಗಳನ್ನು" ಎಣಿಸಿದರೆ ನಾನು ಆ ಪೇಪರಿಗೆ ಐದು ರೂಪಾಯಿಯಷ್ಟು ಬೆಲೆ ತೆತ್ತೆನೆಂದು

ಗೊತ್ತಾಯಿತು. ಅಷ್ಟು ಹೊತ್ತಿಗೆ ಬಸ್ಸು ಸುಯೇಜ್ ಪಟ್ಟಣವನ್ನು ಬಿಟ್ಟು ಕೈರೋ ಕಡೆಗೆ ಮರುಳುಗಾಡಿನ ಮಧ್ಯೆ ಓಡುತ್ತಿತ್ತು. ಚಿಂತಿಲ್ಲ. ಹಿಂದೂಸ್ಥಾನದ ಪರಿಸ್ಥಿತಿಯನ್ನು ತಿಳಿದುಕೊಳ್ಳಲು ಐದು ರೂಪಾಯಿ (ಕೈ ಬಿಟ್ಟ ಮೇಲೆ) ಅಷ್ಟೇನೂ ಹೆಚ್ಚಲ್ಲವೆಂದು ಸಮಾಧಾನದಿಂದ ಇನ್ನು ಪೇಪರು ಓದೋಣ ಎಂದು ತೆಗೆದೆ. ಅದರಲ್ಲಿ ನಾನು ಮುಂಬಯಿಯಲ್ಲಿ ಓದಿದ ನೆಹರೂ ಹೇಳಿಕೆ ಮೊದಲ ಪುಟದಲ್ಲಿ ಸಂಗ್ರಹ ರೂಪದಲ್ಲಿ ಪ್ರಕಟವಾಗಿತ್ತು. ಆಗ ಪೇಪರಿನ ದಿನಾಂಕದ ಬಗ್ಗೆ ಸಂದೇಹ ಬಂದು ಶೀರ್ಷಿಕೆಯತ್ತ ಕಣ್ಣುತಿರುಗಿಸಿದರೆ ಅದು ೨೦ನೆ ತಾರೀಕಿನ ಪತ್ರಿಕೆಯಾಗಿರದೆ ೧೧ನೆಯ ತಾರಿಕೀನ 'ಗಜೇಟ್' ಆಗಿತ್ತು!

ಪ್ರವಾಸಿ ಬಸ್ಸಿನಲ್ಲಿ ಕೈರೋ ಸಂದರ್ಶನಕ್ಕೆ "ರೋಮಾ"ದಿಂದ ೩೫ ಜನ ಪ್ರವಾಸಿಗಳು ಹೊರಟಿದ್ದರು. ನನ್ನ ಜೊತೆಗೆ ಹಡಗಿನ ಸುಮಾರು ೯೦ ಮೈಲು ಉದ್ದಕ್ಕೂ ಕಂಪೆನಿಯ ಮಾರ್ಗದರ್ಶಕನು ಸುತ್ತಲಿನ ಮರಳುಗಾಡನ್ನು ಬಣ್ಣಿಸುತ್ತಿದ್ದನು. ಕೈರೋ ಮುಟ್ಟುವ ವರೆಗೂ ಮರುಭೂಮಿ ಮುಗಿಯಲಿಲ್ಲ. ನಮಗೆ ಹತ್ತಿಪ್ಪತ್ತು ಮೈಲುಗಳ ಅಂತರದಲ್ಲಿ ಐಗುಪ್ತದ ಸೈನಿಕ ಠಾಣ್ಯ ಕಂಡುಬರುತ್ತಿತ್ತು. ಐಗುಪ್ತದ ಜನತಾ ಕ್ರಾಂತಿ ನಡೆದು ಆರೇಳು ವರ್ಷ ಆಗಿತ್ತಾದ್ದರಿಂದ ರಾಜಕೀಯದಲ್ಲಿ ಸೈನ್ಯದ ಪ್ರಭುತ್ವ ಅನಿವಾರ್ಯವಾಗಿತ್ತು. ಕೈರೋ ನಗರದ ನೀಲನದಿಯ ಪಕ್ಕದಲ್ಲೇ ಇರುವ "ನೈಲ್ ಹಿಲ್ಟನ್" ಹೋಟೆಲಿನ ಜಾಹೀರಾತು ಪ್ರವಾಸಿಗಳನ್ನು ಕೂಗಿ ಕರೆಯುವಂತಿತ್ತು. ಆದರೆ ನಮಗೆ ಉಪಚಾರ ನಡೆಯಬೇಕಾದದ್ದು ಬೇರೊಂದು ಹೋಟೆಲಿನಲ್ಲಿ. ಅಲ್ಲಿ ಚಹ ಕುಡಿದು ಮತ್ತೆ ಬಸ್ಸು ಹತ್ತಿ ಮಾರು ದೂರದಲ್ಲಿದ್ದ ರಾಷ್ಟ್ರೀಯ ವಸ್ತು ಸಂಗ್ರಹಾಲಯವನ್ನು ನೋಡಲು ಹೋದೆವು. ಐಗುಪ್ತದ ಪ್ರಾಚೀನ ಇತಿಹಾಸದ ಸಾರ್ವಭೌಮರೂ, ಚಕ್ರವರ್ತಿನಿಯರೂ ಸದೇಹರಾಗಿ ತಮ್ಮ 'ಮಮ್ಮಿ'ಗಳಾಗಿ ವೈಭವದ ಕಥೆಯನ್ನು ಅಲ್ಲಿ ಸಾರುತ್ತಿದ್ದರು. ಐಗುಪ್ತದ ಆಧುನಿಕ ಪ್ರಜೆಗಳಿಗೂ, ಅವರ ಸಂಸ್ಕೃತಿಗೂ ಮತ್ತು ಆ ದೇಶದ ಪ್ರಾಚೀನ ಇತಿಹಾಸಕ್ಕೂ ಯಾವ ತೆರನ ಸಂಬಂಧವೂ ಈಗ ಇಲ್ಲವಾಗಿದೆ. ೫೦೦೦ ವರ್ಷಗಳ ಹಿಂದೆ ಆಳಿದ ಚಕ್ರವರ್ತಿಗಳ ಕಥೆಯನ್ನು ಎತ್ತಿ ಹೇಳಲು ಎತ್ತರವಾಗಿ ನಿಂತಿರುವ ಪಿರೆಮಿಡ್ಡುಗಳು, ದೆವ್ವದಂಥ ಶಿಲಾಮೂರ್ತಿಗಳು (Sphinx) ಅರಬ್ ಗಣ

ರಾಜ್ಯದ ಮರುಭೂಮಿಯಲ್ಲಿ ಸರ್ವತ್ರ ವ್ಯಾಪಿಸಿವೆ. ಕೈರೋ ನಗರದ ಹೊರವಲಯದಲ್ಲಿರುವ 'ಗಿಜೇ' ಎಂಬಲ್ಲಿನ ಪಿರಮಿಡ್ಡು ಪ್ರವಾಸಿಗಳನ್ನು ಕೈಬೀಸಿ ಕರೆಯುತ್ತದೆ. ಗಿಜೇ ಪಿರಮಿಡ್ಡಿನ ಗುಡ್ಡದ ಬುಡದಲ್ಲಿ ಒಂಟೆಗಳ ಸಾಲು ಸ್ವಾಗತಕ್ಕೆ ನಿಂತಿರುತ್ತದೆ. ಎರಡು ಶಿಲ್ಲಿಂಗು ತೆತ್ತು ಒಂಟೆಯ ಮೇಲೆ ಕೂತು ಗಿಜೇ ಪಿರಮಿಡ್ಡಿನ ದ್ವಾರದ ವರೆಗೆ ಪಯಣಿಸುವ ಆಕರ್ಷಣೆಯನ್ನು ನಿವಾರಿಸಲು ಯಾರಿಗೆ ಸಾಧ್ಯ? ಸರ್ಕಸ್ಸಿನಲ್ಲಿ ಮಾತ್ರ ಒಂಟೆಗಳನ್ನು ನೋಡಿರುವ ದಾಕ್ಷಿಣಾತ್ಯನಾದ ನನಗೆ ಒಂಟೆಸವಾರಿ ಒಂದು ಹೊಸ ಮೋಜು: ಸವಾರಿಗೆ ಮುನ್ನ ಆ ಪ್ರಾಣಿಯ ಬೆನ್ನ ಮೇಲೇರಿ ಕೊಳ್ಳುವುದಂತೂ ವಿಚಿತ್ರ ಅನುಭವ. ಒಂಟೆ ಕಾಲುಗಳನ್ನು ಮಡಚಿ ಕೂತಾಗ ನಾವು ಅದನ್ನು ಏರಿ ಕತ್ತಿಗೆ ಕಟ್ಟಿರುವ ಒಂದು ಗೂಟಕ್ಕೆ ಆತುಕೊಂಡ ಮೇಲೆ ಒಂಟೆ ಎದ್ದು ನಿಲ್ಲುವುದು. ಆಗ ಒಮ್ಮೆ ನಮ್ಮನ್ನು ಹಿಂದಕ್ಕೂ, ಆಮೇಲೆ ಮುಂದಕ್ಕೂ ತಳ್ಳಿದಂತೆ ಭಾಸವಾಗುವುದು. ಗಾಬರಿಯಿಂದ ಎಲ್ಲಾದರೂ ಕೈ ತಪ್ಪಿದರೆ ಹತ್ತಡಿ ಪತನ ಸಂಭವದಿಂದ ಸವಾರಿ ಆಭಾಸವೂ ಆದೀತು. ಒಂಟೆಗಳ ಕಾರವಾನ್ ನನ್ನನ್ನು ಹೊತ್ತು ಮುಂದೆ ಸರಿಯುತ್ತಿದ್ದಂತೆ ಫೋಟೊ ಗ್ರಾಫರನೊಬ್ಬ ಒಂಟೆ ನಿಲ್ಲಿಸಿ ನಮ್ಮ ಫೋಟೊ ತೆಗೆದುಕೊಂಡ. ಒಂಟೆಯ ಮಾಲಕನೂ ಅದರ ಜತೆಗೆನೆ ಗುಡ್ಡದ ವರೆಗೆ ಓಡಿ ಬರುತ್ತಿದ್ದ. ಅವನ ಕೈಯಲ್ಲಿ ನನ್ನ ಕೆಮರಾ ಕೊಟ್ಟು ಒಂದು ಫೋಟೊ ತೆಗೆಸಿದೆ. ಪಿರೆಮಿಡ್ಡಿನ ಬಾಗಿಲಲ್ಲಿ ಎಲ್ಲ ಒಂಟೆಗಳೂ ಬಂದು ನಿಂತ ಮೇಲೆ ಒಬ್ಬ ಮಾರ್ಗದರ್ಶಕ ನಮಗೆ ಗಂಟುಬಿದ್ದ. ಅವನ ಹಿಂದೆ ನಾವು ದ್ವಾರ ಪ್ರವೇಶ ಮಾಡಿ ಪಿರೆಮಿಡ್ಡಿನೊಳಗೆ ನುಗ್ಗಿದೆವು. ಸುಮಾರು ನೂರಿನ್ನೂರು ಗಜ ಕಳೆದ ಮೇಲೆ ತಲೆಯನ್ನು ತಗ್ಗಿಸಿ, ಬೆನ್ನು ಬಗ್ಗಿಸಿ ನಡೆಯಬೇಕು. ಇಪ್ಪತ್ತು ಮಿನಿಟುಗಳ ಆರೋಹಣದ ತರುವಾಯ ಪಿರಮಿಡ್ಡಿನ ನೆತ್ತಿಯನ್ನು ಮುಟ್ಟಿದರೆ ಅಲ್ಲಿ ಒಂದು ಕೊಠಡಿ ಕಾಣಸಿಗುತ್ತದೆ. ಅದು ಚಕ್ರವರ್ತಿಗಳ ಶವವನ್ನು ಸಂರಕ್ಷಿಸಿಡುತ್ತಿದ್ದ ಸ್ಥಳವಂತೆ. ಆದರೆ 'ಗಿಜೇ' ಪಿರೆಮಿಡ್ಡಿನೊಳಗೆ ಮಾತ್ರ ಈಗ ಇಂಥ ಶವ (ಮಮ್ಮಿ) ಇಲ್ಲ. ಅನೇಕ ಮಮ್ಮಿಗಳನ್ನು ನೋಡುವ ಅವಕಾಶ ನಮಗೆ ಕೈರೋದ ವಸ್ತು ಸಂಗ್ರಹಾಲಯದಲ್ಲಿ ಮಾತ್ರ ದೊರೆಯಿತು. ಒಬ್ಬ ಫಾರೋನಿಗೆ ಮಾಡಿಸಿದ ಚಿನ್ನದ ಪೆಟ್ಟಿಗೆಯಲ್ಲಿ ೧೮೦ ಕಿಲೋ ಚಿನ್ನ ಇರುವುದಂತೆ. ವಸ್ತುಸಂಗ್ರಹಾಲಯದೊಳಗೆ

ಮಾತ್ರ ಐಗುಪ್ತದ ಪ್ರಾಚೀನ ಇತಿಹಾಸದ ದರ್ಶನ, ಹೊರಗೆ ಬಂದು ನೋಡಿದರೆ ಎಲ್ಲಿ ಕಂಡರೂ ಅರಬರ ಜನಜಂಗುಳಿ. ನಾವು ಚಹ ಕುಡಿಯಲು ತೆರಳಿದ ಕಾಂಟಿನೆಂಟಲ್ ಸವೋಯ್ ಹೋಟೆಲಿನ ಮಾಣಿಗಳು (ನಿಜಕ್ಕೂ ಅವರು ಗೋಣಿಗಳು!) ಉದ್ದ ನಿಲುವಂಗಿಯನ್ನು ತೊಟ್ಟು, ಹಳೆಯ ಫೆಜ್ ಟೋಪಿಯನ್ನು ಧರಿಸಿದ ಧಡೂತಿ ಆಸಾಮಿಗಳು. ಚಹ ಮುಗಿಸಿದ ಮೇಲೆ ನಮ್ಮ ಮಾರ್ಗದರ್ಶಕ ಅಲ್ಲಿನ ಒಂದು ಅತ್ತರಿನ ಅಂಗಡಿಗೆ ನಮ್ಮನ್ನು ಕರೆದೊಯ್ದ. ಅತ್ತರಿನ ಬಗ್ಗೆ ಅಂಗಡಿಯವನು ಒಂದು ದೊಡ್ಡ ಉಪನ್ಯಾಸವನ್ನು ಬಿಗಿದರೂ ನಮ್ಮ ಪಂಗಡದ ಐರೋಪ್ಯ ಮಹಿಳೆಯರ ಮನಸ್ಸು ಕರಗಿದಂತೆ ತೋರಲಿಲ್ಲ. ಕೆಲವೇ ಮಿನಿಟುಗಳಲ್ಲಿ ಅಲ್ಲಿಂದ ಹೊರಬಿದ್ದ ನಾವು ಇನ್ನೊಂದು ಸೊವನೀರ್ ಅಂಗಡಿಯನ್ನು ಹೊಕ್ಕೆವು. ಪ್ರತಿಯೊಂದು ವಸ್ತುವಿಗೂ ಹಚ್ಚಿದ ಬೆಲೆ ನೋಡಿದರೆ ಅಮೇರಿಕನ್ ಪ್ರವಾಸಿಗಳನ್ನೇ ದೃಷ್ಟಿಯಲ್ಲಿರಿಸಿಕೊಂಡ ಹಾಗೆ ತೋರತ್ತಿತ್ತು. ಸವೋಯ್ ಹೋಟೆಲಿಗೆ ಮರಳಿದಾಗ ಪಿರೆಮಿಡ್ಡಿನ ಬಳಿ ನಮ್ಮನ್ನು ಸಂಧಿಸಿದ ಫೊಟೊಗ್ರಾಫರ ನಮ್ಮ ಚಿತ್ರವನ್ನು ಹಿಡಿದುಕೊಂಡು ಕಾಯುತ್ತಿದ್ದ. ಅವನಿಗೆ ಐದು ಶಿಲಿಂಗ್ ದಂಡ ತೆತ್ತುದಾಯಿತು. ನಮ್ಮ ಗುಂಪಿನ ಇತರರು ಬರುವ ತನಕ ಹೋಟೆಲಿನ ಪಕ್ಕದ ಬೀದಿಗಳಲ್ಲಿ ಕೊಂಚ ಅಲೆದಾಡಿ ಬರೋಣ ಎಂದುಕೊಂಡೆ. ಅಲ್ಲಿನ ಜನಸಂದಣಿ, ಮಾರ್ಕೆಟುಗಳ ಓರಣ, ವಾಹನಗಳ ದ್ರುತ ಸಂಚಾರ, ಇಕ್ಕೆಲದಲ್ಲಿ ನಿಂತಿರುವ ಗಗನಚುಂಬಿ ಕಟ್ಟಡಗಳು ಇವೆಲ್ಲ ಆಧುನಿಕ ಅರಬ್ ಗಣರಾಜ್ಯಕ್ಕೂ, ಯುರೋಪಿಯನ್ ನಗರಗಳಿಗೂ ಇರುವ ಸಾಮ್ಯವನ್ನು ಸ್ಪಷ್ಟಗೊಳಿಸುತ್ತಿದ್ದವು. ಯುರೋಪಿಯನ್ ಜನರಿಗೆ ಮಧ್ಯಪೂರ್ವ (ನಮಗೆ ಮಧ್ಯ-ಪಶ್ಚಿಮ)ವೆಂದು ಭಾಸವಾಗುವ ಈ ಭೌಗೋಲಿಕ ಪರಿಸರದಲ್ಲಿ ಜನಜೀವನದ ಸಂಘಟನೆಯನ್ನು ಪಶ್ಚಿಮದ ರಾಷ್ಟ್ರಗಳ ಮಾದರಿಯಲ್ಲಿ ನಡೆಸಬೇಕೆಂದು ಸಂಯುಕ್ತ ಅರಬ್ ಗಣರಾಜ್ಯವು ಹೆಣಗುವಂತಿತ್ತು.

ನಾಲ್ಕು ಗಂಟೆಯ ಸುಮಾರಿಗೆ ನಮ್ಮ ಬಸ್ಸು ಪೋರ್ಟ್‌ಸೈಯದ್ ಕಡೆಗೆ ಹೊರಟಿತು. ದಾರಿಯ ಒಂದು ಚಿಕ್ಕ ಹಳ್ಳಿಯಲ್ಲಿ ಊಟದ ಶಾಸ್ತ್ರವನ್ನು ಮುಗಿಸಿದೆವು. ರಾತ್ರಿಯೆಲ್ಲ ಸುಯೇಜ್ ಕಾಲುವೆಯ ದಂಡೆಗುಂಟ ನಮ್ಮ ದಾರಿಯೂ ಸಾಗುತ್ತಿತ್ತು. ಪ್ರತಿ ಮೂರು ನಾಲ್ಕು ಮೈಲಿಗೊಮ್ಮೆ ನಮ್ಮನ್ನು ನಿಲ್ಲಿಸಿ ವಿಚಾರಣೆ ನಡೆಸುತ್ತಿದ್ದರು. ಒಂದು ನಿಮಿಷದ ನಿಲುಗಡೆ:

"ತಲ್ಯಾತೀ ಸುಯೇಜ್" ಎಂದು ನಮ್ಮ ಮಾರ್ಗದರ್ಶಕನು ಹೇಳುವುದೇ ತಡ ದಾರಿಯ ಗೇಟು ತೆಗೆದುಕೊಡುತ್ತಿದ್ದರು. ಬಸ್ಸಿನ ದೀಪದ ಉಜ್ವಲ ಪ್ರಕಾಶಕ್ಕೆ ಕಾಲುವೆಯ ದಡದ ನೀಳವಾದ ಗರಿಕೆಹುಲ್ಲು ಸುಂದರವಾಗಿ ಗೋಚರಿಸಿದರೆ, ಆ ಹುಲ್ಲಿನ ನಡುವೆ ಪ್ರತಿ ಫರ್ಲಾಂಗಿಗಿಬ್ಬರಂತೆ ಶಸ್ತ್ರ ಸಜ್ಜಿತರಾದ ಸೈನಿಕರು ಕಾಲುವೆಯನ್ನು ಕಾಪಾಡುವ ದೃಶ್ಯ ಈಗ ನೆನಪಿಗೆ ಬರುತ್ತಿದೆ. ಕಾಲುವೆಯಲ್ಲಿ ಒಂದು ಕಡೆ ಹತ್ತು ಹನ್ನೆರಡು ಹಡಗುಗಳು ದೀಪಾಲಂಕಾರ ಸಹಿತವಾಗಿ ಮದುಮಕ್ಕಳಂತೆ ತೇಲಿಕೊಂಡು ಬರುತ್ತಿದ್ದ ನೋಟವಂತೂ ಚಿರಸ್ಮರಣೀಯವಾದ್ದು. ಹತ್ತು ಗಂಟೆಯ ಸುಮಾರಿಗೆ ನಾವು ಪೋರ್ಟ್ ಸಯ್ಯದ್ ಬಂದರ ಕಟ್ಟೆಯನ್ನು ಮುಟ್ಟಿದೆವು. ಅಲ್ಲಿಂದ ನೇರವಾಗಿ ನಮ್ಮ ಹಡಗವನ್ನು ಸೇರಿಕೊಳ್ಳಬೇಕೆಂದು ಹವಣಿಸಿದರೆ 'ರೋಮಾ' ಎಲ್ಲೆಲ್ಲೂ ಕಾಣಿಸದು. ಒಂದಾನೊಂದು ಹೋಟೆಲನ್ನು ಹೊಕ್ಕು ಬೀರು ಕುಡಿಯುವವರು ಬೀರು, ನೀರು ಕುಡಿಯುವವರು (ನನ್ನಂಥ ವರು) ನೀರು ಕುಡಿಯೋಣ ಎಂದರೆ ರಾತ್ರಿ ಎರಡು ಗಂಟೆಗೆ ದಾರಿಯಲ್ಲಿ ಮಂಜು ಮುಸುಕಿದ ದೆಸೆಯಿಂದ ಮುಂಜಾನೆಯ ಸುಮಾರಿಗೆ ಹಡಗು ಪೋರ್ಟ್ ಸಯ್ಯದನ್ನು ತಲುಪೀತೆಂಬ ಸುದ್ದಿ ಸಿಕ್ಕಿತು. ಆ ಅಪರಾತ್ರಿಗೂ ನಮ್ಮನ್ನು ಒಂದು ಕಾಂಟಿನೆಂಟಲ್ ಹೋಟೆಲಿಗೆ ಸಾಗಿಸಿದರು. ಅಲ್ಲಿ ಮೂವತ್ತು ಜನರ ಪಾಸ್‌ಪೋರ್ಟ್ ತಪಾಸಣೆ ನಡೆಸಿದ ಮೇಲೆಯೇ ನಮ್ಮ ಕೊಠಡಿಗೆ ಹೋಗಲು ಅನುಮತಿ ದೊರೆಯಿತು. ಅಧ್ಯಕ್ಷ ನಾಸೆರರ ಜಾಗ್ರತ ಐಗುಪ್ತದ ಧೋರಣೆಯಿಂದ ನಮಗೆ ಆ ರಾತ್ರಿ ಜಾಗರವೇ ಆಯಿತು. ಮುಂಜಾನೆ ಏಳಕ್ಕೆ ಎದ್ದು ಹೊರಗೆ ಕತ್ತು ಚಾಚಿದರೆ ಹೋಟೆ ಲಿನ ಕೊಠಡಿಯ ಪಕ್ಕದಲ್ಲೇ ರೋಮಾ ಲಂಗರು ಹಾಕಿ ನಿಂತಿತ್ತು. ಅವಸರ ದಿಂದ ಮುಖ ತೊಳೆದು ಹಡಗಿನ ನಮ್ಮ ಕೇಬಿನ್ ಸೇರಿದೆವು.

## ೦ ೦ ಭೂಮಧ್ಯ ಸಾಗರ

ಒಂಭತ್ತು ಗಂಟೆಯ ಸುಮಾರಿಗೆ ರೋಮಾ ಭೂಮಧ್ಯಸಾಗರವನ್ನು ಪ್ರವೇಶಿಸಿತು. ಮುಂದಿನ ಮೂರು ದಿನದ ಪ್ರವಾಸವು ಅಷ್ಟು ಸುಖಕರ

ವಾಗಿರಲಿಲ್ಲ. ಹಿಂದೂಸಾಗರದಲ್ಲಿ ಹಂಸಪಕ್ಷಿಯಂತೆ ತೇಲಿ ಬಂದ ರೋಮಾ ಭೂಮಧ್ಯಸಾಗರದ ಅಲೆಗಳ ಹೊಡೆತಕ್ಕೆ ತಾಳಹಾಕಿ ನರ್ತಿಸಲು ತೊಡ ಗಿತು. ಲೌಂಜಿನ ಜನಸಂದಣಿ ಬರಬರುತ್ತ ವಿರಳವಾಯಿತು. ಎಲ್ಲಿ ನೋಡಿ ದರೂ ಪ್ರವಾಸಿಗಳು ಓಕರಿಕೆಯ ನೋವನ್ನು ನುಂಗಿಕೊಂಡೋ ಹೊರ ಗಿಕ್ಕಿಯೋ ದುಃಖ ಅನುಭವಿಸುವ ದೃಶ್ಯ. ಲೌಂಜಿನ ಉಲ್ಲಾಸಮಯ ವಾತಾವರಣ ಮಾಯವಾಗಿಬಿಟ್ಟಿತು. ನನ್ನ ಸ್ನೇಹಿತ ಸುಬ್ಬಯ್ಯ ಮೂರು ದಿನವೂ ರಜೆ ಹಾಕಿ ಕೆಬಿನ್‌ನಲ್ಲಿ ಅವಿತುಕೊಂಡ. ಊಟ ತಿಂಡಿ ಆವನಿಗೆ ಕೊಂಡೊಯ್ದು ಕೊಡುವುದು ನನ್ನ ಪಾಲಿನ ಕೆಲಸವಾಯಿತು. ಅದೂ ಅವನಿಗೆ ಇಚ್ಛೆಯಿರಲಿಲ್ಲ; ತಿಂದರೆ ವಾಂತಿಯ ಭೀತಿ. ವಾಂತಿಗೆ ಈಡಾಗದ ಕೆಲವೇ ಪ್ರವಾಸಿಗಳಲ್ಲಿ ನಾನೊಬ್ಬ ಹೇಗಾದೆನೆಂಬುದೇ ನನಗೆ ಆಶ್ಚರ್ಯ. ಪ್ರಾಯಶಃ ನಾವು ಉಡುಪಿಯ ಸಮೀಪದ ದರಿಯಾ ಬಹದುರಗಡ ಮತ್ತು ತೋನ್ಸೆ ಪಾರ ದ್ವೀಪಗಳಿಗೆ ವರ್ಷಂಪ್ರತಿ ವಿಹಾರಕ್ಕಾಗಿ ಹೋಗು ತ್ತಿದ್ದಾಗಿನ ಉಪ್ಪುನೀರಿನ, ಏರುಪೇರಿನ ಅನುಭವ ಈಗ ಪ್ರಯೋಜನಕ್ಕೆ ಬರುವಂತೆ ತೋರಿತು. ೨೩ನೇ ದಿನಾಂಕ ಸುಬ್ಬಯ್ಯ ಕೇಳಿದ, "ಹೀಗೆಯೇ ಇದ್ದರೆ ನನಗೆ ನಾಳೆ ನೇಪಲ್ಸಿನಲ್ಲಿ ಹಡಗು ಬಿಟ್ಟು ನಡೆಯಲು ಸಾಧ್ಯ ವಾದೀತೇ ?" ಅವನಿಗೆ ಧೈರ್ಯ ಹೇಳಿ ನಿತ್ಯದ ಭ್ರಮಣೆಗೆ ಹೊರಡು ವುದು ನನ್ನ ವಾಡಿಕೆಯಾಯಿತು. ವಾಂತಿ ಮಾಡದಿರುವ ಪುಣ್ಯಶಾಲಿ ಎಂಬ ಉಲ್ಲಾಸದಿಂದ ಮೆಸ್ಸಿನಾದ ನಮ್ಮ ಪ್ರಥಮ ಐರೋಪ್ಯ ನಿಲುಗಡೆಗಾಗಿ ಕಾಯುತ್ತಿದ್ದೆ. ರಾತ್ರಿ ಎಂಟು ಗಂಟೆಗೆ ಸರಿಯಾಗಿ ಹಡಗು ಮೆಸ್ಸಿನಾ ಬಂದರಿನಲ್ಲಿ ಲಂಗರು ಹಾಕಿತು. ನನ್ನ ಯುರೋಪ್ ಸಂದರ್ಶನದ ಮೊದಲ ನಿಲುಮನೆ ಮೆಸ್ಸಿನಾ. ಇತಾಲಿಯದ ಕಿರುಬೆರಳಿನ ತುತ್ತತುದಿ ಯಲ್ಲಿರುವ ಸಿಸಿಲಿ ದ್ವೀಪದ ಒಂದು ನಗರ. ಬಂದರಿನಲ್ಲಿ ನಮ್ಮ ಸ್ವಾಗತಕ್ಕೆ ಕಾದು ನಿಂತ ಇತಾಲಿಯನ್ ಜನಸಮುದಾಯವನ್ನು ನೋಡಿ ಆಶ್ಚರ್ಯ ವಾಯಿತು. ಆದರೆ ಅವರ ಕೈಯಲ್ಲಿದ್ದ ಗೊಂಬೆಗಳನ್ನು ಕಂಡಮೇಲೆ ನಮ್ಮ ಕಿಸೆಯ ಮೇಲೆ ಕಣ್ಣಿಟ್ಟ ವರ್ತಕರು ಇವರು ಎಂಬ ತಿಳಿವು ಮೂಡಿತು. 'ಬಂಬೋಲಾ', 'ಬಂಬೋಲಾ' (ಬೊಂಬೆ) ಎಂದು ಅವರು ಬೊಬ್ಬಿರಿ ಯುತ್ತಿದ್ದಂತೆ, ಆ ನಾದ ಮಧ್ಯದಲ್ಲಿಯೇ ಈಸಿಕೊಂಡು ನಾವು ಪಾರಾದೆವು. ಊರೊಳಗಿನ ರೆಸ್ಟೋರೆಂಟಿಗೆ ಹೋಗಿ, ಹಚ್ಚಹೊಸ ಕಾಫಿ ಕುಡಿದು

ತುಸು ಹೊತ್ತು ಅಲೆದಾಡಿ ಹಡಗಿಗೆ ಮರಳಿದಾಗ ನನಗೊಂದು ಸಂದೇಶ ಕಾದಿತ್ತು: ಇತಾಲಿಯನ್ ವಿದೇಶಾಂಗ ಸಚಿವ ಖಾತೆಯಿಂದ ಬಂದಿರತಕ್ಕ ಈ ಸಂದೇಶವನ್ನು ಗೌರವಪೂರ್ವಕವಾಗಿ ನನಗೆ ಉಸುರಲಾಯಿತು: "ನಾಳೆ ನಾಪೋಲಿಯಲ್ಲಿ (ನೇಪಲ್ಸ್) ಹಡಗಿನ ಪ್ರಥಮ ವರ್ಗದ ಲೌಂಜಿನಲ್ಲಿ ಅ್ಯಡ್ಮಿರಲ್ ವಿಯೋದಿಲಾ ಮತ್ತು ಇಂಜಿನೀರ್ ಬೊನೆಯೋ ನಿಮಗಾಗಿ ಕಾದಿರುತ್ತಾರೆ–ಸುಸ್ವಾಗತ" ಅರೆತ್ರಾಣ ಸುಬ್ಬಯ್ಯನಿಗೆ ಧೈರ್ಯ ಹೇಳಿದೆ: "ಇತಾಲಿಯನ್ ಸರ್ಕಾರ ನಿನ್ನನ್ನು ಸ್ಟ್ರೆಚರಿನಲ್ಲಿಟ್ಟಾದರೂ ಸ್ವಾಗತಿಸಿಯಾರು" ಎಂದೆ. ಆ ರಾತ್ರಿ ಹಡಗು ಮೆಸ್ಸಿನಾ ಜಲಸಂಧಿಯನ್ನು ದಾಟಿ ನಾಪೋಲಿಯ ತನಕವೂ ಒರಳುಗಲ್ಲಿನಂತೆ ಹುಚ್ಚು ಹಿಡಿದಂತೆ ತಿರುಗುತ್ತಾ, ತಿರುಗುತ್ತಾ ಸಾಗಿತು. ಆದರೂ ನನ್ನನ್ನು ಕರೆದ ಇಟಲಿ ಸಮೀಪಿಸಿತೆಂದೇನೋ ನನಗೆ ಆ ರಾತ್ರಿ ಭಾರೀ ನಿದ್ರೆ ಆವರಿಸಿತು. ೨೪ನೇ ತಾರೀಕು ಮುಂಜಾನೆ ಏಳಕ್ಕೆ ನಾಪೊಲಿಯ ಕೊಲ್ಲಿಯನ್ನು ರೋಮಾ ಮಂದಗತಿಯಿಂದ ಪ್ರವೇಶಿಸಿತು.

## ೦ ೦ ನಾಪೋಲಿ

ಇತಾಲಿಯನ್ ಭಾಷೆಯಲ್ಲಿ ಇಂಗ್ಲಿಷಿನ ನೇಪಲ್ಸ್ ನಾಪೊಲಿ ಎಂದು ಕರೆಯಲ್ಪಡುತ್ತದೆ. ಪುಸ್ತಕದಲ್ಲಿ ಕಂಡ ಚಿತ್ರವೇ ಜೀವ ಪಡೆದಂತೆ ಮುಂಜಾವಿನ ಹೊಂಬಿಸಿಲಿಗೆ ನಾಪೊಲಿಯ ಹಿನ್ನೆಲೆಯಲ್ಲಿರುವ ವೆಸುವಿಯಸ್ ಪರ್ವತ ಕಾವಲು ನಿಂತಿತ್ತು. 'ರೋಮಾ'ದ ಸುತ್ತುಮುತ್ತಲೂ ಅಮೇರಿಕನ್ ನಾವಿಕ ಪಡೆಯ ಸಮರನೌಕೆಗಳು ಕವಾಯತಿಗೆ ಬಂದಿದ್ದವು. 'ನಾಟೊ' ಸಂಘಕ್ಕೆ ಸೇರಿದ ಇತಾಲಿಯನ್ ರೇವುಗಳನ್ನು ಆರು ತಿಂಗಳಿಗೊಮ್ಮೆ ಅಮೇರಿಕನ್ ಪಡೆಗಳು ಸಂದರ್ಶಿಸುವುದು ಸಾಮಾನ್ಯ ರೂಢಿಯಂತೆ. ಈ ಸಮರನೌಕೆಗಳ ಪ್ರಬಲ ಸಂರಕ್ಷಣೆಯಲ್ಲಿ ಆರು ತಿಂಗಳು ಧೈರ್ಯವಾಗಿ ಕಾಲ ಕಳೆಯಲು ಕಷ್ಟವಾಗಲಾರದು ಎಂದು ನಾನೆಣಿಸುತ್ತಿದ್ದಂತೆ ರೋಮಾ ಧಕ್ಕೆಯ ಬಳಿ ವಿರಮಿಸಿತು. ಮುಂದಿನ ಎರಡು ಮಿನಿಟಿನೊಳಗೆ ನಾನು ಕೈಚೀಲವನ್ನು ಹಿಡಿದು ಸುಬ್ಬಯ್ಯನನ್ನು ಎಳೆದುಕೊಂಡು ಪ್ರಥಮ

ವರ್ಗದ ಲೌಂಜಿಗೆ ತೆರಳಿದೆ. ಸಕಲ ಪ್ರಯಾಣಿಕರು ನಾಪೊಲಿ ಸಂದರ್ಶನಕ್ಕೆ ಉತ್ಸುಕರಾಗಿ ಗುಂಪುಗುಂಪಾಗಿ ನಾನಾ ಭಾಷೆಗಳಲ್ಲಿ ಮಾತನಾಡುತ್ತಾ ಅಲ್ಲಿ ನಿಂತಿದ್ದರು. ಹಡಗಿನ ಪರ್ಸರ ನಮ್ಮನ್ನು ಗುರುತಿಸಿ ಸ್ವಾಗತಿಸಲು ಬಂದ. ವಿದೇಶಾಂಗ ಖಾತೆ ಮತ್ತು ಇನ್‌ಸ್ಟಿಟ್ಯೂಟಿನ ಪ್ರತಿನಿಧಿಗಳ ಭೇಟಿ ಮಾಡಿಸಿದ. ಆ್ಯಡ್ಮಿರಲ್ ವಿಯೋಲಾ 65 ಹರೆಯದ ವೃದ್ಧರು, ಅವರ ಬಳಿ ನಿಂತ ಇನ್‌ಸ್ಟಿಟ್ಯೂಟಿನ ಪ್ರತಿನಿಧಿ ಇಂಜನೀರ್ ಬೊನೆಯೋ ಮೂವತ್ತು ವರ್ಷದ ತರುಣ. ವಿಯೋಲಾ ಅವರ ಇತಾಲಿಯನ್ ಸ್ವಾಗತ ವನ್ನು ಬೊನೆಯೋ ಅವರದೇ ಇಂಗ್ಲಿಷಿನಲ್ಲಿ ಅನುವಾದಿಸುತ್ತಿದ್ದ. ನಾನೂ ಗಂಭೀರವಾಗಿ ಏನೋ ನಾಲ್ಕು ಮಾತು ನುಡಿದೆನೆಂದು ತೋರುತ್ತದೆ. ಮತ್ತೆ ಕೆಲವೇ ನಿಮಿಷಗಳಲ್ಲಿ ಏಣಿಯಿಂದ ಇಳಿದು ಕಸ್ಟಮ್ಸ್ ಸಂಪ್ರದಾಯ ವನ್ನು ತೀರಿಸಿ ನಾವು ಹೊರಬೀಳಬೇಕಾಗಿತ್ತು. ಆದರೆ ಹಡಗಿನ ಉಗ್ರಾಣ ದಲ್ಲಿದ್ದ ನನ್ನ ದೊಡ್ಡ ಟ್ರಂಕಿನ ಚಿಂತೆ ನನ್ನನ್ನು ಬಾಧಿಸುತ್ತಿತ್ತು. ಬೊನೆಯೊ, 'ಅದರ ಯೋಚನೆ ಬಿಡಿ, ಆಮೇಲೆ ಒಯ್ಯಬಹುದು' ಎಂದರೂ ನನಗೆ ಧೈರ್ಯವಿಲ್ಲ. ಆದರೆ ಹಡಗಿನ ಗರ್ಭದಿಂದ ಆ ಟ್ರಂಕು ಹೊರಗೆ ಬರುವಷ್ಟು ದೀರ್ಘ ಕಾಲ ನಮ್ಮ ಸ್ನೇಹಿತರು ಕಾಯುವಂತೆಯೂ ಇರಲಿಲ್ಲ. ಕೊನೆಗೆ ನಮ್ಮ ಕೈಚೀಲಗಳನ್ನಷ್ಟೇ ಉಪಚಾರಕ್ಕಾಗಿ ತೋರಿಸಿ ಕಸ್ಟಮ್ಸ್ ಹೊರಗಡೆ ನಮಗಾಗಿ ನಿಂತಿದ್ದ ಹೋಟೆಲಿನ ಕಾರಿನಲ್ಲಿ ಹೊರಟೆವು. ಪ್ರಾತಃಕಾಲ ವಾದರೂ ನಾಪೊಲಿಯಲ್ಲಿ ಜನಸಂಚಾರ ಆರಂಭವಾಗಿಬಿಟ್ಟಿತ್ತು; ಹಸುರು ಬಸ್ಸುಗಳ ಕರ್ಕಶವಾದ ಓಡಾಟವೂ ತೊಡಗಿತ್ತು. ನಮ್ಮ ಕಾರು ಹತ್ತು ಮಾರು ದೂರದ ಒಂದು ಪ್ಯಾಜ್ಜಾ ಚೌಕವನ್ನು ಸುತ್ತುವರಿದು ಗುಡ್ಡಗಳ ಅಗಲಕಿರಿದಾದ ದಾರಿಯನ್ನು ಏರಲು ತೊಡಗಿತ್ತು. ರಸ್ತೆಗೆ ಇಟ್ಟಿಗೆಯನ್ನು ಹಾಸಿದ್ದರು. ಪಕ್ಕದ ಕಾಲುದಾರಿಯಲ್ಲಿ ಮಾತ್ರವೇ ಸ್ತ್ರೀ ಪುರುಷರು ನಡೆದು ಕೊಂಡು ಬರುತ್ತಿದ್ದರು. 'ಲೇ ಫೋಂತಾನೇ' (ಅರ್ಥ – ಕಾರಂಜಿಗಳು) ಎಂಬ ಪೆನ್ಸಿಯೋನೆ ಬಳಿ ನನ್ನನ್ನು ಇಳಿಸಿದರು. ಆ ಗಳಿಗೆಗೆ ನಮ್ಮಿಬ್ಬ ರನ್ನು ಬೇರೆ ಬೇರೆ ಹೋಟೆಲುಗಳಲ್ಲಿ ಇರಿಸುವ ವ್ಯವಸ್ಥೆ ಮಾಡಿದಂತೆ ತೋರಿತು. ಇರುವೊಬ್ಬ ಸಂಗಾತಿಯೂ ಹೊರಟುಹೋಗುವನಲ್ಲಾ ಎಂದು ನನಗೆ ವ್ಯಥೆಯಾಗುತ್ತಿದ್ದಂತೆ ತನ್ನಿಂದ ತಾನೇ ಸಮಸ್ಯೆ ಬಗೆಹರಿ ಯಿತು. ಇನ್ನೊಂದು ಹೋಟೆಲಿನ ತನಕ ವೃಥಾ ಪಯಣಮಾಡಿ ವಿಚಾರಿಸಿ

ದರೆ ಸುಬ್ಬಯ್ಯನ ಹೆಸರು ಅಲ್ಲಿಯೂ ಬಿದ್ದಿರಲಿಲ್ಲ. "ನೋಡು, ನಿನ್ನನ್ನು ಇಲ್ಲಿಂದಲೇ ಹಿಂದೆ ಕಳಿಸುತ್ತಾರೆ" ಎಂದು ಚೇಷ್ಟೆ ಮಾಡಬೇಕೆಂಬ ಉತ್ಸಾಹವನ್ನು ಅದುಮಿ ಹಿಡಿದು ಆತನಿಗೆ ನಾನು ಸಮಾಧಾನ ಹೇಳ ಬೇಕಾಯಿತು. ಲೇ ಫೊಂತಾನೆ ಯಾದಿಯಲ್ಲಿ ಮತ್ತೊಮ್ಮೆ ಕಣ್ಣಿಟ್ಟು ಪರೀ ಕ್ಷಿಸಿದರೆ ಸುಬ್ಬಯ್ಯನಿಗೂ ನನಗೂ, ನನ್ನ ಹೆಸರಲ್ಲಿ ಒಂದೇ ಕೊಠಡಿ ನಿರ್ಣೀತವಾಗಿತ್ತು. ನಮಗಿಬ್ಬರಿಗೂ 'ವಿಶ್ರಾಂತಿ ತೆಗೆದುಕೊಳ್ಳಿ' ಎಂದು ನುಡಿದು, 'ಊಟದ ಹೊತ್ತು ಮತ್ತೆ ಭೆಟ್ಟಿಯಾಗುವ' ಎಂದು ವಿಯೊಲಾ ಮತ್ತು ಬೊನೆಯೋ ಹೊರಟುಹೋದರು.

## ೦ ೦ ವಿದೇಶದಲ್ಲಿ ಪ್ರಥಮ ದಿನ

ಪರಸ್ಥಳ ಎಂಬ ಶಬ್ದದ ನಿಜವಾದ ಅರ್ಥ ನಮಗಿಬ್ಬರಿಗೂ ಆಗತೊಡ ಗಿತು. ಒಂದು ಗಳಿಗೆ ಕೋಣೆಯ ಗಾಜಿನ ಕಿಟಕಿಯಿಂದ ಹೊರಗೆ ನೋಡಿದೆ. ಕ್ಷಣಾರ್ಧದಲ್ಲಿ ನಾಪೊಲಿ ದೃಷ್ಟಿಯಿಂದ ಮಾಯವಾಗಿ – ಸಗ್ರಿ, ಕುಂಜಿ ಬೆಟ್ಟು, ಕಾಲೇಜು, ಮನೆ, ಮಡದಿ, ತಂದೆ-ತಾಯಿ, ಮಕ್ಕಳು – ನಾನು ಹೊರಡುವಾಗ ತಾನೂ ಬರುತ್ತೇನೆಂದು ಅತ್ತ ಎರಡು ವರ್ಷದ ಚಿಕ್ಕಣ್ಣ – ಇವರ ನೆನಪಾಯಿತು. ಇನ್ನೊಂದು ಕಿಟಕಿಯ ಬಳಿ ಸುಬ್ಬಯ್ಯನೂ ಅದೇ ಜಾನದಲ್ಲಿದ್ದ. ಸಾವಿನ ಗಳಿಗೆಯನ್ನು ಎದುರು ನೋಡುತ್ತಿದ್ದ ತಂದೆತಾಯಿ, ಹೆರಿಗೆಗೆ ಹೊರಟಿದ್ದ ಹೆಂಡತಿ, ತಂದೆಯನ್ನು ಬಿಟ್ಟರಿಯದ ಪುಟ್ಟ ಮಕ್ಕಳು, ಚೀನೀಯರ ಆಕ್ರಮಣಕ್ಕೆ ತುತ್ತಾದ ದೇಶ – ಇವನ್ನೆಲ್ಲ ಬಿಟ್ಟು ಇಷ್ಟು ದೂರ ಯಾವುದೋ ಕನಸಿಗಾಗಿ ಬಂದೆನೇ ಎಂದು ನನ್ನ ಮನಸ್ಸು ಹೊಯ್ದಾಡುತ್ತಿತ್ತು. ಅನತಿ ಕಾಲದಲ್ಲಿ ಮನೆಯ ಸ್ಮರಣೆಯನ್ನು ಹಿಂಜರಿ ಸುವಂತೆ ವಾತಾವರಣದ ಮಂಜು ಕರಗಿ ಮುಂದುಗಡೆ ನಾಪೊಲಿ ಕೊಲ್ಲಿಯ ವಿಶಾಲವಾದ ನೀಲ ಸಾಗರದ ಹರವು ಗೋಚರವಾಯಿತು. ಆ ಸುಂದರ ಸಾಗರದ ತರಂಗಗಳ ಬೆನ್ನು ಹಿಡಿದು ಮತ್ತೊಮ್ಮೆ ಮನಸ್ಸು ಮುಂಬಯಿ ವರೆಗೆ ಈಸಾಡಿ ಸಂಚರಿಸಿ ಮರಳಿತು. 'ಇನ್ನೇನು?' ಎಂದು ನಾನೂ ಸುಬ್ಬಯ್ಯನೂ ನಮ್ಮ ನಮ್ಮ ಮಂಚದ ಮೆತ್ತೆಯ ಮೇಲೆ ಆಸೀನರಾಗಿ ಮುಂದಿನ ಕಾರ್ಯಕ್ರಮವನ್ನು ಯೋಚಿಸಲು ತೊಡಗಿದೆವು.

ಮೊದಲಾಗಿ ಗುರಿ ಮುಟ್ಟಿದ್ದೇನೆನ್ನುವುದನ್ನು ಮನೆಗೆ ತಿಳಿಸಲು ಆವಶ್ಯಕವಾದ ಪತ್ರ ಲೇಖನಕ್ಕೆ ತೊಡಗಿದೆ; ಅದಕ್ಕೆ ಬೇಕಾದ ಅಂಚೆ ಚೀಟಿನ ಶೋಧಕ್ಕೆ ಹೊರಟೆ. ಪಕ್ಕದ ಕಿರಾಣಿ ಅಂಗಡಿಗೆ ಹೋಗಿ ಇತಾಲಿ ಯದ ನಿಘಂಟಿನಿಂದ ಹುಡುಕಿ ತೆಗೆದೆ. ಫ್ರಾಂಕೊಬೊಲ್ಲಿ (– ಅಂಚೆ ಚೀಟು) ಎಂಬ ಪ್ರಥಮ ಇತಾಲಿಯನ್ ಭಾಷಾ ಪ್ರಯೋಗ ನಡೆಸಿದೆ. ಪ್ರಯೋಗ ಯಶಸ್ವಿಯಾಯಿತು. ಒಂದಷ್ಟು ಅಂಚೆಚೀಟು ತಂದು ಹೋಟೆಲಿನ ಜೊಸೆಪ್ಪೆಯನ್ನು ಕೇಳಿ ಪತ್ರವನ್ನು ರವಾನಿಸಿದ ಮೇಲೆ ಮನಸ್ಸು ಶಾಂತ ವಾಯಿತು. ಕಿರಾಣಿ ಅಂಗಡಿಯಿಂದ ಬರುತ್ತಾ ನನ್ನ ಆರು ತಿಂಗಳ ಮನೆ ಯಾಗಲಿದ್ದ 'ಲೇ ಫೊಂತಾನೆ' ಕಡೆ ದೃಷ್ಟಿ ಬೀರಿದೆ. ಅದು ಒಂದು ಹಳೆಯ ಕಟ್ಟಡ. ಕಟ್ಟಿ ಶತಮಾನ ಸಂದಿರಬಹುದು. ನಾಲ್ಕಂತಸ್ತಿನ ಆ ಕಟ್ಟಡದಲ್ಲಿ ಮೂರನೆಯ ಮಹಡಿಯಲ್ಲಿ ನನಗೆ ಬಿಡಾರ. 'ಲೇ ಫೊಂತಾನೆ' ಪ್ಯಾಜ್ಜಾ, ಅಮೆದಿಯೋದಿಂದ ಎರಡು ಫರ್ಲಾಂಗಿನ ದೂರದಲ್ಲಿತ್ತು. ಅಲ್ಲಿಂದ ದಾರಿ ಮತ್ತಷ್ಟು ಮೇಲಕ್ಕೇರಿ ಗುಡ್ಡದ ನೆತ್ತಿಗೆ ತಲಪಿ, ಇನ್ನೊಂದು ಗುಡ್ಡಕ್ಕೆ ನೆಗೆಯುವುದು. ಎಲ್ಲ ವಾಹನಗಳೂ ಲೇ ಫೊಂತಾನೇ ಬಳಿ ಗೇರು ಬದಲಿಸಿ ಗುಟುರು ಹಾಕಬೇಕು. ಅವುಗಳ ಯಾಂತ್ರಿಕ ಧ್ವನಿಗೋ, ಭಾರಕ್ಕೋ ನಮ್ಮ ಕೋಣೆ ಸದಾ ನಡುಗುತ್ತಿತ್ತು. ಮಾಡಿ ನಿಂದ ಸುಣ್ಣದ ಸೆಳಕುಗಳು ದಿನಾ ಬೀಳುತ್ತಿದ್ದವು. ಇದೇನು ನಮ್ಮನ್ನು ಮೂರನೇ ವರ್ಗದ ಪ್ರವಾಸಿಗಳಂತೆ ನಿಲ್ಲಿಸಿಕೊಂಡರಲ್ಲಾ ಎಂಬ ಒಂದು ಸಂದೇಹವೂ ಹೊಳೆಯಿತು. ಮರುಕ್ಷಣ ನಾವೇನು ಭಾರತೀಯ ರಾಯ ಭಾರಿ ಕಚೇರಿಯ ಸದಸ್ಯರಲ್ಲ, ವಿದ್ಯಾರ್ಜನೆಗಾಗಿ ಬಂದ ಶ್ರೀಸಾಮಾನ್ಯರು ಎಂಬ ಮೂಲಪಾಠದ ಎಚ್ಚರ ಮಾಡಿ ಎದೆ ಹಗುರವಾಯಿತು.

'ಲೇ ಫೊಂತಾನೆ' ನಿಜವಾಗಿ ಹೋಟೆಲಿನ ವರ್ಗಕ್ಕೆ ಸೇರಿದ ವಿಶ್ರಾಮ ಗೃಹವಲ್ಲ, ಬದಲು 'ಬೋರ್ಡಿಂಗ್ ಹೌಸ್' ಅಥವಾ 'ಪೆನ್ಸಿಯೋನೆ' ಜಾತಿಯದು. ಇತಾಲಿಯಲ್ಲಿ ತಾರತಮ್ಯದ ಹಾವಳಿ ವಿಪರೀತ. ಐರೋಪ್ಯ ಸಾಮಾನ್ಯವೆನಿಸಿದ 'ಹೋಟೆಲಿ'ನಲ್ಲೇ ನಾಲ್ಕು ವರ್ಗೀಕರಣವಿದೆ: (೧) ಡಿ-ಲೆಕ್ಸ್: ನಾಪೊಲಿಯ ಎಕ್ಸಲ್ಸಿಯರ್, ವೇಸುವಯೋ ಅಂಥವು (೨) ಪ್ರಥಮ ವರ್ಗ (೩) ದ್ವಿತೀಯ ವರ್ಗ (೪) ತೃತೀಯ ವರ್ಗ ಈ ನಾಲ್ಕರ ನಂತರ ಬರುವುದೇ ಪೆನ್ಸಿಯೋನೆ. ನಾಪೊಲಿಯನ್ನು ಅನವಸರವಾಗಿ,

ನಿಧಾನವಾಗಿ ನೋಡಬಯಸುವ ಪ್ರವಾಸಿಗಳು ಪೆನ್ಸಿಯೋನೆಯನ್ನು ಆರಿಸಿಕೊಳ್ಳುತ್ತಾರೆ. ಅಲ್ಲೂ ಚಳಿಗಾಲಕ್ಕೊಂದು ದರ, ಬೇಸಗೆಗೊಂದು – ಚಳಿಗಾಲದಲ್ಲಿ ಕಡಮೆ. ಎಲ್ಲಾ ದರಗಳ ಮೇಲೂ ನಾಪೊಲಿಯ ನಗರ ಪಾಲಿಕೆಯವರ ನಿಯಂತ್ರಣವುಂಟು. ನಮ್ಮ ಇನ್‌ಸ್ಟಿಟ್ಯೂಟಿನ ಅಧ್ಯಯನ ಅವಧಿಯನ್ನು ಬೇಸಗೆ ಆರಂಭವಾಗುವಷ್ಟರಲ್ಲಿ ಮುಗಿಯುವಂತೆ ವ್ಯವಸ್ಥೆ ಮಾಡಿರುವುದು ಪ್ರಾಯಃ ಮಿತವ್ಯಯದ ದೃಷ್ಟಿಯಿಂದ ಇರಬೇಕೆಂದು ಆಗ ನನಗೆ ತೋಚಿತು. ಯಾವ ನಿಮ್ನ ವರ್ಗದ ವಿಶ್ರಾಂತಿಗೃಹವಾದರೇನು – ಸ್ವಚ್ಛತೆ ಸೌಜನ್ಯಗಳಿಗೆ ಲೇಪೊಂತಾನೆಯಲ್ಲಿ ಕೊರತೆ ಇರಲಿಲ್ಲ. ನಮಗೆ ವಿಶೇಷ ಕನಿಕರದಿಂದ ಮಿತಾಹಾರವನ್ನೊದಗಿಸಿದ ಜೊಸೆಪ್ಪೆಯ 'ಬೊನ್ ಜೊರ್ನೊ' ಎಂಬಲ್ಲಿಂದ ತೊಡಗುವ ಮಂದಸ್ಮಿತಪೂರ್ವಕ ಸೇವೆ ಮರೆಯುವಂತಿರಲಿಲ್ಲ. ಬಿಸಿನೀರ ಕೊಳವೆಯಿಂದಾಗಿ ಸುಖೋಷ್ಣದ ಹವೆ ಇದ್ದು ಕೊರೆವ ಚಳಿಯಿಂದ ನಮ್ಮನ್ನು ಬದುಕಿಸಿದ್ದಕ್ಕಾಗಿ ಲೇಪೊಂತಾನೆಗೆ ನಾವು ಕೃತಜ್ಞತೆ ಅರ್ಪಿಸಬೇಕು.

'ಕುಡಿಯಲಿಕ್ಕೆ ಏನು ತರಲಿ ?' ಇದು ಮೇಜಿನ ಮೇಲೆ ಕೂತ ಕ್ಷಣ ನನ್ನನ್ನು ಇದಿರಿಸಿದ ಪ್ರಶ್ನೆ. 'ನೀರಿದೆಯಲ್ಲಾ ಅದೇ ಸಾಕು' ಎಂದೆ. ಸುತ್ತಲಿನ ಮೇಜಿನಲ್ಲಿ ಟಣಟಣ ವೈನಿನ ಬಾಟಲಿಗಳು ಸದ್ದು ಮಾಡುತ್ತಿದ್ದವು. ಕುಡಿಯುವವರನ್ನು ಅಷ್ಟು ಸಮೀಪದಲ್ಲಿ – ನನ್ನ ಬಳಿಯಲ್ಲೇ ಮೊದಲ ಬಾರಿಗೆ – ನೋಡುತ್ತಾ, ಅವರ ತಲೆಗೆ ಇನ್ನೇನು ಅದು ಏರುತ್ತದೆನ್ನುವುದನ್ನೇ ಆತುರದಿಂದ ನಿರೀಕ್ಷಿಸುತ್ತಾ ಇದ್ದ ನನಗೆ ನಿರಾಸೆಯಾಯಿತು. ನಾನು ನೀರು ಕುಡಿದಷ್ಟೇ ಪರಿಣಾಮ ಅವರ ಮೇಲೆ ವೈನಿನದು, ಬಹುಶಃ.

ಪ್ರಥಮ ದಿನದ ಊಟ ಸ್ವಾರಸ್ಯವಾಗಿತ್ತು: ಜೊತೆಗೆ ಜೊಸೆಪ್ಪೆಗೆ ಇಂಗ್ಲಿಷ್ ಬರುತ್ತಿರಲಿಲ್ಲವಾದ್ದರಿಂದ ಬೊನೆಯೋ ನಮ್ಮ ಆವಶ್ಯಕತೆಗಳನ್ನು ತರ್ಜುಮೆ ಮಾಡಿ ಅವನಿಗೆ ಹೇಳಬೇಕಾಗುತ್ತಿತ್ತು. 'ನಾವು ಮಾಂಸ ತಿನ್ನುವ ಮಂದಿಯಲ್ಲ' ಎಂದೆ. ಹದಿನೈದು ನಿಮಿಷ ಕಳೆದು ಬಟ್ಟಲಲ್ಲಿ ಮೀನು ಬಂತು. ಮೀನು ತಿನ್ನುವವರೂ ಅಲ್ಲ ಎಂದರೆ ಕೆಲ ನಿಮಿಷದ ಬಳಿಕ ಆಮ್ಲೆಟ್ ಬಂತು. ಅದನ್ನೂ ನಾನು ಬೇಡ ಎಂದಾಗ ಜೊಸೆಪ್ಪೆ ನನ್ನನ್ನು ನೋಡಿದ ನೋಟದಲ್ಲಿ "ಹಾಗಾದರೆ ಈ ಊರಿನಲ್ಲಿ ಸಾಯಲು ಬಂದವನೇ ನೀನು" ಎಂಬ ಕನಿಕರ ಮೂಡಿತ್ತು. ಅನ್ನ ಬೇಯಿಸಿ ತಾ ಎಂದೆ.

ಹಾಗೂ ಅರ್ಧ ಬೆಂದ ಅನ್ನವನ್ನೂ – ಹುಳಿ, ಸಾರು – ಮೊಸರು ಯಾವುದೂ ಇಲ್ಲದೆ ತಿನ್ನುವುದೊಂದು ಸಮಸ್ಯೆಯಾಯಿತು. ಮೇಜಿನ ಮೇಲೆ ಉಪ್ಪು ಕರಿಮೆಣಸು ಪುಡಿ ಇಟ್ಟಿದ್ದರು. ಇವತ್ತು ಇಷ್ಟೇ ಎಂದು ಆತ ಭರವಸೆ ಕೊಟ್ಟ, ಆವತ್ತಿನ ಮಟ್ಟಿಗೆ ಮಾತ್ರ ಕೆಂಪು ಮೆಣಸು ಇಲ್ಲವೆ? ಎಂದುಕೇಳಿದೆ. ಮೆಣಸಿನ ನಾಲ್ಕು ಚೂರನ್ನು ಜೊಸೆಪ್ಪೆ ತಂದಿಟ್ಟ. ಆ ಚೂರುಗಳನ್ನು ಸಾವಕಾಶವಾಗಿ ಅನ್ನಕ್ಕೆ ಕಲಸಿ ಉಪ್ಪು ಹಾಕಿ, ಟೊಮೆಟೊ ಕೆಚ್ಚಪ್ ಸೇರಿಸಿ ಹೇಗೋ ಕಬಳಿಸಿದೆ. ಮೆಲ್ಲನೆ ಬೊನೆಯೋ ಕಿವಿಯಲ್ಲಿ 'ಮೊಸರು (ಯೋಗುರ್ತ್) ಸಿಗುತ್ತದೆಯೋ' ಎಂದು ಕೇಳಿದೆ. 'ಸಿಗದೆ ಏನು? 'ಬೇಕಾಗಿತ್ತೆ?' 'ಅಯ್ಯೋ ಮೊದಲೇ ಹೇಳಿದ್ದರೆ?' ಎಂದು ಮರುದಿನ ದಿಂದಲೇ ಏರ್ಪಾಟು ಮಾಡುತ್ತೇನೆ ಎಂದ. ಆತ ಹತ್ತು ಮಿನಿಟಿಗೊಮ್ಮೆ ಏನಾದರೂ ಬೇಕೆ ಎಂದು ನನ್ನನ್ನುಪಚರಿಸುವುದನ್ನು ಕಂಡು ನನಗೆ ನಾಚಿಕೆ ಯಾಗುತ್ತಿತ್ತು. ಇವನೊಬ್ಬ ಭಾರತೀಯ ಸಾಧು ಎಂಬ ಭಾವನೆ ಆತನಲ್ಲಿ ಕೆಲವು ದಿನದ ಮಟ್ಟಿಗಾದರೂ ಬೇರೂರಿರಬೇಕು. ಆವತ್ತು ನೀರಿನಿಂದಲೇ ಹೊಟ್ಟೆ ತುಂಬಿಸಿಕೊಂಡು ನನ್ನ ಮೊದಲ ಊಟ ಮುಗಿಸಿದೆ. ಕೆಲವೇ ದಿನಗಳಲ್ಲಿ ಇತಾಲಿಯನರು ಅನ್ನ ಬೇಯಿಸುವ ಕ್ರಮ ಬೇರೆ; ಅರ್ಧ ಬೆಂದ ಅನ್ನವೇ ಅವರಿಗೆ ಹಿತವೆಂದು ತಿಳಿದ ಮೇಲೆ ಅನ್ನವನ್ನೂ ಬಿಟ್ಟು ಇತಾಲಿ ಯದ ಅಚ್ಚ ಸ್ವದೇಶೀ ಸ್ಪಗೆಟ್ಟಿ (ಶೇಮಿಗೆ)ಯನ್ನು ಬಲವಾಗಿ ಹಿಡಿದೆ. ಎಲ್ಲಿ ಹೋದರೂ ನಿರ್ದಾಕ್ಷಿಣ್ಯವಾಗಿ ಸ್ಪಗೆಟ್ಟಿಯನ್ನೇ ಬೇಡಲು ಶುರು ಮಾಡಿದೆ. ಮಾಂಸದ ಸೋಂಕು ತಗಲಬಾರದೆಂದು ಇತಾಲಿಯನ್ ಭಾಷೆ ಯಲ್ಲಿ ಶ್ರೀಮತಿ ಬೊನೆಯೋ ನೆರವಿನಿಂದ ಒಂದು ಸೂತ್ರವನ್ನು ಕಟ್ಟಿ ಕಂಠಪಾಠ ಮಾಡಿಕೊಂಡೆ: 'ಸೆನ್ಸಾ ಕಾರ್ನೇ, ಸೆನ್ಸಾ ಪೆಶೇ, ಸೆನ್ಸಾ ಓವೋ' (ಮಾಂಸವಿಲ್ಲದ, ಮೀನಿಲ್ಲದ, ಮೊಟ್ಟೆಯಿಲ್ಲದ ಆಹಾರ).

ಸ್ಪಗೆಟ್ಟಿ! ಮಕರೋನಿ! ಎಂಥ ಮೋಹಕವಾದ ಪದಗಳು! ನಾವು ಸ್ವಿಟ್ಜರ್ಲೆಂಡಿಗೆ ಹೋದಾಗ ಯಾವ ರೈಲ್ವೆ ಬುಫೆ ಇರಲಿ, ಹೋಟೆಲಿರಲಿ ನಾವು ಬೇಡುತ್ತಿದ್ದುದು ಸ್ಪಗೆಟ್ಟಿಯನ್ನೇ!

ಬರಿಯ ಸ್ಪಗೆಟ್ಟಿ ಎಂದರೆ ಮಾಂಸದ ಹುಳಿ (Sauce) ಸೇರಿಸಿಯೇ ಬಂದುಬಿಡುತ್ತಿದ್ದುದರಿಂದ 'ಸೆನ್ಸಾಕಾರ್ನೇ' ಮಂತ್ರ ಹೇಳಬೇಕಾಗುತ್ತಿತ್ತು. ಇತಾಲಿಯನರು ನಮ್ಮೂರಿನವರಂತೆಯೆ ಪ್ರಖ್ಯಾತ ನಳವರ್ಗದವರಾದ್ದ

ರಿಂದ ಅವರ ಅಡಿಗೆ ರುಚಿ ವಿಶ್ವವ್ಯಾಪಿಯಾಗಿದೆ. ಸ್ಪಗೆಟ್ಟಿಯಲ್ಲಿಯೇ ಹಲಬಗೆಯವು ಇವೆ. ಅವುಗಳ ಕುರಿತು ಬಹು ಸ್ವತಂತ್ರ ಪ್ರಬಂಧವನ್ನೇ ರಚಿಸಿ ಪಿ.ಎಚ್.ಡಿ ಪಡೆಯಬಹುದು ಬೋಳು ಸ್ಪಗೆಟ್ಟಿ ಮುದ್ದೆಯ ಮೇಲೆ.

ನಾವೇ ಟೊಮೆಟೋ ಕೆಚ್ಚಪ್ ಹಾಕಿ ತಿನ್ನುವುದು ಒಂದು ಬಗೆ; ಟೊಮೆಟೋ ಕೆಚ್ಚಪ್ ಮತ್ತು ಚೀಸ್ ಮಿಶ್ರಮಾಡಿ ಅಡುಗೆಮನೆಯಿಂದಲೇ ಬಂದರೆ ಅದಕ್ಕೆ ಸ್ಪಗೆಟ್ಟಿ ನಪೋಲಿತಾನಾ ಎಂದು ಹೆಸರು; ಇನ್ನು 'ಸ್ಪಗೆಟ್ಟಿ ಬೊಲೊನ್ಯಾ' ಅಂದರೆ ಅದರ ಮೇಲೆ ಮಾಂಸದ ಹುಳಿ ಕಲಸಿ ತಯಾರಿಸುವ ಮಾದರಿ. ಸ್ಪಗೆಟ್ಟಿಗೂ ನಮ್ಮ ಶಾಕಾಹಾರಿ ಶೇಮಿಗೆಗೂ ಭೇದಗಳುಂಟು. ನಮ್ಮ ಶೇಮಿಗೆ ಮುಟ್ಟಿದರೆ ತುಂಡಾಗುವುದಲ್ಲವೆ? ಸ್ಪಗೆಟ್ಟಿಯ ಒಂದು ಮೀಟರ್ ಉದ್ದವನ್ನು ಬೇಕಾವರೂ ನೀವು ಕೈಯಲ್ಲಿ ವಾಕಿಂಗ್ ಸ್ಟಿಕ್‌ನಂತೆ ಹಿಡಿದು ಓಡಾಡಬಹುದು. ಅದು ಮುರಿಯುವುದಿಲ್ಲ. ಸ್ಪಗೆಟ್ಟಿಯ ಸುತ್ತಳತೆ ಎರಡು ನೂಲಿನಿಂದ ಹಿಡಿದು ಅರ್ಧ ಇಂಚಿನ ವರೆಗೂ ಇರುತ್ತದೆ. ಸುತ್ತಳತೆ ದೊಡ್ಡದಾದಂತೆ ಅದರ ಹೆಸರು 'ಮಕರೋನಿ' ಎಂದು ಮಾರ್ಪಾಟು ಹೊಂದುತ್ತದೆ, ಮಾತ್ರವಲ್ಲ ಸ್ಪಗೆಟ್ಟಿ ಬೇದ ಮೇಲೂ ಒಂದೆರಡಡಿ ಉದ್ದದ ಎಳೆಯಾಗಿ ನಮ್ಮ ಬಾಯಿಯನ್ನು ಹೊಗುವುದು, ಮಕರೋನಿ ಒಂದೆರಡು ಇಂಚಿನಷ್ಟಕ್ಕೇ ಸೀಮಿತ. ಸ್ಪಗೆಟ್ಟಿಯನ್ನು ಗೋಧಿ ಮತ್ತು ಇತರ ಒದೆರಡು ಧಾನ್ಯಗಳ ಹಿಟ್ಟಿನಿಂದ ತಯಾರಿಸುತ್ತಾರೆ. ಸ್ಪಗೆಟ್ಟಿ ತಯಾರಿಸಲು ಇತಾಲಿಯನರು ಕಾರ್ಖಾನೆಗಳನ್ನೇ ಕಟ್ಟಿದ್ದಾರೆ. ನಾಪೊಲಿಯಲ್ಲಿ ಅಂಥ ಒಂದು ಕಾರ್ಖಾನೆಯಲ್ಲಿ ಸ್ವಯಂ ಚಾಲಿತ ಯಂತ್ರಗಳಿಂದ ಎಸೆಂಬ್ಲಿ ಲೈನ್ ಮಾದರಿಯಲ್ಲಿ ಟನ್ ಗಟ್ಟಲೆ ಸ್ಪಗೆಟ್ಟಿ ಸಿದ್ಧವಾಗುವುದನ್ನು ನಾನು ಕಣ್ಣಾರೆ ಕಂಡೆ. ಹೀಗೆ ಸಿದ್ಧವಾದ ಸ್ಪಗೆಟ್ಟಿ ಇತಲಿಯಲ್ಲಿ ಮಾತ್ರವಲ್ಲದೆ ದೇಶಾಂತರಕ್ಕೆ ನಿರ್ಯಾತವಾಗುವುದೂ ಉಂಟು. ಅಮೆರಿಕನ್ನರಿಗೂ, ಇತರ ಐರೋಪ್ಯರಿಗೂ ಸ್ಪಗೆಟ್ಟಿಯ ರುಚಿಯನ್ನು ತೋರಿಸಿದ ಇತಾಲಿಯನ್ ಜನ ಅದನ್ನೇ ತಮ್ಮ ದೇಶದ ಒಂದು ಒಳ್ಳೆಯ ನಿರ್ಯಾತ ಉದ್ಯಮವನ್ನಾಗಿ ಕಲ್ಪಿಸಿರುವುದು ಅವರ ಬುದ್ಧಿವಂತಿಕೆಗೆ ನಿದರ್ಶನ. ಇತಾಲಿಯದ ನಮ್ಮ ಪ್ರವಾಸದಲ್ಲಿ ಇಂಥ 'ಪಾಸ್ತಾ' ತಯಾರಿಯ ಹಲವು ಫಲಕಗಳು ಮೇಲಿಂದ ಮೇಲೆ ಪ್ರತಿ ನಗರದ ಹೊರ

ವಲಯದಲ್ಲಿಯೂ ಕಾಣಸಿಗುತ್ತಿದ್ದುದನ್ನು ನೋಡಿದರೆ ಆಹಾರವನ್ನು ಸಿದ್ಧಗೊಳಿಸುವ ಉದ್ಯಮದ ಪ್ರಚ್ಛನ್ನ ಶಕ್ತಿಯ ಅರಿವಾದೀತು.

## ೦ ೦ ಜೀವನಾಧಾರ

ಅಂತೂ ಇಡೀ ಪ್ರವಾಸದಲ್ಲಿ ಸ್ವಗೆಟ್ಟಿ ನನಗೆ ಜೀವನಾಧಾರ ಪದಾರ್ಥವಾಯಿತು. ಲೇಪೊಂತಾನೆಯಲ್ಲಾಗಲೀ, ಮಧ್ಯಾಹ್ನ ಕಾಲದ ಊಟ ಏರ್ಪಟಿದ್ದ ಮೋಸ್ತಾ ಕೇಂಟೀನಿನಲ್ಲಾಗಲಿ ಸಿಗುವ ಈ ಸ್ವಗೆಟ್ಟಿ ಪ್ರಮಾಣ ತೀರ ಅಲ್ಪವಾಗಿ ಆರು ತಿಂಗಳು ಜಠರಕೋಶ ತೆರವೋ ತೆರವು ಬರಿದೋ ಬರಿದು ಎಂದನ್ನಿಸುತ್ತಿತ್ತು. ಇನ್ನೊಂದು ಸಾರಿ ತರಿಸಿಕೊಳ್ಳಲು ನಮ್ಮ ವಿದೇಶ ವಿನಿಮಯದ ತೀವ್ರ ಅಭಾವದಿಂದಾಗಿ ಸಂಕೋಚವಾಗುತ್ತಿತ್ತು. ಲೆಕ್ಕಕ್ಕಿಂತ ಹೆಚ್ಚು ತಿನ್ನುವುದನ್ನು ಬೆಳೆಸಿಕೊಂಡರೆ ನನ್ನ ಶಿಷ್ಯವೃತ್ತಿಯ ಸಿಲ್ಕು ಹಣ ಒಂದು ವಾರಕ್ಕೂ ಸಾಲದೆ ಹೋದೀತೆಂಬ ಭಯ ಬೇರೆ. ಅವರು ದಯಪಾಲಿಸಿದ 800 ರೂಪಾಯಿಯಲ್ಲಿ ವಾಸ್ತವ್ಯ, ನಿತ್ಯದ ಊಟ, ಮುಂಜಾವಿನ ಉಪಾಹಾರ ಮತ್ತು ಬಸ್ಸಿನ ಖರ್ಚು ಕಳೆದು ಕೈಗೆ ಬರುತ್ತಿದ್ದ ಹಣ – ಕಿಸೆ ಹಣ – ಕೇವಲ ಎರಡುನೂರು ರೂಪಾಯಿಗಳಷ್ಟಾಗುತ್ತಿತ್ತು. ಇದೇ ಉಳಿತಾಯವನ್ನು ಕೂಡಿಸಿ ನನ್ನ ಕೆಲವು ಐಹಿಕ ಆಸೆಗಳನ್ನು – ಸ್ವಿಝರ್ಲೆಂಡ್ ಯಾತ್ರೆ, ಕೆಮರಾ, ಟ್ರಾನ್ಸಿಸ್ಟರ್ ರೇಡಿಯೊ ಮುಂತಾದುವನ್ನು – ಪೂರಯಿಸಿಕೊಳ್ಳುವ ಯೋಜನೆ ಹಾಕಿದ್ದೆ. ಹಾಗಾಗಿ ಹೊಟ್ಟೆ ತುಂಬಿಸಿಕೊಳ್ಳುವ ಯೋಚನೆ ಗೌಣವಾಯಿತು. ಹೊಟ್ಟೆಯನ್ನು ನಿಯಂತ್ರಣದಲ್ಲಿಡದೆ ಉಪಾಯವಿರಲಿಲ್ಲ. ಮೊದಲ ಒಂದು ತಿಂಗಳು ಊಟ ಮಾಡಿದ ಕ್ಷಣವೇ ಉಪವಾಸದ ಅನುಭವವಾಗುತ್ತಿದ್ದುದು ಕಾಲಕ್ರಮೇಣ ಜಠರಕೋಶದ ಗಾತ್ರ ಕುಗ್ಗಿಯೋ ಅಭ್ಯಾಸ ಬಲದಿಂದಲೋ, ಉಲ್ಲಾಸಕ್ಕೆ ಅನುವುಮಾಡಿತು. ತಿನ್ನಬೇಕಾದಷ್ಟು ತಿನಲಿಲ್ಲ ಎಂಬುದೊಂದು ಒಳಗುದಿಯ ಅನಿಸಿಕೆಯೇ ಹೊರತು ನನ್ನ ಸ್ನೇಹಿತರೆಲ್ಲ ಸಂತೋಷವಾಗಿದ್ದೇನೆಂದೇ ಭಾವಿಸುತ್ತಿದ್ದರು. ನನ್ನ ವಯಸ್ಸು ಅಂದಾಜು ಹಿಡಿದವರೆಲ್ಲ 39ರ ನನಗೆ 29 ಇರಬಹುದು ಎನ್ನುತ್ತಿದ್ದರು. 'ಯಾವಾ

ಗಲೂ ನಗುತ್ತಾ ಇರುತ್ತೀಯಲ್ಲಾ ?' ಎಂದು ಸಹಾಧ್ಯಾಯಿಗಳು ಎಷ್ಟೋ ಬಾರಿ ಕೇಳಿದ್ದುಂಟು. ಇದರ ಮೇಲಿಂದ ನನಗೂ ವಿಶ್ವಾಸ ಹುಟ್ಟಿತು – ಈ ಅಲ್ಪ ಪ್ರಮಾಣದ ಆಹಾರದಿಂದಲೂ ಬದುಕಬಹುದೆಂದು. ನಾನು ಹಿಂದಿನಿಂದಲೂ ಕಾಫಿಪ್ರಿಯನಾದ್ದು ಒಳ್ಳೆಯದಾಯಿತು. ಸಂಜೆಗೆ ನಾವೇ ಕಾಫಿ ಮಾಡಿಕೊಂಡು ಕುಡಿಯುತ್ತಿದ್ದೆವು. ಅದೂ ಮದ್ರಾಸ್ ಕಾಫಿ ಅಂದರೆ ಸುಬ್ಬಯ್ಯನೇ ಮಾಡಿ ಕೊಡುತ್ತಿದ್ದ. ಕಾಫಿಹುಡಿಯ ಖರ್ಚು ಅವನದು; ದಿನನಿತ್ಯದ ಹಾಲು ನನ್ನದು. ಹಾಲನ್ನು ತರುವ ಕೆಲಸವೂ ನನ್ನದೇ. ಇಸ್ಟೇ ಯಿಂದ ಮರಳಿದ ಬಸ್ಸಿಳಿದವನೇ 50 ಲೀರೆ ತೆತ್ತು ಒಂದು ಪೊಲಿಥೀನ ಪುಡಿಕೆಯಲ್ಲಿ ಹಾಲು ತೆಗೆದುಕೊಂಡು ಓಡಿ ಬರುತ್ತಿದ್ದೆ. ಕಾಫಿ ಮಾಡಲು ಬೇಸರವಾದ ದಿನ ನಗರ ಮಧ್ಯದ ಪ್ಯಾಜ್ಸಾಪ್ಲೆ ಬಿಚಿತ್ತೊ, (–ಜನತಾ ಸರ್ಕಲ್) ಅಥವಾ ವಿಯಾರೋಮಾದ ಯಾವುದಾದರೂ ಚಿಕ್ಕ ರೆಸ್ಟು ರಾಕ್ಕೆ ನುಗ್ಗುತ್ತಿದ್ದೆ. ಇತಾಲಿಯಲ್ಲಿ ಕಾಫಿಯಲ್ಲಿಯೂ ಎಷ್ಟು ಬಗೆ? 'ಕಫೆ' ಎಂಬ 40 ಲೀರೆಯ, ಚಿಕ್ಕ ಕಪ್ಪಿನಲ್ಲಿ ನಾಲ್ಕೈದು ಚಮಚಗಳಷ್ಟೇ ದಪ್ಪ ನಾಗಿ ಸಿಗುವ ಕಾಫಿ, ಹಾಲಿಲ್ಲದ ಕರಾಳ ಕಾಫಿ, ಅತಿ ಅಗ್ಗವಾದ ಕಾಫಿ ಯಾದ್ದರಿಂದ ನಾನು ಇದನ್ನೇ ರೂಢಿಸಿಕೊಂಡೆ. ಕಾಫಿ ತಯಾರಿಸುವ ಎಸ್ ಪ್ರೆಸೊ ಯಂತ್ರದಿಂದ ಚಿರ್ರೆಂದು ಸೂಸುವ 'ಕಫೆ' ದಪ್ಪನಾದ ಕಾಫಿಯ ಡಿಕಾಕ್ಷನ್ – ಸಕ್ಕರೆ ಸಹಿತವಾಗಿ ಕುಡಿದರೆ ಗಂಟಲಿನರ್ಧ ಮುಟ್ಟುವುದ ರೊಳಗೆ ಆರಿ ಹೋಗುವುದು. ಇತಾಲಿಯನರಿಗೆ ಕಾಫಿ ಎಂದರೆ ನನ್ನಂತೆ ಬಹಳ ಪ್ರೀತಿ. ಅವಸರವಾಗಿ ಕೆಲಸದ ಮೇಲೆ ಹೋಗುವವನೂ ಫಕ್ಕನೆ ಸರಿದು ಒಂದು ಗುಟುಕು ಹಾಕಿ ಉತ್ಸಾಹದಿಂದ ಹೆಜ್ಜೆಹಾಕಿ ಓಡುವುದನ್ನು ಕಂಡಮೇಲೆ ಅಂಥವರ ಬಗ್ಗೆ ನನಗೆ ಅಭಿಮಾನ. ಎರಡನೆಯದು ಇಂಡಿಯಾ ದಲ್ಲಿ ಸಾಮಾನ್ಯವಾಗಿರುವ ಹಾಲು ಬೆರಸಿದ ಕಾಫಿ. ಅದಕ್ಕೆ ಕಪುಚೀನೊ ಎಂದು ಹೆಸರು – ಅರುವತ್ತು ಲೀರೆಯಿಂದ 70 ಲೀರೆ ಬೆಲೆ. ಮೂರ ನೆಯದು 'ಕಫೆ-ಏ-ಲಾತೆ' ಕಾಫಿ ಮತ್ತು ಹಾಲು ಅಂದರೆ ಒಂದು ಕಪ್ ಹಾಲಿಗೆ ಸ್ವಲ್ಪ ಕಾಫಿ ಬೆರಸಿದ 'ಲೈಟ್' ಕಾಫಿ. ಇನ್ನೂ ನಿಂಬೆಹಣ್ಣು ಹಾಕಿ ಕಾಫಿ ಕುಡಿಯುವವರೂ ಇದ್ದಾರಂತೆ. ಇತಲಿಯಲ್ಲಿ ಒಟ್ಟು ಐದು ಬಗೆಯ ಕಾಫಿ ಪಾನೀಯವಿದೆ ಎಂದು ಕೇಳಿದ್ದೇನೆ.

ಸ್ಪಗೆಟ್ಟಿ (ಇತಾಲಿಯನ್ ಶೇಮಿಗೆ) ತಿನ್ನುವುದೇ ಒಂದು ಕಲೆ ಎಂದು

ನನಗೆ ತಿಳಿಯಲು ತಡವಾಗಲಿಲ್ಲ. ಚಮಚ ಫೋರ್ಕ್‌ಗಳ ಪರಿಚಯವಿಲ್ಲದ ಶುದ್ಧ ವೈದಿಕನಾದ ನನ್ನ ಹಲ್ಲಿಗೆ ಒಂದು ಸಲ ಸ್ಪಗೆಟ್ಟಿಯ ಬದಲು ಫೋರ್ಕ್ ತಗಲಿ ಹಿರಿಯರನ್ನೆಲ್ಲ ಸ್ಮರಿಸುವಷ್ಟು ವೇದನೆಯುಂಟಾಯಿತು. ಅಲ್ಲದೆ ಎರಡಡಿ ಉದ್ದದ ಸ್ಪಗೆಟ್ಟಿಯನ್ನು ಬಾಯಿಯೊಳಗೆ ಸೇರಿಸಿಕೊಳ್ಳು ವುದು ಹೇಗೆ ಎಂಬ ಚೋದ್ಯವೂ ತಿಳಿಯಲಿಲ್ಲ. ಕೊನೆಗೆ ಈ ತಂತ್ರವನ್ನು ಕಲಿಯಬೇಕಾಯಿತು. ಚಮಚವನ್ನು ಎಡ ಕೈಯಲ್ಲಿ ಹಿಡಿದು ಫೋರ್ಕಿ ನಿಂದ ಸ್ಪಗೆಟ್ಟಿಯ ಮುದ್ದೆಯನ್ನೆತ್ತಿ, ತುದಿಯನ್ನು ಚಮಚಕ್ಕೆ ಆನಿಸಿ ಸ್ಪಗೆಟ್ಟಿಯನ್ನು ಫೋರ್ಕಿನ ಸುತ್ತಲೂ ಸುರುಳಿ ಸುರುಳಿಯಾಗಿ ತಿರುಗಿಸ ಬೇಕು. (ಆಗಲೂ ಸ್ಪಗೆಟ್ಟಿ ಪ್ಲೇಟನ್ನು ಸುಲಭದಲ್ಲಿ ಬಿಟ್ಟಿರುವುದಿಲ್ಲ.) ತದನಂತರ ಬಾಯಿಯೊಳಗೆ ಈ ಸುರುಳಿಯನ್ನು ಸೇರಿಸಿ ಪ್ಲೇಟಿಗೂ ಫೋರ್ಕಿಗೂ ನಡುವೆ ನಿಂತ ಸ್ಪಗೆಟ್ಟಿಯನ್ನು ಹಲ್ಲಿನಿಂದ ಕಡಿದು ತುಂಡರಿಸಿ ನುಂಗಬೇಕು. ಹಾಗೆ ಹಲ್ಲಿನಿಂದ ಅದನ್ನು ಕಡಿಯದಿದ್ದರೆ ಪ್ಲೇಟೇ ಬಾಯಿಗೆ ಬಂದುಬಿಟ್ಟೀತು. ಇತಾಲಿಯನರು ಸ್ಪಗೆಟ್ಟಿ ತಿನ್ನುವ ವೇಗವೂ ಬಲು ಜೋರು; ಅಂದರೆ ಅವರ ಬಕಬಾಯಿಯ ಗಾತ್ರವೂ ದೊಡ್ಡದು, ಅದ ರೊಳಕ್ಕೆ ಸೇರಿಕೊಳ್ಳುವ ಸ್ಪಗೆಟ್ಟಿಯ ಉಂಡೆಯೂ ದೊಡ್ಡದು. ಒಂದು ದಿನ ನಮ್ಮ ಇನ್‌ಸ್ಟಿಟ್ಯೂಟಿನ ಉಪಾಧ್ಯಕ್ಷ (ವೈಸ್ ಪ್ರಿನ್ಸಿಪಾಲ್) ಡಾ। ಫೆರೋಲಾ ಹತ್ತಿರ "ಇತಾಲಿಯನ್ ರಾಷ್ಟ್ರದ ಶೀಲವನ್ನು ಸ್ಪಗೆಟ್ಟಿ ಪ್ರತಿ ಬಿಂಬಿಸಿದಂತೆ ಬೇರಾವುದೂ ಬಿಂಬಿಸಲಾರದು"–ಎಂದೆ. ಆತ ನಾನು ಪ್ರಾಧ್ಯಾಪಕನ ಗಾಂಭೀರ್ಯದಿಂದ ಆಡುವುದನ್ನು ನೋಡಿ ಬಹಳ ಗೌರವ ಪೂರ್ವಕವಾಗಿ 'ಹೇಗೆ?' ಎಂದು ಕೇಳಿದ. "ಸ್ಪಗೆಟ್ಟಿ ಕಾಲ ಮತ್ತು ದೇಶ ದಂತೆ ಒಂದು ನಿರಂತರ ಪ್ರವಹಿಸುವ ಅನಸ್ಯೂತ ಪ್ರವಾಹ. ನಿಮ್ಮ ಇತಾಲಿ ಯನ್ ಮಾತಿನ ಹಾಗೆಯೇ ನಿಮ್ಮ ಮಾತುಗಾರಿಕೆಯ ಧ್ವನಿ ಏರಿಕೆಗೂ (Volume) ಸ್ಪಗೆಟ್ಟಿ ಕಾರಣ. ನೀವು ಸ್ಪಗೆಟ್ಟಿ ತಿನ್ನುವಾಗ ತೆರೆದಷ್ಟು ಅಗಲವಾದ ಬಾಯಿ ಹಿಂದುಸ್ಥಾನದಲ್ಲಿ ಆನೆಗಳಲ್ಲಿ ಮಾತ್ರ ನಾನು ಕಂಡಿ ದ್ದೇನೆ" ಎಂದೆ. ಆಗ ಅವನಿಗೆ ಇದು ನನ್ನ ತಮಾಷೆ ಎಂಬ ಅರಿವಾಯಿತು. ಹೌದು ಹೌದು ಎಂದು ಅತಿ ಸಂತೋಷವಾಗಿ ಒಪ್ಪಿಕೊಂಡ. ಸಿನೆಮಾ ಚಿತ್ರಗಳನ್ನು ಕಲಾತ್ಮಕವಾಗಿ ತಯಾರಿಸುವುದರಲ್ಲಿ ಹಾಲಿವುಡ್ಡನ್ನೂ ಮೀರಿ ಸುವ ಶಕ್ತಿ ಇತಾಲಿಯನರಿಗೆ ಹೇಗೆ ದೊರೆಕೊಂಡಿತೆಂಬುದು ಇತಲಿಯ

ಜನಜೀವನದ ಮೊದಲ ಸಂಪರ್ಕದಲ್ಲೇ ವ್ಯಕ್ತವಾಗುವುದು. ಯಾವ ಇತಾಲಿಯನನೂ ಹಾವಭಾವಗಳಿಲ್ಲದೆ ಮಾತನಾಡಲಾರ; ಆಡುವಾಗ ಹಿಂದುಸ್ಥಾನದಲ್ಲಿ ಒಂದೇ ಕೈ ಬಳಸುವ ಮಡಿವಂತಿಕೆಯಿದೆಯಷ್ಟೆ; ಇಟಲಿಯಲ್ಲಿ ಎರಡೂ ಕೈಗಳ ಸಂಚಲನೆಯು ಮಾತಿನ ಅರ್ಥವನ್ನು ಪುಷ್ಟೀಕರಿಸಲು ಸದಾ ಹಾತೊರೆಯುತ್ತಿರುವುದು. ಹಸ್ತಾಂಗುಲಿಗಳನ್ನೂ, ಮೋರೆಯ ಸ್ನಾಯುಗಳನ್ನೂ ಇತಾಲಿಯನರಂತೆ ಹಗಲೆಲ್ಲ – ಪರಸ್ಪರ ಸಂವಾದದ ವೇಳೆ – ಅರ್ಥಪೂರ್ಣವಾಗಿ ಬಳಸುತ್ತಿರುವ ಜನಾಂಗ ಬೇರೆ ಇರಲಾರದು. ಹಾದಿ ಬೀದಿಗಳಲ್ಲಿ ಸಭೆ ಸಮಾರಂಭಗಳಲ್ಲಿ ಹೆಣ್ಣು, ಗಂಡು ಒಬ್ಬರಿಗೊಬ್ಬರು ಅಂಟಿಕೊಂಡ ಕಡಲ ಕರೆಯ ಸಂಚಾರ ಕಾಲದಲ್ಲಿ, ದೀರ್ಘವೂ, ಮಂದ್ರವೂ ದ್ರುತ ಸಂಚರಿತವೂ ಆದ ಮಾತಿನ ವೇಗಕ್ಕೆ ತಾಳ ಹಾಕುವ ಹಸ್ತಾಂಗುಲಿ – ಮುಖಭಾವದ ನಾನಾ ವಿನ್ಯಾಸಗಳನ್ನು ನೋಡಿದರೆ ಇತಾಲಿಯನರಿಗೆ ಖಂಡಿತವಾಗಿ ಅಭಿನಯ ಕಲೆಯಲ್ಲಿ ಬೇರೆ ತರಬೇತಿ ಅನಗತ್ಯವೆಂದು ಸ್ವತಃ ಸಿದ್ಧವಾಗುವುದು. ಹಡಗಿನಲ್ಲಿ ಬರುತ್ತಿದ್ದಾಗ ಇತಾಲಿಯನ್ ಕಲಾಸಿಗಳು ಗುಂಪು ಸೇರಿ ನಗೆಚಾಟಿಕೆಯಾಡುತ್ತಿರುವಲ್ಲಿ ನಿಂತು ಅವರ ಮಾತನ್ನಾಲಿಸುವುದು ನನಗೊಂದು ನಿತ್ಯದ ಹವ್ಯಾಸವೇ ಆಗಿಹೋಗಿತ್ತು.

### ೦ ೦ ಇತಾಲಿಯನ್ ಭಾಷೆ

ಇತಾಲಿಯನ್ ಭಾಷೆಯನ್ನು ಕಲಿಯುವ 'ಸ್ವಬೋಧಿನಿ' ಪುಸ್ತಕವನ್ನು ನಾನು ಊರಿಂದ ಹೊರಡುವ ಆರು ತಿಂಗಳ ಮೊದಲೇ ತರಿಸಿಕೊಂಡಿದ್ದೆನಾದರೂ ಅದರ ಕ್ರಮಪ್ರಾಪ್ತ ಅಧ್ಯಯನಕ್ಕೆ ಬಿಡುವೇ ದೊರತಿರಲಿಲ್ಲ ಎಂಬುದೊಂದು. ಎರಡನೆಯದು ಕೇವಲ ಕುಶಾಲಿಗೆ ಹಾಕಿದ ಅರ್ಜಿ, ನೀಡಿದ ಇಂಟರ್‌ವ್ಯೂ ಇದರ ಮೇಲೆ ನನಗೆ ಈ ಪ್ರವಾಸ ಎಲ್ಲಿ ಲಭ್ಯವಾಗುತ್ತದೆಂಬ ನಿರಾಶಾವಾದ. ಹೀಗೆ ಇತಲಿಗೆ ಹೋಗಿಯೇ ಕಲಿತರಾಯಿತು ಅಥವಾ ಹಡಗಿನಲ್ಲಿ ಹನ್ನೆರಡು ದಿನ ಕಾಲಹರಣ ಮಾಡಬೇಕಲ್ಲಾ, ಆಗ ಓದಿಕೊಂಡರಾಯಿತು. ಅದೂ ಸಾಲದೆ ಹೋದರೆ ಇನ್‌ಸ್ಟಿ

ಟ್ಯೂಟಿನಲ್ಲಿ ಉಪನ್ಯಾಸಗಳನ್ನು ತರ್ಜುಮೆ ಮಾಡುವ ಇಂಗ್ಲಿಷ್ ಬಲ್ಲ ಪ್ರಾಧ್ಯಾಪಕರಿದ್ದಾರೆ – ಅವರನ್ನು ನಂಬಿದರಾಯಿತು ಎಂದು ಮುಂತಾಗಿ ಇತಾಲಿಯನ್ ಭಾಷೆ ಕಲಿಯಲು ನಾನಷ್ಟು ಉತ್ಸಾಹಿತನಾಗಿರಲಿಲ್ಲ. ಹಡಗಿನಲ್ಲಿ 'ಟೀಚ್ ಯುವರ್ ಸೆಲ್ಫ್' ಸ್ವಲ್ಪ ನೋಡಿಕೊಂಡೆ, ಅದರಲ್ಲಿನ ಅಭ್ಯಾಸಗಳನ್ನು ಮಾಡಿ ಗೆದ್ದೇನೆಂಬ ಧೈರ್ಯ ಬರಲಿಲ್ಲ. ಇನ್ನೊಂದು ಪುಸ್ತಕ 'ನೋಡು, ಆಡು' ( See it and Say it ) ಎಂಬ ಶೀರ್ಷಿಕೆ ಯಲ್ಲಿ ಪ್ರಪಂಚದ ಎಲ್ಲಾ ಭಾಷೆಗಳನ್ನು ಕಲಿಯಲು ಸುಲಭ ಪಾಠಗಳ ನ್ನೊಳಗೊಂಡ ಒಂದು ಸಚಿತ್ರ ಪುಸ್ತಕ. ಅಲ್ಲದೆ ಇತಾಲಿಯನ್ – ಇಂಗ್ಲಿಷ್ ಕೋಶವನ್ನು ಯಾವಾಗಲೂ ಜೇಬಿನೊಳಗಿಟ್ಟಿರುತ್ತಿದ್ದೆ. ಬೇಸರ ಬಂದಾಗ ಈ ಎರಡರಲ್ಲಿ ಯಾವುದಾದರೂ ಒಂದನ್ನು ತೆರೆದು ತಾಸರ್ಧ ತಾಸು ಓದುವೆ. ಇಷ್ಟಾದರೂ ನಾಪೊಲಿಯಲ್ಲಿ ನಾನು ಇಳಿದಾಗ ಕೆಲವು ಹರಕು ಮುರುಕು ಶಬ್ದಗಳಲ್ಲದೆ ಬೇರೇನೂ ಇತಾಲಿಯನ್ ನನಗೆ ಬರುತ್ತಿರಲಿಲ್ಲ. ಎಳೆವಯಸ್ಸಿನಲ್ಲಿ ತ್ರಿಭಾಷಾ ಶಾಸ್ತ್ರದ (ಕನ್ನಡ-ಹಿಂದೀ-ಸಂಸ್ಕೃತ) ವ್ಯಾಕರಣ ಕೋಶವನ್ನು ಅರಗಿಸಿಕೊಂಡೆನೆಂದು ಭ್ರಮಿಸಿದ್ದ ನನಗೆ ವಯಸ್ಸಾದ ಲಕ್ಷಣವೋ ಏನೋ ಇತಾಲಿಯನ್ ಅಧ್ಯಯನಕ್ಕೆ ಮನಸ್ಸು ಒಗ್ಗಲಿಲ್ಲ. ಆದರೂ ಇತಲಿಯಲ್ಲಿ ಕಲಿತೇನೆಂಬ ಆತ್ಮವಿಶ್ವಾಸ ಸ್ವಲ್ಪ ಮಟ್ಟಿಗೆ ಚರಿ ತಾರ್ಥವಾಯಿತು. ಇಂಗ್ಲಿಷ್ ಭಾಷೆಯ ಮೂಲಕ ವಿದ್ಯಾಭ್ಯಾಸ ಮಾಡಿದ ಹತ್ತಿಪ್ಪತ್ತು ಅಭ್ಯರ್ಥಿಗಳಲ್ಲಿ ಆರು ತಿಂಗಳಲ್ಲಿ ನಾನೇ ವಾಸಿ ಎನಿಸುವಷ್ಟು ಇತಾಲಿಯನ್ ನನ್ನ ವಶವಾಯಿತು. ಅಲಿತಾಲಿಯ ವಿಮಾನಮಾರ್ಗದ ಗಗನಸಖಿಯರೊಡನೆ ಸಲ್ಲಾಪ ನಡೆಸುವಷ್ಟು, ಅದೇಕೆ ಸಂಪೂರ್ಣ ವಾಕ್ಯ ಗಳನ್ನು ಹೆಣೆದು ನನ್ನ ಸ್ನೇಹಿತರಿಗೆ ಒಪ್ಪಿಸುವಷ್ಟು ಪರಿಣತಿಯನ್ನು ನಾನು ಸಾಧಿಸದೆ ಬಿಡಲಿಲ್ಲ. ಈಗಲೂ ಎರಡು ತಿಂಗಳಿಗೊಮ್ಮೆ ಇತಾಲಿಯನ್ ಪುಸ್ತಕಗಳನ್ನು ತೆರೆದು ಗಂಭೀರವಾಗಿ ನನ್ನಷ್ಟಕ್ಕೇ ನಾನು ಓದಿಕೊಳ್ಳು ವಾಗ ನನ್ನ ಮಕ್ಕಳೆಲ್ಲಾ ನಗುವುದುಂಟು.

"ನಾಪೊಲೀ ಏ ಉನ ಬೆಲ್ಲ ಚಿತ್ತ" (Napoli e Una bella citta) ನಾಪೊಲಿ ಒಂದು ಸುಂದರವಾದ ನಗರ – ಎಂಬಲ್ಲಿಂದ ನಮಗೆ ಇನ್‌ಸ್ಟಿ ಟ್ಯೂಟಿನ ಇತಾಲಿಯನ್ ಪಾಠಕ್ರಮ ಆರಂಭವಾಯಿತು. ಇತಾಲಿಯನ್ ಕಲಿಸಲು ನನ್ನ ಸ್ನೇಹಿತ ಇಂಜಿನಿಯರ್ ಬೊನೆಯೋನ, ಚಿಕ್ಕ ವಯಸ್ಸಿನ

ಹೆಂಡತಿ ಆನಾ ( Anna e Una bella donna ) ಆನಾ –ಏ ಉನ ಬೆಲ್ಲ ದೊನ್ನ – ಆನಾ ಒಬ್ಬ ಸುಂದರ ಸ್ತ್ರೀ – ಎನ್ನುವಷ್ಟು ನಮ್ಮ ಪಾಠ ಮುನ್ನಡೆಯಬೇಕಾದರೆ ನಾಲ್ಕು ವಾರವೇ ಹಿಡಿಯಿತು. ಈ ಇತಾಲಿಯನ್ ಪಾಠಕ್ರಮವನ್ನು ನಮ್ಮ 'ಇನ್ಸ್ಟೀ' ಪಶ್ಚಾತ್‌ಬುದ್ಧಿಯಿಂದ ಸೇರಿಸಿದ ಹಾಗಿತ್ತು; ಏಕೆಂದರೆ ಇಟಲಿಯ ವಿದ್ಯಾಭ್ಯಾಸಕ್ರಮದಲ್ಲಿ ಇತಾಲಿಯನ್ ಪಾಠ ನಡೆಯುತ್ತಿದ್ದುದು ಬೇರೆಯೇ ತರ. ಪೆರು ಜಾ ( Peruga ) ಎಂಬಲ್ಲಿ ಇತಾಲಿಯನ್ ಭಾಷೆಯನ್ನು ಕಲಿಸುವ ವಿಶೇಷ ಸಂಸ್ಥೆ ಒಂದಿದೆ. ಇತಲಿಗೆ ವಿದ್ಯಾರ್ಥಿಗಳಾಗಿ ಬರುವವರಿಗೆಲ್ಲ ಮೊದಲ ಮೂರೋ–ಆರೋ ತಿಂಗಳು ಅಲ್ಲಿ ಶೀಘ್ರ ತರಬೇತಿಯನ್ನಿತ್ತು ಆಮೇಲೆ ಅವರ ವರ್ಗಗಳಿಗೆ ಕಳಿಸುತ್ತಾರೆ. ಅಂಥ ಒಬ್ಬ ಅಫ್ಘಾನ್ ಮೆಡಿಕಲ್ ವಿದ್ಯಾರ್ಥಿಯ ಸ್ನೇಹ ನನಗೆ ದೊರೆಯಿತು. ಆತ ನಿರರ್ಗಳವಾಗಿ ಇತಾಲಿಯನ್ ಭಾಷೆಯಲ್ಲಿ ಆಡಬಲ್ಲ. ನಮ್ಮ ಇತಾಲಿಯನ್ ಪಾಠ ಉಳಿದ ಪಾಠಗಳ ಕೊನೆಯಲ್ಲಿ ಪ್ರತಿನಿತ್ಯ ಮೂರು ತಾಸೆಂದು ನಿರ್ಣೀತವಾಯಿತು. ಆರು ತಾಸುಗಳ ಅರ್ಥಶಾಸ್ತ್ರದ ಬಳಿಕ ಮೂರು ತಾಸು ಇತಾಲಿಯನ್ ಭಾಷೆ ಎಂಬುದಾಗಿ ಪ್ರಥಮ ಮಾಸದಲ್ಲಿ ನಡೆದೇ ನಡೆಯಿತು. ಒಂದು ವಾರ ಆನಾ ಪಾಠ ಮಾಡಿದ ಮೇಲೆ ಇತಾಲಿಯನ್ ಭಾಷಾ ಪಂಡಿತನೊಬ್ಬ ಹೊಸ ರೀತಿಯ ಪಾಠಕ್ರಮವನ್ನು ತೊಡಗಿದ. ಬರ್ಲಿಟ್ಸ್ (Berlitz) ರೀತ್ಯಾ ಕಲಿಸುವುದರಿಂದ ಆರು ತಿಂಗಳಲ್ಲಿ ಭಾಷೆಯ ಸ್ವರೂಪ ಮತ್ತು ರಚನೆ, ವ್ಯಾಕರಣ ಮತ್ತು ಪದಾವಳಿ ವಿದಿತವಾಗುವುದು ಮಾತ್ರವಲ್ಲದೆ ಸಂಭಾಷಣೆ ನಡೆಸುವ ಶಕ್ತಿಯೂ ಉತ್ಪನ್ನವಾಗುವಂತೆ ಬರ್ಲಿಟ್ಸ್ ಪದ್ಧತಿ ರಚಿತವಾಗಿದೆ. ನಮ್ಮ ಇತಾಲಿಯನ್ ಪ್ರಾಧ್ಯಾಪಕನಂತೂ ಇಂಗ್ಲೀಷಿನ ಒಂದಕ್ಷರವನ್ನೂ ಉಸುರಲೊಲ್ಲ. ಪ್ರತ್ಯಕ್ಷ ದರ್ಶನದಿಂದ ಮೊದಲು ಆತ ಅನೇಕ ವಾಕ್ಯಗಳನ್ನು ರಚಿಸುತ್ತಿದ್ದ. ಅನಂತರ ನಾವು ಅವನ ಪ್ರಶ್ನೆಗಳಿಗೆ ಉತ್ತರ ಅಥವಾ ಉತ್ತರಗಳಿಗೆ ಪ್ರಶ್ನೆ ನೀಡಬೇಕು. ಪಾಠ ಸ್ವಾರಸ್ಯವಾಗಿದ್ದರೂ ದಿನಾಂತ್ಯದಲ್ಲಿ ಬರುತ್ತಿದ್ದುದರಿಂದ ಯಾರಿಗೂ ಬೇಡವಾಗಿತ್ತು. ಅರೆಮನಸ್ಸಿನಿಂದ ಕಲಿಯುತ್ತಿದ್ದ ನಮ್ಮ ಗುಂಪು ವಾರದಿಂದ ವಾರಕ್ಕೆ ಕ್ಷೀಣಿಸಿ ಬೆರಳೆಣಿಕೆಯ ಸಂಖ್ಯೆಗೆ ಇಳಿದಾಗ ಇನ್‌ಸ್ಟಿಟ್ಯೂಟ್ ಪಾಠವನ್ನು ಸ್ಥಗಿತಗೊಳಿಸಿ ಮರ್ಯಾದೆ ಕಾಪಾಡಿಕೊಂಡಿತು.

ಕಿವಿಯಿಂದ ಕೇಳಿದರೂ ಭಾಷೆ ಬರುತ್ತದೆನ್ನುವುದಕ್ಕೆ ನನ್ನ ಇತಾಲಿಯನ್ ಭಾಷಾ ಪ್ರಭುತ್ವ ಸಾಕ್ಷಿಯಾದೀತು. ನಿತ್ಯವೂ ಆರು ತಾಸಿನ ಪ್ರವಚನದಲ್ಲಿ ತರ್ಜುಮೆಯ ಕಾಲವನ್ನು ಬಿಟ್ಟರೆ ಉಳಿದ ನಾಲ್ಕೂವರೆ ತಾಸು ಇತಾಲಿಯನ್ ಭಾಷೆಯನ್ನು ಬಿಡದೆ ಆಲಿಸುವುದರಿಂದ ಉಚ್ಚಾರಣೆಯಾಗಲಿ, ಧ್ವನಿಯು ಏರಿಳಿತವಾಗಲಿ ಕೇಳುವ ಕಿವಿಯುಳ್ಳವರಿಗೆ ಬರದೆ ಇದ್ದೀತೆ? ಪೂರ್ತಿ ಅರ್ಥವಾಗದಿದ್ದರೂ ಇತಾಲಿಯನ್ ಭಾಷೆಯನ್ನು ಅವರಂತೆ ಈಗ ಓದಬಲ್ಲೆ. ನಾಲ್ಕಾರು ವಾಕ್ಯಗಳನ್ನು ಹೆಣೆದು ತಡವರಿಸಿಯಾದರೂ ಆಡಬಲ್ಲೆ. ಕ್ರಿಸ್ಮಸ್ ವಾರದಲ್ಲಿ ರೋಮಿಗೆ ತೆರಳಿದಾಗ ಖರ್ಚಿಗೆ ತಕ್ಕಷ್ಟು ಇಟಾಲಿಯನ್ ಸಂಪಾದಿಸಿದ್ದೆ. ಇತಲಿಯಿಂದ ಹೊರಡುವ ವೇಳೆ ಬಂದಾಗ ಇತಾಲಿಯನ್ ಬ್ಯಾಂಕೊಂದರ ಅಧಿಕಾರಿಯೊಡನೆ ಅರ್ಧ ತಾಸು ಇತಾಲಿಯನ್ ಭಾಷೆಯಲ್ಲಿಯೇ ಸಂಭಾಷಣೆ ನಡೆಸಿ ನನ್ನ ಸ್ನೇಹಿತ ಆಪಾನಿಂದ "ಬ್ರಾವೊ ಬ್ರಾವೊ" ಎಂದು ಬೆನ್ನು ಚಪ್ಪರಿಸಿಕೊಂಡೆ.

ಆದರೂ ನನ್ನ ಕೊರಗು ಉಳಿದೇ ಉಳಿಯಿತು – ಇತಲಿಯ ಹಾದಿ ಬೀದಿಗಳಲ್ಲಿ, ಊರ ಜನರೊಡನೆ, ಧೈರ್ಯವಾಗಿ ಆಡಬಲ್ಲ ಶಕ್ತಿ ನನ್ನಲ್ಲಿರಲಿಲ್ಲವಲ್ಲಾ? ಇಂಗ್ಲಿಷಿನ ಭಾರಿ ಗುರುತ್ವವನ್ನು ಇನ್ನೂ ಒಪ್ಪಿ ಆ ಭಾಷೆಯನ್ನು ಅಪ್ಪಿ ಹಿಡಿದಿರುವವರು ನಾವು. ಇಂಗ್ಲಿಷ್ ಇಲ್ಲದೆನೆ ಸರಾಗವಾಗಿ ಸರ್ಕಾರವನ್ನು ನಡೆಸುವ, ಆರ್ಥಿಕ ವೈಜ್ಞಾನಿಕ ಅಭಿವೃದ್ಧಿಯನ್ನು ಸಾಧಿಸುತ್ತಿರುವ – ಇತಲಿಯನ್ನು ಕಂಡು ನನ್ನ ಹೃದಯ ಪುಲಕಿತವಾದದ್ದುಂಟು. ಇತಾಲಿಯನ್ ಪುಸ್ತಕವನ್ನು ಕೊಳ್ಳುವ ಅಗತ್ಯವಾಗಲಿ ಸಾಮರ್ಥ್ಯವಾಗಲಿ ಇಲ್ಲದ ನಾನು ನಾಪೂಲಿಯ ಹಲವಾರು 'ಲಿಬ್ರೇರಿಯಾ' (ಪುಸ್ತಕದಂಗಡಿ)ಗೆ ಹೋಗಿ ಇತಾಲಿಯನ್ ವೈಜ್ಞಾನಿಕ ಗ್ರಂಥಗಳನ್ನೂ, ಕಥೆ ಕಾದಂಬರಿಗಳನ್ನೂ ತಿರುವಿ ಹಾಕಿದ್ದುಂಟು. ಉಂಬರ್ತೊ ಗೆಲರಿಯಲ್ಲಿ ಪ್ರತಿ ಸಂಜೆ ನೆರೆಯುತ್ತಿದ್ದ ಗ್ರಂಥಗಳ ಸಂತೆಯಲ್ಲಿ ಕೂಲಂಕಷವಾಗಿ ಅಲೆದಾಡಿ, ಪುಸ್ತಕಗಳನ್ನೆತ್ತಿ ಅವುಗಳ ಮುದ್ರಣದ ಓರಣವನ್ನು ನನ್ನಷ್ಟಕ್ಕೆ ಮೆಚ್ಚಿಕೊಂಡದ್ದುಂಟು. ಇತಾಲಿಯನರೂ ಇಂಗ್ಲಿಷನ್ನು ಓದುತ್ತಾರೆ – ಯಾರಿಗೆ ಅನಿವಾರ್ಯವೋ ವಿಜ್ಞಾನದಲ್ಲಿ, ವಿದೇಶಾಂಗ ವ್ಯವಹಾರದಲ್ಲಿ ಆಯಾತ ನಿರ್ಯಾತ ಸಂಸ್ಥೆಗಳಲ್ಲಿ ದುಡಿಯುವ ಜನರಷ್ಟೇ ಓದಿಕೊಳ್ಳು,

ತ್ತಾರೆ, ಚೆನ್ನಾಗಿ ಓದಿಕೊಂಡಿರುತ್ತಾರೆ ಆದರೆ ಸಾಮಾನ್ಯ ಜನ ಯಾರೂ ಇಂಗ್ಲಿಷು ಬಲ್ಲವರಲ್ಲ. ಇತಾಲಿಯನ್ ಭಾಷೆಯೊಂದೇ ಅವರಿಗೆ ತಾರಕ. ಇದರಿಂದ ಇತಲಿಯ ಪ್ರಗತಿ ಕುಂಠಿತವಾಗಿಲ್ಲ. ಯುರೋಪಿನಲ್ಲಿ ಎಲ್ಲಿ ಪ್ರವಾಸ ಮಾಡಬೇಕಾದರೂ ಫ್ರೆಂಚ್ ಭಾಷೆಯೇ ಮಾಧ್ಯಮ. ಇಂಗ್ಲಿಷ್ ಹಲಕೆಲವು ಹೋಟೆಲುಗಳಲ್ಲಿ ಮಾತ್ರ ಚಲಾವಣೆಗೆ ಬಂದೀತು. ಇಂಡಿಯ ದಿಂದ ಸಾವಿರಾರು ಜನ ಸಾಮಾನ್ಯವಾಗಿ ಅಮೆರಿಕದಿಂದ ಹಿಂತಿರುಗಿ ಬರು ವಾಗ – ಬರ್ಲಿನ್ ನೋಡಿದೆ, ರೋಮ್ ನೋಡಿದೆ, ಪ್ಯಾರಿಸ್ ನೋಡಿದೆ – ಎನ್ನುವಾಗ ಅವರು ನೋಡಿದ್ದು ಹೋಟೇಲಿನ ಕೋಣೆ, ರಸ್ತೆಯ ಬಾಜೂ ಅಂಗಡಿಗಳು, ಡಿಪಾರ್ಟಮೆಂಟ್ ಸ್ಟೋರುಗಳು, ಜನಜಂಗುಳಿ – ಎಲ್ಲ ಸಿನೆಮಾಯ ದೃಷ್ಟಿಯಿಂದ – ಎಂದು ತಿಳಿಯಬೇಕು. ಅಲ್ಲದೆ ಮಾನವೀಯ ದೃಷ್ಟಿಯಿಂದ ಒಂದು ದೇಶವನ್ನು ತಿಳಿಯುವುದು – ಆಯಾ ಭಾಷಾಜ್ಞಾನವಿಲ್ಲದೆ ದುಸ್ಸಾಧ್ಯವೆಂಬುದನ್ನು ನಾನು ಪ್ರತ್ಯಕ್ಷವಾಗಿ ಅನು ಭವಿಸಿದ್ದೇನೆ. ನಾಪೊಲಿಯಲ್ಲಿ ಆರು ತಿಂಗಳು ವಾಸವಾಗಿದ್ದರೂ ಅಲ್ಲಿನ ಹತ್ತು ಸಮಸ್ತರ ಪರಿಚಯ ನನಗೆ ಸಾಧ್ಯವಾಗಲಿಲ್ಲ. ಇನ್‌ಸ್ಟಿಟ್ಯೂಟಿನ ನಮ್ಮ ಇತಾಲಿಯನ್ ವರಿಷ್ಠರು, ಸಹಾಧ್ಯಾಯಿಗಳು, ಸಿನ್ಯಾರ್ ಆಪಾ ಪರಿಚಯಿಸಿಕೊಟ್ಟ ಅವರ ಆಪ್ತೇಷ್ಟರು, ಹೊಟೇಲಿನ ಜೊಸೆಪ್ಪೆ– ಇವ ರಿಷ್ಟೇ ಜನ ನನ್ನನ್ನು ಬಲ್ಲರು – ಆರು ತಿಂಗಳ ಸಹವಾಸದಿಂದಲೂ – ಎನ್ನುವಾಗ ನಾಲ್ಕು ದಿನ ಮೂಕನಾಗಿ ಅಲೆದೋ ರಸ್ತೆ ಅಳೆದೋ ವಿದೇ ಶಾನುಭವ ಗಿಟ್ಟಿಸಿಕೊಳ್ಳುವುದು ಭಿನ್ನ ಭಿನ್ನ ಭಾಷಾಭಾಷಿಗಳ ಯುರೋಪಿ ನಲ್ಲಿ ಅಸಾಧ್ಯವೆಂಬ ತೀರ್ಮಾನಕ್ಕೆ ಬಂದಿದ್ದೇನೆ. ಯಾವ ದೇಶಕ್ಕೆ ನಾವು ಹೋಗುತ್ತೇವೊ ಅಲ್ಲಿನ ಭಾಷಾಧ್ಯಯನವನ್ನು ಒಂದು ಉಪಕರಣ ವೆಂಬುದಾಗಿ ಭಾವಿಸಿ ಅದರಲ್ಲಿ ಸಿದ್ಧರಾಗಬೇಕಾದ್ದು ನಮ್ಮ ತರುಣರ ಕರ್ತವ್ಯವೆಂದು ನನ್ನ ಭಾವನೆ.

## ೦ ೦ ಕಂಡು ಸಾಯಬೇಕು

ಇಂಗ್ಲಿಷ್ ಓದಿದ ಎಲ್ಲರಿಗೂ ನೇಪಲ್ಸಿನ ಪರಿಚಯವಿದೆ. ಎಲ್ಲಿಗೆ ಹೋಗುತ್ತೀರಿ, ನೇಪಲ್ಸಿಗೊ, Scc Naples and die ಆ ನೇಪಲ್ಸ್

ತಾನೇ? ಎಂದು ಹೇಳಿ ಕೂಡಲೇ ನಾಲಗೆ ಕಚ್ಚಿಕೊಂಡವರೆಷ್ಟೋ ಸ್ನೇಹಿತರು. ಅವರಿಗೆ ನನ್ನ ಆಶ್ವಾಸನೆ ಇಷ್ಟು ಹೌದು ನೋಡಿ ಬರುತ್ತೇನೆ, ಕೂಡಲೆ ಸಾಯಲಾರೆ; ಕಾಲಕ್ರಮೇಣ ಗಾದೆಯ ಎರಡನೆ ಭಾಗವನ್ನು ಪೂರ್ತಿ ಮಾಡಿಯೇನು ಎನ್ನುತ್ತಿದ್ದೆ. ನೇಪಲ್ಸಿನ ಸೌಂದರ್ಯದ ಪರಾಕಾಷ್ಠೆಯನ್ನು ಸೂಚಿಸುವ ಈ ಗಾದೆ ಮಾತಿನಲ್ಲಿ ಸತ್ಯಾಂಶವುಂಟೆಂದು ಮೊದಲ ನೋಟಕ್ಕೇ ಅನಿಸದಿರದು. ಅರ್ಧವೃತ್ತಾಕಾರದಲ್ಲಿ ಹಬ್ಬಿರುವ ಕಡಲ ಕರೆ, ಕರೆಗಂಟಿಕೊಂಡು ನಾಗವೇಣಿಯಂತೆ ಹರಿಯುವ ಕರೆದಾರಿ 'ಮರೀನಾ', ಬೀದಿಗುಂಟ ಗುಡ್ಡಬೆಟ್ಟಗಳ ತಪ್ಪಲಲ್ಲಿ ಸಾಲಾಗಿ ನಿಂತ ಹಳೆಯ ಹೊಸ ಜನನಿಬಿಡ ವಸತಿ ಸ್ಥಾನಗಳು – ಹಿನ್ನೆಲೆಯಲ್ಲಿ ಕಾವಲು ನಿಂತ, ಅವಳಿ ಶಿಖರಗಳ ವೆಸೂವಿಯಸ್ ಬೆಟ್ಟದ ಛಾಯಾಪರದೆ, ನೀಲವಾದ ಕಡಲಲ್ಲಿ ಹತ್ತೆಂಟು ಮೈಲುಗಳ ಅಂತರದಲ್ಲಿ ತೊಳೆದಿಟ್ಟ ಮಣಿಗಳಂತೆ ಶೋಭಿಸುವ ಮನಮೋಹಕ ಕಾಪ್ರಿ, ಇಸ್ಕಿಯಾ ದ್ವೀಪಗಳು, ಹೊರವಲಯದ ಸೊರ್ರೆಂತೋ, ಅಮಾಲ್ಫಿ, ಕಾಸ್ತೆಲ್ಲಮಾರೆ ಮುಂತಾದ ವಿಶ್ರಾಮಧಾಮಗಳು, ಕೂಗಳತೆಯಲ್ಲಿರುವ ಕಸೆರ್ತದ 'ವೃಂದಾವನ' ಉಪವನ, ಪಾಸ್ತುಮಿನ ಗ್ರೀಕ ಶಿಲ್ಪ, ನಾಪೊಲಿ ನಗರದೊಳಗಿನ ಅರಮನೆಗಳು ವಸ್ತುಸಂಗ್ರಹಾಲಯಗಳು – ಒಂದೇ ಎರಡೇ, ಮನುಷ್ಯಮಾತ್ರನಾದವನ ಸಕಲೇಂದ್ರಿಯಗಳನ್ನು ಆಕರ್ಷಿಸಬಲ್ಲ ನೈಸರ್ಗಿಕ ಮತ್ತು ಮಾನವ ನಿರ್ಮಿತ ಕಲಾತ್ಮಕ ಸೌಂದರ್ಯ ಮೇಳವಿಸಿ ನಾಪೊಲಿಯಂತೆ ಒಂದೇ ಕಡೆ ಎಲ್ಲೂ ದೊರೆಯಲಾರದು. ನಾಪೊಲಿಯ ಹವೆಯಾದರೂ ಸರಿಯೆ ಪ್ರಖ್ಯಾತ ಮೆಡಿಟರೇನಿಯನ್ ಹವಾಮಾನ – ಚಳಿಗಾಲದಲ್ಲಿ ಚಳಿ ಇಲ್ಲ. ಸೆಕೆಗಾಲದಲ್ಲಿ ಸೆಕೆ ಇಲ್ಲ. 'ಚಳಿಗಾಲದಲ್ಲಿ ಕಡಲ ಸ್ನಾನ ಬೇಕಾದವರು ಇಲ್ಲಿ ಬನ್ನಿ' ಎಂದು ಒಂದು ಇತಾಲಿಯನ್ ಜಾಹೀರಾತು ಸಾರುತ್ತದೆ. ಆಲ್ಪ್ಸ್ ಪರ್ವತದ ಬಡಗಣ ಜರ್ಮನಿ, ಫ್ರಾನ್ಸ್ ಇತ್ಯಾದಿ ದೇಶಗಳಲ್ಲಿ ಚಳಿಗಾಲದ ಬವಣೆ ಅತಿರೇಕವಾಗಿದ್ದರೆ ದಕ್ಷಿಣ ಇತಲಿಯಲ್ಲಿ ಹಿತಮಿತವಾಗಿರುತ್ತದೆಂಬುದಕ್ಕೆ ಇತಲಿಯ ಕರಾವಳಿಯಲ್ಲಿ ಹಿಮಪಾತವಾಗುವುದಿಲ್ಲ ಎಂಬುದನ್ನು ನಿದರ್ಶನವಾಗಿ ಕೊಡಬಹುದು. ದಕ್ಷಿಣ ಭಾಗದಲ್ಲಿ ಇತಾಲಿಯನರು ನಿರ್ಮಿಸುತ್ತಿರುವ ಒಂದು ರಾಜಮಾರ್ಗಕ್ಕೆ "ಆಟೋಸ್ತ್ರಾದ ದೆಲ್‌ಸೋಲೆ" (ಬಿಸಿಲಿಗೆ ಹೋಗುವ ರಾಜಮಾರ್ಗ) ಎಂದು ನಾಮಕರಣ ಮಾಡಿದ್ದಾರೆ. ಈ ಹಿತ

ಮಿತವಾದ ಹವಾಮಾನಕ್ಕೂ, ಕಡಲಕರೆಯ ಮರಳ ರಾಶಿಯ ಸೂರ್ಯ ಸುಖಸಂಸ್ಪರ್ಶಕ್ಕೂ ಕಡಲ ಮೋಹಕ್ಕೂ ಮೋಹಿಸಿ ಯುರೋಪಿನ ಇತರ ದೇಶಗಳಿಂದಲೂ ಅಮೇರಿಕದಿಂದಲೂ ಲಕ್ಷಗಟ್ಟಲೆ ಪ್ರವಾಸಿಗಳು ಇತಲಿಗೆ ವರ್ಷಂಪ್ರತಿ ಬಂದುಹೋಗುತ್ತಾರೆ. ಅವರೆಲ್ಲ ಹೆಚ್ಚಾಗಿ ಜೂನ್‌ನಿಂದ ಅಕ್ಟೋಬರ್ ವರೆಗೆ ಬೇಸಗೆಯಲ್ಲಿ ಬರತಕ್ಕವರು. ಅವರ ಸ್ವಾಗತಕ್ಕಾಗಿ ನಾಪೊಲಿ ಸಿದ್ಧವಾಗುವುದನ್ನು ನೋಡಿದ ನನಗೆ ನಮ್ಮಲ್ಲಿ ಹಳ್ಳಿಯ ಮದುವೆಯ ಚಪ್ಪರದ ಸಂಭ್ರಮ ನೆನಪಾಯಿತು. ಇನ್ನೂ ಚಳಿಗಾಲ ಮುಗಿಯಲಿಲ್ಲ ಎನ್ನುವಾಗಲೇ ನಗರದ ನಡುವಣ ಎಲ್ಲ ಪಾರ್ಕುಗಳನ್ನು ಅಲಂಕರಿಸುವ ಕೆಲಸ ಆರಂಭವಾಯಿತು. ಪಚ್ಚೆ ಪಸುರಿಲ್ಲದ ಮಾರ್ಗಾಂತರದ ತೆರೆ ಜಾಗಗಳಲ್ಲಿ ಎಲ್ಲಿಂದಲೋ ಗುಲಾಬಿಯ ತೊಟ್ಟಿಗಳು ಬೆಳಗಾಗುವುದರೊಳಗೆ ಸಾಲುಸಾಲಾಗಿ ನಿಂತು ಬೋಳು ಭೂಮಿಗೆ ಬಣ್ಣ ಹಚ್ಚಿದುವು. ಎಲ್ಲಿ ನೋಡಿದರೂ ನಗರವನ್ನು ಶುಚಿಗೊಳಿಸುವ, ಸಿಂಗರಿಸುವ ಸಂಭ್ರಮ. ಆಗಂತುಕರ ಸ್ವಾಗತಕ್ಕೆ ಸಿದ್ಧವಾಗುತ್ತಿದ್ದ ಹೋಟೇಲುಗಳೋ ಅಸಂಖ್ಯಾತ. ಪ್ರತಿಯೊಂದು ವರ್ಗದ ಜನಕ್ಕೂ ಅನುಕೂಲವಾಗುವಂಥ ಪ್ರಥಮ – ಮಧ್ಯಮ – ಅಧಮ – ಅಲ್ಲ – ಸಾಮಾನ್ಯ, ತದನಂತರ ಅಗ್ಗ ದರದ ಪೆನ್ಸಿಯೋನೆ – ನಾಪೊಲಿ ನಗರಪಾಲಿಕೆಯ ಸರಹದ್ದಿನೊಳಗೆ ಇರುವುವೆಲ್ಲಾ – ಪ್ರವಾಸಿಗಳ ಸುಖ ಸೌಕರ್ಯಕ್ಕಾಗಿ ಸನ್ನದ್ಧವಾಗುತ್ತವೆ.

ನಾಪೊಲಿಗೆ ಬರಲು ಎಲ್ಲ ಬಗೆಯ ವಾಹನ ಸೌಕರ್ಯವೂ ಇದೆ. ನನ್ನಂತೆ ಹಡಗಿನಲ್ಲಿ ಒಂದು ರೇವು ಪಟ್ಟಣವಾಗಿರುವ ನಾಪೊಲಿಯಲ್ಲಿ ಡೆಕ್ಕಿನಿಂದ ನೇರವಾಗಿ ಭೂಮಿಗಿಳಿಯಬಹುದು, ಅಥವಾ ಪ್ರಪಂಚದ ಯಾವ ಕಡೆಯಿಂದಲೂ ರೋಮ್ ನಗರಕ್ಕೆ ಬಂದು ಅಲ್ಲಿಂದ ಅಲಿತಾಲಿಯದ ಸ್ಥಾನಿಕ ವಿಮಾನ ಸಾರಿಗೆಯನ್ನು ಬಳಸಿ ನಾಪೊಲಿಗೆ ಅರ್ಧ ತಾಸಿನಲ್ಲಿ ತಲಪಬಹುದು. ಅಥವಾ ಟ್ರಾನ್ಸ್ ಯುರೋಪಿಯನ್ ರೈಲುಗಾಡಿಗಳ ಮೂಲಕ ಯುರೋಪಿನ ಯಾವ ದೇಶದಲ್ಲಿಯೂ ರೈಲು ಹಿಡಿದು ಇಲ್ಲಿಗೆ ಬರಬಹುದು. ಇಲ್ಲಿಗೆ ಬಂದಮೇಲೆ ಬೇಸಗೆಕಾಲವಾದರೆ ಅನಾಯಾಸವಾಗಿ ನಡೆದುಕೊಂಡೇ ಪುರಭ್ರಮಣ ಮಾಡುವುದು ಯುಕ್ತ. ಅಲ್ಲವಾದರೆ ಇತಾಲಿಯನ್ ಸರ್ಕಾರಿ ಕಂಪೆನಿಯ 'ಚಿತ್' (Cit) ಬಸ್ಸುಗಳಲ್ಲಿ ಸಂದರ್ಶನೀಯ ಸ್ಥಳಗಳನ್ನು ನೋಡಿಕೊಂಡು ಬರಬಹುದು. ವೆಸುವಿಯ

ಸ್ಸಿಗೆ ಹೋಗಲು 'ಸರ್ಕಮ್ ವೆಸೂವಿಯಾನಾ' ರೈಲಿದೆ. ಇದು ಖಾಸಗಿ ರೈಲುದಾರಿ. ಕಾಪ್ರಿ ಇಸ್ಕಿಯಾಗಳಿಗೆ ಹೋಗಲು ಮರಿ ಗಾತ್ರದ್ದಾದರೂ ಸಕಲ ಸೌಕರ್ಯಗಳನ್ನೊಳಗೊಂಡ ಮರಿ ಹಡಗುಗಳಿವೆ. ಅತಿ ಸುಲಭದ ವೆಚ್ಚದಲ್ಲಿ ಈ ಸುಂದರ ದ್ವೀಪಗಳಲ್ಲಿ ಅಲೆದಾಡಿ ಬರಬಹುದು, ಬೇಕಾದರೆ ಆ ದ್ವೀಪದ ಹೋಟಲುಗಳಲ್ಲಿ ರಾತ್ರಿ ಕಳೆಯಬಹುದು. ಗಂಭೀರವಾಗಿ ಉನ್ನತ ಮಟ್ಟದಲ್ಲಿ ವಿಹಾರವನ್ನು ಬಯಸುವಂಥವರಿಗೆ ಮರೀನಾದ ವಿಯಾ ಪಾರ್ತೆನೋಪಿನ ಪ್ರಥಮ ವರ್ಗದ ಹೋಟೆಲುಗಳ ಗಾಜಿನ ಕಿಟಕಿಯ ಬಳಿ ಕೂತಿದ್ದು ನಾಪೋಲಿ ಕೊಲ್ಲಿಯನ್ನು ಪ್ರವೇಶಿಸುವ ಹಡಗು ಗಳನ್ನೋ ಕಡಲ ಸ್ನಾನದ ಮೋಹಕ ದೃಶ್ಯಗಳನ್ನೋ ನೋಡುತ್ತಾ ಹಗಲನ್ನು ಕಳೆದರೆ ಸಂಜೆಯಾಗುತ್ತಲ್ಲೇ ಸಾನ್ ಕಾರ್ಲೋದ ಆಪೆರಾ ಕಣ್ಸನ್ನೆ ಮಾಡೀತು. ಮುಂಜಾನೆ ಪ್ರಖ್ಯಾತ ಮ್ಯೂಸಿಯಮ್‌ಗಳನ್ನು ನೋಡಲು ತೆರಳಬಹುದು. ಪ್ರಸಿದ್ಧ ಪಾಂಪೇ ನಗರವು ಹತ್ತಿರದಲ್ಲೇ ಇದೆ. ಅದಕ್ಕೊಂದು ಸಂಜೆ ಮೀಸಲಿಡಬಹುದು.

ಪ್ರವಾಸೋದ್ಯಮವನ್ನು ಬೃಹತ್ತಾಗಿ ಬೆಳೆಸಿ ವರ್ಷಕ್ಕೆ ೮೦೦ ಕೋಟಿ ರೂಪಾಯಿಗಳಷ್ಟು ವಿದೇಶ ವಿನಿಮಯವನ್ನು ಗಳಿಸುವ ಇತಲಿ ದೇಶದಲ್ಲಿ ವರ್ಣದ್ವೇಷವೆಂಬುದೇ ಇಲ್ಲ. ನನ್ನಂತೆ ಕರಿಚರ್ಮ ಹೊತ್ತರೇನು, ಅಮೆರಿ ಕದ ಕರಿಚರ್ಮದವರ ಹತ್ತಿರ ದುಡ್ಡಿರುವುದರಿಂದ ಯಾರನ್ನೂ ಹೀನಯಿಸ ತಕ್ಕದ್ದಲ್ಲವೆಂಬುದನ್ನು ಇತಾಲಿಯನರು ನಂಬಿ ಆಚರಿಸುತ್ತಿದ್ದಾರೆ. ಅಲ್ಲದೆ ಇತಾಲಿಯನ್ ಜನಪದವೂ ಒಂದು ಮಿಶ್ರವರ್ಣೀಯ ಜನಪದವೇ ಆಗಿದೆ. ಉತ್ತರ ಇತಲಿಯವರು ಶುದ್ಧ ಶ್ವೇತವರ್ಣೀಯರು; ನೀಳ ಕಾಯರು, ನೀಲನೇತ್ರರು. ದಕ್ಷಿಣದವರು ಹಳದಿ ಬಿಳುಪು ತೊಗಲಿನವರು ಕುಳ್ಳರು, ಕರಿಕಣ್ಣಿನವರು; ಸಿಸಿಲಿ ದ್ವೀಪದಲ್ಲಿ ಕರಿಯೋ ಕಂದೋ ನನ್ನಂಥವರೇ ಇರುತ್ತಾರೆಂಬುದಕ್ಕೆ ಒಂದು ಸಾಕ್ಷಿ ನನಗೆ ದೊರೆಯಿತು. ವಿದೇಶೀಯ ವಿದ್ಯಾರ್ಥಿಗಳ ಹಿತಸಂರಕ್ಷಣಾಧಿಕಾರಿ ಅಡ್ಮಿರಲ್ ವಿಯೋಲನ ಶ್ರೀಮತಿ ನನ್ನನ್ನು ಮೊದಲು ಭೆಟ್ಟಿಯಾದಾಗ "ನೀನು ಸಿಸಿಲಿಯವನೇ ?" ಎಂದು ಕೇಳಿದರು. ಅಪಾಯಕರವಾದ ಈ ಸಾಮ್ಯವನ್ನು ನನ್ನ ಬಣ್ಣಕ್ಕೆ ಮಾತ್ರ ಸೀಮಿತಗೊಳಿಸಿ, ಗುಣದ ಮಟ್ಟಿಗೆ ಬಿಡಬೇಕೆಂದು ಪ್ರಾರ್ಥಿಸಿಕೊಂಡೆ. (ಸಿಸಿಲಿಯೆಂದರೆ ದರೋಡೆಕಾರರ ದ್ವೀಪವೆಂದು ಈಗಲೂ ಪ್ರಚಲಿತ

ವಾಗಿದೆ.) ವರ್ಣದ್ವೇಷವಾಗಲಿ, ಭಾಷಾ ದುರಭಿಮಾನವಾಗಲಿ ಇಲ್ಲದ ಇಟಲಿಯಲ್ಲಿ ಸಕಲ ದೇಶದ ಜನ ಒಂದೇ ಸಮನಾದ ಆದರಾತಿಥ್ಯವನ್ನು ಪಡೆಯಬಲ್ಲರು. ವ್ಯವಹಾರಚತುರರಾದ ಇತಾಲಿಯನರು ತಮ್ಮ ಪರ ಸಹಿಷ್ಣು ಗುಣವನ್ನು ಹಣವಾಗಿ ಪರಿವರ್ತಿಸುತ್ತಿದ್ದಾರೆ. ಹಣಕ್ಕಾಗಿ ಈ ದೊಡ್ಡ ಗುಣವನ್ನಿಟ್ಟುಕೊಂಡಿದ್ದಾರೆನ್ನುವವರೂ ಇರಬಹುದು. ಅಂತೂ ಪ್ರವಾಸಿಗಳಿಗೆ ಇತಲಿ ಸ್ವರ್ಗ, ಅದರಲ್ಲಿಯೂ ನಾಪೊಲಿ ವೈಕುಂಠವೇ.

ನಾಪೊಲಿಯ ಅಗ್ರ ಪಟ್ಟಕ್ಕೆ ಎರಡು ಕಾರಣಗಳನ್ನು ಹೇಳುತ್ತಾರೆ. ಒಂದನೆಯದು ಅಲ್ಲಿನ ನೈಸರ್ಗಿಕ ಸೌಂದರ್ಯ, ಎರಡನೆಯದು ಅಲ್ಲಿನ ಹೆಣ್ಣುಮಕ್ಕಳ ನೈತಿಕ ಶೈಥಿಲ್ಯ. ಸುಲಭದಲ್ಲಿ ಬೆಲೆವೆಣ್ಣುಗಳನ್ನು ಪಡೆ ಯಲು ದಕ್ಷಿಣ ಇತಲಿ ಒಳ್ಳೆಯ ಸ್ಥಳವಂತೆ. ಎಲ್ಲ ರೇವು ಪಟ್ಟಣಗಳ ಲ್ಲಿಯೂ ಇರುವಂತೆ ನಾಪೊಲಿಯಲ್ಲಿಯೂ ನೈಟ್ ಕ್ಲಬ್ಬುಗಳಿದ್ದಾವೆ, ಸ್ವೈರ ಜೀವನಕ್ಕೆ ಅನುಕೂಲವಾದ ಉಪವನಗಳು, ಹೋಟೆಲುಗಳು ಇದ್ದಾವೆ. ಗಂಡು ಹೆಣ್ಣಿನ ಪೂರ್ವಾಪರಗಳನ್ನು ವಿಮರ್ಶಿಸುವ ಗೋಜಿಗೆ ಯಾರೂ ಅಲ್ಲಿ ಹೋಗುವುದಿಲ್ಲ. ಕಡಲ ಬಳಿಯ 'ವಿಲ್ಲಾ ಕಮ್ಯೂನಾಲೆ' ಎಂಬ ಉಪವನದಲ್ಲಿ ಹಾಡುಹಗಲೇ ಪ್ರಣಯಚೇಷ್ಟೆಗಳನ್ನು ನೋಡ ಲೆಂದೇ ನನ್ನ ಸಹಪಾಠಿಗಳು ಹೋಗುವುದಿತ್ತು. ಹತ್ತಿರದಲ್ಲಿ ನಾವು ಸಂಚರಿಸಿದರೂ ಹೆಣ್ಣಾಗಲಿ ಗಂಡಾಗಲಿ ನಾಚುವ ಪರಿಸ್ಥಿತಿಯೇ ಅಲ್ಲಿಲ್ಲ ದಿರುವುದನ್ನು ನೋಡಿದರೆ ಪಶ್ಚಿಮದ ಸ್ವತಂತ್ರ ಜೀವನದ ಒಂದಂಶ ಅರ್ಥವಾಗುತ್ತದೆ. ಇಂಥ ದೃಶ್ಯಗಳನ್ನು ಮಹಾಕವಿ ಕಾಳಿದಾಸ ಯಕ್ಷರ ನಾಡಿಗೆ ರವಾನಿಸಿದ್ದಾನೆ; ಆದರೆ ಪಡುವಣದಲ್ಲಿ ಬಾಳುವೆಯೇ ಒಂದು ವಿಲಾಸವಾಗಿದೆ. ಒಟ್ಟಿನಲ್ಲಿ ನಿಸರ್ಗದತ್ತವಾದ ಸೌಂದರ್ಯ, ಮನುಷ್ಯ ನಿರ್ಮಿತ ಸಾಧನಗಳು ಸಾಲದುದಕ್ಕೆ ವಿಹಾರ ಮತ್ತು ವಿಲಾಸದ ಸಕಲ ಅವಕಾಶಗಳನ್ನೂ ಒಳಗೊಂಡ ನಾಪೊಲಿಯಲ್ಲಿ ಒಂದು ಮಟ್ಟದಲ್ಲಿ ಬದುಕು ಸಂಪೂರ್ಣವಾಗುವುದರಿಂದ ನೋಡಿದ ಮೇಲೆ ಸತ್ತರೆ ಅಡ್ಡಿ ಇಲ್ಲವೆಂದು ತೋರುತ್ತದೆ.

## ೧೦ ಪವಿತ್ರ ನಗರಿಯಲ್ಲಿ

ರೋಮ್ –ಐರೋಪ್ಯ ಇತಿಹಾಸವೇ ಮೈತಳೆದು ನಿಂತಂತೆ ತೋರುವ ಪವಿತ್ರ ನಗರವಾದ ರೋಮ್ (ರೋಮಾ – ಇದರ ಸರಿಯಾದ ಇತಾಲಿ ಯನ್ ನಾಮಧೇಯ)ನ್ನು ನವಂಬರ ೨೪ರಂದು ತಲಪಿದೆ. ನಾಪೊಲಿ ಯಿಂದ ರೈಲ್ವೆ ನಿಲ್ದಾಣದ ವರೆಗೆ ಬೊನೆಯೋ ತನ್ನ ಫಿಯತ್ ಶೀಂಕ್ವೆ ಶೆಂತೋದಲ್ಲಿ (=೫೦೦) ತಂದು ಬಿಟ್ಟ. ರೈಲಿನ ದ್ವಿತೀಯ ವರ್ಗದ ಟಿಕೇಟಿಗೆ ೧೮೦೦ ಲೀರೆ ತೆತ್ತು ಒಂದು ಗಾಡಿಯನ್ನು ಹೊಕ್ಕೆ. ಆಸನ ವ್ಯವಸ್ಥೆ, ಉಷ್ಣೋಪಕರಣ ಮತ್ತು ದೊಡ್ಡ ಗಾಜಿನ ಕಿಟಿಕಿಗಳಿಂದಾಗಿ ಪ್ರಯಾಣವು ನನ್ನ ಪೂರ್ವಭಾವಿ ಕಲ್ಪನೆಯಷ್ಟೇ ಹಿತಕರವಾಗಿತ್ತು. ನನ್ನ ಬದುಕಿನ ಒಂದು ಬಾಲಿಶ ಆಸೆ ಅಂದು ಪೂರ್ತಿಯಾಯಿತು. ಯುರೋಪಿನಲ್ಲಿ ರೈಲಿನಲ್ಲಿ ಕೂತು ಓಡಾಡಬೇಕು ಎಂಬುದೇ ಆ ಆಸೆ. ನಾಪೊಲಿಯಿಂದ ರೋಮ್ ವರೆಗಿನ ೧೨೦ ಮೈಲು ದಾರಿಯನ್ನು ಎರಡೂ ವರೆ ಗಂಟೆಗಳಲ್ಲಿ ಈ ರೈಲು ತಲಪುವುದು. ರೈಲಿನಲ್ಲಿಯೂ ನಾಲ್ಕಾರು ಬಗೆಯವು ಇವೆ. ದಿರೆತ್ತೊ (ನೇರ ಹೋಗುವುವು) ರಾಪಿದಾ (ವೇಗದವು) ರಾಪಿದಿಸ್ಸಿಮಾ (ಇನ್ನೂ ವೇಗದ ಸಂಚಾರವುಳ್ಳವು), ಎಸ್‌ಪ್ರೆಸೋ (ನಮ್ಮ ಲ್ಲಿನ ಎಕ್ಸ್‌ಪ್ರೆಸ್) ಹೊರಗಡೆ ಚಳಿಗಾಲವಾದುದರಿಂದ ಹೊಲಗಳಲ್ಲಿ ಕೃಷಿ ಕರ್ಮ ಬಹಳ ನಿಧಾನವಾಗಿ ಸಾಗುತ್ತಿತ್ತು. ಕಣ್ಣು ಹರಿದಲ್ಲಿ ದ್ರಾಕ್ಷೆಯ ಬಲವಾದ ಬಳ್ಳಿಗಳು ಬೃಹತ್ ಗಾತ್ರದ ಮರಗಳಿಗೆ ಆತುಕೊಂಡು ವ್ಯಾಪಿ ಸಿದ್ದುವು. ಅಲ್ಲಿ ಇಲ್ಲಿ ಕುದುರೆಯನ್ನು ಕಟ್ಟಿ ರೈತರು ಉಳುತ್ತಿದ್ದರು. ರೈಲಿನ ಎರಡನೇ ವರ್ಗ (ಇದು ಸೌಕರ್ಯದಲ್ಲಿ ನಮ್ಮ ದೇಶದ ಪ್ರಥಮ ವರ್ಗ ವನ್ನು ನಾಚಿಸೀತು)ದಲ್ಲಿ ಸಂಚರಿಸುವ ಜನ ರೈತರು, ಮಧ್ಯಮ ವರ್ಗ ದವರು. ಆದಾಗಿ ಇತಾಲಿಯನ್ ಆರ್ಥ ಪ್ರಗತಿಯ ಈ ದ್ವಾದಶ ವರ್ಷ ಗಳಲ್ಲಿ ಬುದ್ಧಿವಂತನಾದವನು ಯಾರೂ ಬಡವನಾಗಿರಬೇಕಾಗಿರಲಿಲ್ಲ ವಲ್ಲಾ? ಆತ ರೋಮ್ – ನಾಪೊಲಿ ಮಾರ್ಗದಲ್ಲಿ ಆಲ್ಫಾ ರೋಮಿಯೋ ವನ್ನೋ, ಫಿಯಟನ್ನೋ ಹಿಡಿದುಕೊಂಡೇ ಅಡ್ಡಾಡಬಹುದು. ಬಡವರಿ ಗಂತೂ ರೈಲೇ ಗತಿ. ನಾಪೊಲಿಯಲ್ಲಾಗಲಿ, ಮಹಾನಗರ ರೋಮ್ ನಲ್ಲಾಗಲಿ ರೈಲು ನಿಲ್ದಾಣದಲ್ಲಿ ನಮ್ಮ ದೇಶದಂಥ ಜನಸಂದಣಿ ಕಾಣಿ

ಸದು. ಅವುಗಳ ನಡುವಣ ನಿಲ್ದಾಣಗಳಂತೂ ಹೆಚ್ಚಾಗಿ ನಿರ್ಜನವಾಗಿಯೇ ಇರುತ್ತಿದ್ದುವು. ಯಾರಾದರೂ ನಾಲ್ಕು ಜನ ರೈಲು ಹತ್ತಿದರೆ ದೊಡ್ಡದು. ಅಲ್ಲದೆ ಭಾರತದಲ್ಲಿ ರೈಲು ನಿಂತಾಗ ಕೇಳಿಸುವ ತಾರಕ ಸ್ವರದ ಕರ್ಣ ಕಠೋರ ಕೂಗುಗಳೂ ಅಲ್ಲಿಲ್ಲ. ರೈಲು ಎಷ್ಟು ಮೌನವಾಗಿ ನಿಲುಗಡೆ ಹೊಂದುವುದೋ, ಎರಡು ಮಿನಿಟಿನ ತರುವಾಯ ಅಷ್ಟೇ ಮೌನವಾಗಿ ಹೊರಟುಬಿಡುವುದು.

ರೋಮ್–ಕ್ರೈಸ್ತ ಜನಾಂಗದ ಬಾರೀ ದೊಡ್ಡ ಪುಣ್ಯಕ್ಷೇತ್ರ, ರಾಕ್ಷಸೀ ಮಹತ್ವಾಕಾಂಕ್ಷೆಗಳ ಸಮಾಧಿ ಸ್ಥಳ, ಐರೋಪ್ಯ ಸಂಸ್ಕೃತಿಯ ಆಡುಂಬೊಲ, ವಿಶ್ವದ ವಿಲಾಸ ಜೀವನದ ಪ್ರಮುಖ ಕೇಂದ್ರ ನಿಜ. ಆದರೆ ಆವತ್ತಿನ ನನ್ನ ಪ್ರಥಮ ಪ್ರಯಾಣದಲ್ಲಿ ಇವು ಯಾವುವೂ ನನಗೆ ಉದ್ದಿಷ್ಟವಾಗಿರಲಿಲ್ಲ, ನನ್ನ ಕಾಲೇಜು ದಿನಗಳ ಸಹವಾಸಿಯಾಗಿಯೂ, ಸಾಹಿತ್ಯ ಜೀವನದ ಸ್ಫೂರ್ತಿಯಾಗಿಯೂ ಇತಾಲಿಯನ್ ಅಂಕದ ಪ್ರೇರಕರಾಗಿಯೂ ಇದ್ದ ನನ್ನ ಆಪ್ತ ಮಿತ್ರ ಬಾಗಲೋಡಿ ದೇವರಾಯರ ದರ್ಶನವೇ ಅಂದಿನ ನನ್ನ ಗುರಿ. ಶ್ರೀ ದೇವರಾಯರು ರೋಮಿನ ಭಾರತೀಯ ದೂತಾವಾಸದ ಪ್ರಥಮ ರಾಜಕೀಯ ಕಾರ್ಯಸಚಿವರಾಗಿ ದುಡಿಯುತ್ತಿದ್ದರು. 'ಇಂಡಿಯದ ಒಬ್ಬ ಅರ್ಥಶಾಸ್ತ್ರಜ್ಞ ಬರುತ್ತಿದ್ದಾನೆ. ಅವನಿಗೆ ಸರಿಯಾದ ಸ್ವಾಗತ ನೀಡಬೇಕು' ಎಂದು ಏರ್ಪಾಟು ಮಾಡಿದವರು ದೇವರಾಯರೇ ಎಂದು ನನಗೆ ಆಮೇಲೆ ತಿಳಿಯಿತು. ಆಗ ನಾಪೊಲಿಯಲ್ಲಿ ನಮ್ಮ ದೂತಾವಾಸದ ಶಾಖೆ ಇಲ್ಲದಿದ್ದುದರಿಂದ ನಮ್ಮ ದೇಶದ ಪರವಾಗಿ ಬ್ರಿಟಿಷ್ ಕಾನ್ಸುಲೇಟಿನವರೇ ಹೊಣೆಯಾಗಬೇಕಾಗಿತ್ತು. ಬ್ರಿಟಿಷ ಕಾನ್ಸುಲ ಅವರಿಗೂ ನನ್ನ ಆಗಮನದ ಸುದ್ದಿ ಮುಟ್ಟಿಸಿ ನನ್ನ ವಾಸ್ತವ್ಯದ ಸೂಕ್ಷ್ಮಾತಿ ಸೂಕ್ಷ್ಮ ಹಿತಚಿಂತನೆಯನ್ನು ತನ್ನ ಭಾರೀ ಕರ್ತವ್ಯ ಸಂದೋಹದ ನಡುವೆಯೂ ಮರೆಯದೆ ಮಾಡುತ್ತಿದ್ದ ರಾಯರ ವಿಶ್ವಾಸ–ಪ್ರೀತಿ–ಧೈರ್ಯದ ಬೆಂಗಾವಲಿಲ್ಲದಿದ್ದರೆ ನಾನು ಒಂದು ವಾರದೊಳಗೆ ಹಿಂದಕ್ಕೆ ಹಾರಿಬಿಡುತ್ತಿದ್ದೆ. ರೋಮ್ ರೈಲು ನಿಲ್ದಾಣದಲ್ಲಿ ನನ್ನ ಸ್ನೇಹಿತರು ನನಗಾಗಿ ಕಾಯುತ್ತಿದ್ದರು. ಮೊದಲಿನ ಪ್ರಶ್ನೆ: 'ಇಲ್ಲಿನ ಚಳಿಯಿಂದ ಸರಿಯಾಗಿ ರಕ್ಷಣೆಮಾಡಿಕೊಂಡಿದ್ದೀರಲ್ಲಾ ?' ಎಂಬ ದೈಹಿಕ ಕ್ಷೇಮಚಿಂತನೆ. ನಿಮ್ಮಂತೆ ಭಾರತದಿಂದ ಬಂದ ಒಬ್ಬರು ಭಟ್ಟರು ಒಂದೇ ವಾರದಲ್ಲಿ ಚಳಿ ತಡೆಯಲಾರದೆ

ಮರಳಿದ್ದಾರೆ. ಆದ್ದರಿಂದ ಇಲ್ಲಿ ಜಾಗ್ರತೆ ಮಾಡಬೇಕಾಗುತ್ತದೆ. ಅನಾವಶ್ಯಕ ಗಾಳಿಯಲ್ಲಿ ಅಡ್ಡಾಡಬೇಡಿ' ಎಂದು ಮುನ್ನೆಚ್ಚರಿಕೆ ಕೊಟ್ಟರು. ನನ್ನ ಹತ್ತಿರ ಇರುವ ಚಳಿಯುಡುಗೆಯನ್ನು ನೋಡಿದರೆ ಅವರು ಹೀಗೆ ಹೇಳುತ್ತಿರಲಿಲ್ಲ. ಯುರೋಪಿಗೆ ನಾನು ಚಳಿಗಾಲದಲ್ಲಿ ಹೋಗುವವನಾದ್ದರಿಂದ ಸರಿಯಾಗಿ ಸಿದ್ಧತೆ ಮಾಡಿಕೊಂಡು ಬಂದಿದ್ದೆ. 'ಒಂದಕ್ಕೆ ನಾಲ್ಕರಂತೆ ಸ್ವೆಟ್ಟರು, ಓವರ್‌ಕೋಟು, ಉಣ್ಣೆಯ ಮಫ್ಲರು ಮುಂಬಯಿಯಲ್ಲಿ ಖರೀದಿ ಮಾಡಿ ತಂದಿದ್ದೇನೆ ಉತ್ತರ ಧ್ರುವದ ವರೆಗೂ ಸಾಕು ಎಂದಮೇಲೆ ದೇವರಾಯರಿಗೆ ಸಮಾಧಾನವಾಯಿತು. ವಿಯಾಪೊಲ್ಲೆಯೋಲೋದಲ್ಲಿದ್ದ ಅವರ ಮನೆಯಲ್ಲಿ ನನ್ನನ್ನು ಬಿಟ್ಟು ಅವರು ತಮ್ಮ ದೈನಂದಿನ ಕಚೇರಿ ಕೆಲಸಕ್ಕೆ ಹಾಜರಾದರು. ಅವರ ಮನೆಯಲ್ಲಿ ಅವರ ಶ್ರೀಮತಿಯವರಾದ ವಿಜಯಾ ರಾವ್, ಅವರ ಎರಡು ವರ್ಷದ ಚಿರಂಜೀವ ದುರ್ಗಾಪ್ರಸಾದ ಮತ್ತು ಮನೆ ಕೆಲಸಕ್ಕೆ ಸಹಕಾರಿಯಾಗಿ ಉಡುಪಿಯ ಸಮೀಪದ ಉಪ್ಪೂರಿನ ಅಡಿಗರು ಇಷ್ಟು ಜನ. ಇತಲಿಯ ಪರದೇಶೀ ಜೀವನಕ್ಕೆ ನಾನು ಹೊಂದಿಕೊಳ್ಳಲು ದೇವರಾಯರ ಮನೆಯಲ್ಲಿ ಇದ್ದ ಒಂದು ವಾರ ನನಗೆ ತುಂಬ ನೆರವು ನೀಡಿತು. ಮನೆಯಲ್ಲಿದ್ದಷ್ಟು ದಿನವೂ ರಾತ್ರಿಯ ಊಟಕ್ಕೆ ಯಾರನ್ನಾದರೂ ಕರೆದು ನಾನು ಇತಾಲಿಯನ್ ಜನರ ಪರಿಚಯ ಪಡೆಯುವಂತೆ ದೇವರಾಯರು ನೋಡಿಕೊಂಡರು; ನನ್ನ ಹಳೆಯ ಪತ್ರಪರಿಚಯದ ಇನ್ಯಾತ್ಸಿಯೋ ಸಿಲೋನೆ (Ignazio Silone) ಮತ್ತು ಆತನ ಮಡದಿ ದರೀನಾ, ನನ್ನ ಮೇಲೆ ವಾತ್ಸಲ್ಯಪೂರ್ಣ ನದರನ್ನಿಟ್ಟಿದ್ದ ಇತಾಲಿಯನ್ ವಿದೇಶಾಂಗ ಖಾತೆಯ ಕೌಂಟ್‌ವೊನ್ ಬರಾತಿಯೇರಿ, ಲೋಯೊಲಾ ಕಾಲೇಜಿನ ಮಾಜಿ ಪ್ರಿನ್ಸಿಪಾಲರೂ ಸದ್ಯ ರೋಮಿನಲ್ಲಿ ಜೆಸೂವಿಟ್ ಶಿಕ್ಷಣರಂಗದ ಮುಖ್ಯಸ್ಥರೂ ಆದ ರೆ। ಫಾ। ಜೆರೋಮ್ ಡಿಸೋಜಾ, ನೈಜಿರೀಯಾದ ರಾಯಭಾರಿ ಮತ್ತು ಅರ್ಥಸಚಿವರು – ಹೀಗೆ ಅನೇಕ ಮಹನೀಯರ ಪರಿಚಯ ನನ್ನಲ್ಲಿ ಆತ್ಮವಿಶ್ವಾಸವನ್ನು ಹುಟ್ಟಿಸಲು ನೆರವಾಯಿತು. ರಾಯರು ಜನವರಿಯಲ್ಲಿ ಭಾರತಕ್ಕೆ ತೆರಳುವವರಿದ್ದುದರಿಂದ ಕ್ರಿಸ್ಮಸ್ ಕೊನೆಯ ನಾಲ್ಕು ದಿನಗಳನ್ನೂ ೧೯೬೩ರ ನೂತನ ವರ್ಷದ ದಿನವನ್ನೂ ನಾನು ಅವರಲ್ಲೇ ಕಳೆದೆ. ವಿಯಾಪೊಲ್ಲೆಯೋಲೋ ರೋಮಿನ ಒಂದು ಬಡಾವಣೆ

ಯಾದುದರಿಂದ ಕ್ರಿಸ್ಮಸಿನ ಬೀದಿ ಗದ್ದಲವು ಅಲ್ಲಿಗೆ ಕೇಳಿಸದಾದರೂ ನನ್ನ ಕೊಠಡಿಯ ಗಾಜಿನ ಕಿಟಕಿಯ ಹೊರಗೆ ಮಧ್ಯರಾತ್ರಿಗೆ ಬಿರುಸು ಬಾಣದ ಹಾರಾಟ, ದೂರದಲ್ಲಿ ಜನರ ಚೀರಾಟ ವ್ಯಕ್ತವಾಗುತ್ತಿತ್ತು. ರಾವ್ ದಂಪತಿ ಆದರಾತಿಥ್ಯಕ್ಕೆ ಹೆಸರಾದ್ದು. ನನಗೇ ನೆನಪಿರುವಂತೆ ರಾಯರು ರೋಮಿನಲ್ಲಿರುವಷ್ಟು ಕಾಲ ಉಡುಪಿಯಿಂದ ವಿಲಾಯತಿಗೆ ಹೊರಟವರಿಗೆಲ್ಲ ನಾನು ಪರಿಚಯ ಪತ್ರ ಕೊಟ್ಟು ಅವರಲ್ಲಿಗೆ ಕಳಿಸಿಬಿಡುತ್ತಿದ್ದೆ. ಸುಬ್ಬಯ್ಯನಿಗೂ ಅವರ ಪರಿಚಯ ಮಾಡಿಸಿಕೊಟ್ಟೆ. ಜನವರಿಯಲ್ಲಿ ಭಾರತಕ್ಕೆ ತೆರಳಿದ ದೇವರಾಯರು ಉಡುಪಿಗೂ ಹೋಗಿ ನನ್ನ ಮುಪ್ಪಿನ ತಂದೆ ತಾಯಿಗೆ ನನ್ನ ಯೋಗಕ್ಷೇಮ ತಿಳಿಸಿದರಂತೆ. ನನ್ನ ತಂದೆಯವರು ಆಮೇಲೆ ಇದ್ದಷ್ಟು ದಿನ "ಅವರಿಗೆ ಮಾತನಾಡಲು ಯಾರು ಕಲಿಸಿದರೊ, ದೇವರೇ ಇರಬೇಕು" ಎಂದು ರಾಯರು ನೀಡಿದ ಧೈರ್ಯ ವಿಶ್ವಾಸದ ಬಗ್ಗೆ ಹೇಳುತ್ತಿದ್ದರು.

## ೦ ೦ ಸಿಲೋನೆ ದಂಪತಿ

ಇನ್ಯಾತ್ಸಿಯೋ ಸಿಲೋನೆಯನ್ನು ನಾನು ರೋಮಿನಲ್ಲಿ ಭೆಟ್ಟಿಯಾದಾಗ ಅವರಿಗೆ ೬೦ ವರ್ಷ ಸಮೀಪಿಸಿರಬೇಕು. ಅವರಿಗೆ ಹೆಚ್ಚು ಇಂಗ್ಲಿಷ್ ಬಾರದು, ಎಂತಲೇ ಅವರ ಐರಿಷ್ ಪತ್ನಿ ದರೀನಾ ಹಿಂದೆ ನನಗೆ ಪತ್ರ ಬರೆದಿದ್ದರು. ನಾನು 'ಫೋಂತಮಾರಾ' ಅನುವಾದಿಸುತ್ತಿದ್ದ ಕಾಲದಲ್ಲಿ (೧೯೫೦) ನಮಗೆ ಪತ್ರವ್ಯವಹಾರ ನಡೆಯಿತು. ಯಾವ ರಾಯಲ್ಟಿಯೂ ಇಲ್ಲದೇ ನನಗೆ ಫೋಂತಮಾರಾದ ಅನುವಾದದ ಹಕ್ಕು ದೊರೆಯಲು ಶ್ರೀಮತಿ ದರೀನಾ ಕಾರಣ. "ಭಾರತೀಯ ಭಾಷೆಯೊಂದಕ್ಕೆ ಪ್ರಥಮ ಬಾರಿ ಫೋಂತಮಾರಾ ಅನುವಾದಿಸಲ್ಪಡುವುದು ಇನ್ಯಾತ್ಸಿಯೋ ಸಿಲೋನೆಗೆ ಅತ್ಯಂತ ಹರ್ಷವನ್ನುಂಟುಮಾಡಿದೆ. ಯಾವ ರಾಯಲ್ಟಿಯೂ ಅಗತ್ಯವಿಲ್ಲ" ಎಂದು ದರೀನಾ ಬರೆದಿದ್ದಳು. ಇದು ೧೯೫೦ರಲ್ಲಿ ನಡೆದ ಪ್ರಸಂಗ. ಆಗ ದರೀನಾ ಕಳಿಸಿದ ಸಿಲೋನೆ ಚಿತ್ರಕ್ಕೂ ಈಗ ನಾನು ನೋಡುತ್ತಿರುವ ಆನರೆವೊಲೆ(=ಮಾನ್ಯ) ವಯೋವೃದ್ಧ ಸಿಲೋನೆಗೂ ತುಂಬಾ ಅಂತರವಿತ್ತು. ದೈಹಿಕವಾಗಿ ಮಾತ್ರವೇ ಅಲ್ಲ ಮಾನಸಿಕವಾಗಿಯೂ ಫೋಂತಮಾ

ರಾದ ಸಿಲೋನೆ ಬೇರೆ, ರಾಜಕೀಯ ಸೆಳವು ಸುಳಿಗಳಲ್ಲಿ ಸರಿಯಾದ ನೆಲೆಯನ್ನು ಕಾಣಲಾರದ ವ್ಯಗ್ರ ಸಿಲೋನೆ ಬೇರೆ. 'ಫೊಂತಮಾರಾ' (ನಾನು ತಪ್ಪಾಗಿ ಇದನ್ನು 'ಫಂಟಮಾರಾ' ಎಂದು ಅನುವಾದಿಸಿದ್ದೆ) ಫಾಸಿಸ್ಟ ಇತಲಿಯಲ್ಲಿ ಹಳ್ಳಿಗಾಡಿನ ಜನರು ಮುಸಲಿನಿಯ ಅಧಿಕಾರ ಶಾಹಿಯನ್ನು ವಿರೋಧಿಸಿದ ಕಥೆಯನ್ನೊಳಗೊಂಡ ಒಂದು ಸುಂದರ ಕಾದಂಬರಿ. ಇದರ ಇಂಗ್ಲಿಷ್ ಅನುವಾದವನ್ನು ನಾನು ಕನ್ನಡಕ್ಕೆ ತರ್ಜುಮೆ ಮಾಡಿದ್ದೆ. ಅದರ ಕಥೆ ಮತ್ತು ಕಥೆಯೊಳಗಿನ ವ್ಯಂಗ್ಯ, ಟೀಕೆ – ಕನ್ನಡದ ಓದುಗರಿಗೆ ಪ್ರಿಯವಾಯಿತು; ವಿಮರ್ಶಕರೂ ಮೆಚ್ಚಿಕೊಂಡಿದ್ದಾರೆ ಎಂದು, ನಾನು ಸಿಲೋನೆಗೆ ತಿಳಿಸಿದಾಗ ಅವರ ಮನಸ್ಸಿನ ಮೇಲೆ ಬಹಳ ಪರಿಣಾಮವಾಯಿತು. 'ಎಷ್ಟು ಪ್ರತಿ ಮಾಡಿಸಿದಿರಿ ?' ಎಂದು ಕೇಳಿದಾಗ ನಾನು ಕನ್ನಡ ವಾಚಕವೃಂದದ ಸೀಮಿತ ಸ್ವರೂಪವನ್ನು ಅವರಿಗೆ ತಿಳಿಸಿದೆ. ಶ್ರೀಮತಿ ಸಿಲೋನೆ ನನ್ನ ಕಾಲೇಜಿನ ಮತ್ತು ಮಕ್ಕಳ ವಿಷಯ ಅನೇಕ ಸವಾಲು ಕೇಳಿದಳು. ನಾಲ್ಕು ಮಕ್ಕಳು ಎಂದಾಗ ಮಕ್ಕಳಿಲ್ಲದ ಆಕೆಗೆ ಆಶ್ಚರ್ಯವೂ ಸಂತೋಷವೂ ಏಕಕಾಲದಲ್ಲಿ ಉಂಟಾದಂತೆ ತೋರಿತು. (೧೯೬೨ರ ನವಂಬರದಲ್ಲಿ ನನಗೆ ನಾಲ್ವರಿದ್ದರು. ಜನವರಿಗೆ ನಮ್ಮ ಆಶಿ ಹುಟ್ಟಿದ ಮೇಲೆ ಐದಾಗಿದೆ. ಐದಾಗುವ ಸಿದ್ಧತೆಯನ್ನು ನಾನು ಶ್ರೀಮತಿ ಸಿಲೋನೆಗೆ ತಿಳಿಸಲಿಲ್ಲ.) ನಾಪೊಲಿಯ ತಮ್ಮ ಸ್ನೇಹಿತನ ವಿಳಾಸವನ್ನು ಕೊಟ್ಟರು. ಆತ ದುಕಾ ಫ್ರಾನ್ಸೆಸ್ಕಾ ಕಂಪಾನ್ಯಾ ಎಂಬ ದಕ್ಷಿಣ ಇಟಲಿಗಾಗಿ ಹೋರಾಡುವ ನಾರ್ದ-ಸುದ್ (ಉತ್ತರ ದಕ್ಷಿಣ) ಎಂಬ ಪತ್ರಿಕೆಯ ಸಂಪಾದಕ. ಆತನ ಒಂದು ಉಪನ್ಯಾಸವನ್ನು ಇಸ್ವೇಯವರು ನಮಗಾಗಿ ಏರ್ಪಡಿಸಿದ್ದರು. ಅಲ್ಲಿ ಆತನನ್ನು ಭೆಟ್ಟಿಯಾದೆ. ಸಿಲೋನೆ ದಂಪತಿ ಇನ್ನೊಮ್ಮೆ ರೋಮಿಗೆ ಬಂದಾಗ ತಮ್ಮ ಮನೆಗೆ ಬರಬೇಕೆಂದು ಆಮಂತ್ರಿಸಿದರು. ನಾನು ಆಗ ಒಪ್ಪಿಕೊಂಡರೂ ನನ್ನ ಇತಾಲಿಯನ್ ವಾಸ್ತವ್ಯದ ಕೊನೆಯ ಮೂರು ದಿನಗಳನ್ನು ನಾನು ರೋಮಿನಲ್ಲೇ ಕಳೆದೆನಾದರೂ ನನಗೆ ಅವರನ್ನು ಭೆಟ್ಟಿಯಾಗುವುದು ಸಾಧ್ಯವಾಗಲಿಲ್ಲ. ಆದರೆ ಸಿಲೋನೆಗೆ ಕೊಡಲೆಂದು ತಂದಿದ್ದ ಸೋವನೀರುಗಳನ್ನು ನಾನು ಅವರಿಗೆ ನಾಪೊಲಿಯಿಂದ ಕಳಿಸಿಕೊಟ್ಟೆ. ನೂತನ ವರ್ಷದ ಶುಭಾಶಯದ ಕಾರ್ಡಿನಲ್ಲಿ ಶ್ರೀಮತಿ ಸಿಲೋನೆ ನನ್ನ ಯೋಗಕ್ಷೇಮವನ್ನು ವಿಚಾರಿಸಿ ಸಮೀಪದ

ಆಪ್ತಳಂತೆ ಪತ್ರ ಬರೆದಿದ್ದಳು. ಇಂಡಿಯಾಕ್ಕೆ ಹಿಂತಿರುಗಿದ ಮೇಲೂ ಆಕೆಯಿಂದ ಒಂದು ಪತ್ರ ಬಂದಿತ್ತು: ನಾನು ಇನ್ನೆಂದಾದರೂ ಇತಲಿಗೆ ಹೋದರೆ ರೋಮಿನಲ್ಲಿ ನನ್ನ ಆಪ್ತರೊಬ್ಬರು ಸ್ವಾಗತಕ್ಕೆ ಇದ್ದಾರೆನ್ನುವ ಭಾವನೆ ನನ್ನಲ್ಲಿ ಮೂಡಿಸಿದವಳು ಆಕೆ. ನನಗೆ ಇತಾಲಿಯನ್ ಬರದೆ ಇದ್ದುದರಿಂದಲೋ ಏನೋ ನಮ್ಮ ಪ್ರಥಮ ಸಂದರ್ಶನದಲ್ಲಿ ಸಿಲೋನೆ ಗಂಭೀರ ಮುಖಮುದ್ರೆಯಿಂದ ಹೆಚ್ಚಾಗಿ ಮೌನವಾಗಿಯೇ ಇರುತ್ತಿದ್ದರು ದೇವರಾಯರೇ ಆತನನ್ನು ಮಾತನಾಡಿಸಬೇಕು. ಆದರೂ ನಮ್ಮ ಸಂವಾದ ವನ್ನು ಆತ ಆಸಕ್ತಿಯಿಂದ ಆಲಿಸುತ್ತಿದ್ದ, ನಡುವೆನಡುವೆ ಗೋಣಲ್ಲಾಡಿ ಸುತ್ತಿದ್ದ.

## ೦ ೦ ಕೌಂಟ್ ವೊನ್ ಬರಾತಿಯೇರಿ

ನಾನು ಇತಾಲಿಯನ್ ವಿದೇಶಾಂಗ ಖಾತೆಯ ವಿದ್ಯಾರ್ಥಿ ವೇತನದ ಬಲದಿಂದ ಇತಲಿಗೆ ಬಂದವನಾದ್ದರಿಂದ, ಆ ಖಾತೆಯ ಮುಖ್ಯ ರಾದ ಬರತಿಯೇರಿಯ ಪರಿಚಯವು ನನಗೆ ಅನಿವಾರ್ಯ ಕರ್ತವ್ಯವೇ ಆಗಿತ್ತು. ಅವರಿಗೂ ನನ್ನಂತೆ ಉಬ್ಬಸದ ಕಾಯಿಲೆ ಇದ್ದದ್ದರಿಂದಲೋ ಏನೋ ನಾವು ಕ್ಷಣಾರ್ಧದಲ್ಲಿ ಆತ್ಮೀಯರಾಗಿಬಿಟ್ಟೆವು. ನನಗೆ ಹೇಗೆ ಬರಾತಿಯೇರಿ ಸಂರಕ್ಷಕ ದೈವ ( greardian angel ) ಆಗಿದ್ದರೋ, ನಾನು ಕಲಿಯಬೇಕಾಗಿದ್ದ ಇಸ್ವೇಗೂ ಅವರ ಖಾತೆಯಿಂದಲೇ ಧನ ಸಂಗ್ರಹವಾಗಬೇಕು. ಹೀಗಾಗಿ ಇನ್ನೂ ಕೆಲವು ಸಲ ಅವರನ್ನು ಭೆಟ್ಟಿ ಯಾಗುವ ಅವಕಾಶ ದೊರೆಯಿತು. ನನ್ನ ಅವರ ಪ್ರಥಮ ಪರಿಚಯದಲ್ಲಿ ನಾವು ಹತ್ತಾರು ವಿಷಯ ಚರ್ಚಿಸಿದೆವು: ಮೊದಲನೆಯದಾಗಿ ಉಬ್ಬಸ, ಆಮೇಲೆ ನನ್ನ ನಾಪೊಲಿಯ ವಾಸ್ತವ್ಯ, ಮೆಕ್‌ಮಹೋನ್ ಲೈನ್, ಭಾರತೀಯ ಆರ್ಥಿಕ ಪರಿಸ್ಥಿತಿ, ರಾಜಕೀಯ ವಿವೇಚನೆ. ಇತಾಲಿಯನ್ ದೂತಾವಾಸದಲ್ಲಿ ಬಹಳ ವರ್ಷ ದುಡಿದ ಬರಾತಿಯೇರಿ ಬಹಳ ಅನು ಭವಸ್ಥ ಮುತ್ಸದ್ದಿ – ನಮ್ಮ ಮೆಕ್‌ಮಹೋನ್ ಗಡಿಯ ನಿರ್ದಿಷ್ಟ ಇತಿಹಾ ಸವೂ ಅವರಿಗೆ ತಿಳಿದಿತ್ತು. ನಡುರಾತ್ರಿಯ ವರೆಗೂ ಚರ್ಚೆ ಮುಗಿದ

ಮೇಲೆ ಬೀಳ್ಕೊಡುವಾಗ "ನಿನಗೆ ಏನು ಬೇಕಾದರೂ ದಾಕ್ಷಿಣ್ಯವಿಲ್ಲದೆ ನನಗೆ ಬರೆಯಬೇಕು. ನಿಮ್ಮ ಸಂಸ್ಥೆಯ ಉದ್ಘಾಟನೆಯ ದಿನ ಮತ್ತೆ ನೋಡೋಣ' ಎಂದು ಹೇಳಿ ಬರಾತಿಯೇರಿ ನನ್ನ ಮೇಲೆ ಕೃಪಾಹಸ್ತವ ನ್ನಿಟ್ಟರು. ತದನಂತರ ನಾನು ಹೇಳಿದ್ದನ್ನಷ್ಟೇ ಅಲ್ಲ, ಹೇಳದೆ ಇರುವುದನ್ನೂ ಮಾಡಿ ನನ್ನ ಮೇಲೆ ಋಣಭಾರವನ್ನು ಹೊರಿಸಿದರು. ಇಸ್ವೇಯಲ್ಲಿನ ನನ್ನ ಸಂಯಮಶೀಲ ನಡವಳಿಕೆಗೂ, ಅಧ್ಯಯನ ಪ್ರವೃತ್ತಿಗೂ ಒಲಿದು ನನಗೆ ಇತಲಿಯಿಂದ ಅಮೆರಿಕದ ವರೆಗಿನ ಒಂದು 'ಪುಕ್ಕಟೆ ಪ್ರವಾಸ' ಒದಗಿಸಿ ಕೊಟ್ಟ ಮಹನೀಯರೂ ಅವರೇ. (ಇದರ ಕಥೆ ಆಮೇಲೆ ಹೇಳುತ್ತೇನೆ) ರೋಮಿಗೆ ಮರಳಿದವನೇ ನಾನು ಪರೀಕ್ಷೆಗಾಗಿ ಅವರ ಮುಂದೆ ಬಂದು ಚಿಕ್ಕ ಬೇಡಿಕೆಯನ್ನಿಟ್ಟೆ. ಸುಬ್ಬಯ್ಯನೂ, ನಾನೂ ಹಡಗಿನಲ್ಲಿ ಬಂದವರು, ಮನೆಗೆ ಮರಳುವಾಗಲಾದರೂ ವಿಮಾನ ಪ್ರಯಾಣದ ಯೋಗ ನಮ ಗಿದ್ದೀತೆ? ಪರೀಕ್ಷಿಸೋಣ ಎಂದುಕೊಂಡು ನಮ್ಮಿಬ್ಬರ ಮರುಪಯಣ ವಿಮಾನದಲ್ಲಿ ಮಾಡಿಸಿಕೊಡಿ ಎಂದು ಬರೆದೆ. ಜನವರಿ ೧೬ಕ್ಕೆ ನಮ್ಮ ಇನ್‌ಸ್ಟಿಟ್ಯೂಟಿನ ಸಾಂಪ್ರದಾಯಕ ಉದ್ಘಾಟನೆ. ಅಂದು ಬಂದಿದ್ದ ಬರಾತಿ ಯೇರಿ ಕಾರ್ಯಕ್ರಮ ಆರಂಭವಾಗುವ ಮುನ್ನವೇ ನನ್ನನ್ನು ಕರೆದು "ನಿನಗೆ ಒಬ್ಬನಿಗೆ ವಿಮಾನ ಪ್ರಯಾಣ ಶಿಫಾರಸು ಮಾಡಿದ್ದೇನೆ – ಇದು ನಿಮ್ಮ ದೇಶದಲ್ಲಿ ನಿನಗಿರುವ ಸ್ಥಾನದ ಮೇಲಿಂದ ಮತ್ತು ನಮ್ಮ ಪರಸ್ಪರ ಸ್ನೇಹದ ದ್ಯೋತಕವಾಗಿ" ಎಂದು ಸಕಾರಣವಾಗಿ ವಿವರಿಸಿದರು. ಉದ್ಘಾಟನೆಯ ಅನಂತರ ನಡೆದ ಕಾಕ್‌ಟೈಲ್ ಪಾರ್ಟಿಯಲ್ಲಿಯೂ ಅವರು ಆಗಿಂದಾಗ ನನ್ನನ್ನು ವಿಚಾರಿಸಲು ಬರುತ್ತಿದ್ದರು. ತನ್ಮಧ್ಯೆ ನಾನು ಅಲ್ಲಿ ಕಾರ್ಯತತ್ಪರ ನಾಗಿದ್ದ ಒಬ್ಬ ಫೊಟೊಗ್ರಾಫರನನ್ನು ಕರೆದು ನಮ್ಮ ಎಲ್ಲರ ಫೊಟೋ ತೆಗೆಯಿಸಿಕೊಂಡೆ. ರೋಮಿನಲ್ಲಿ ನಮಗೆ ಪದವೀದಾನ ಸಮಾರಂಭ ನಡೆ ದಾಗಲೂ ಬರಾತಿಯೇರಿ ಹಾಜರಿದ್ದರು. ನಾನು ಇಂಡಿಯಕ್ಕೆ ಬಂದ ಮೇಲೂ ಆಗಿಂದಾಗ ಅವರಿಗೆ ನನ್ನ ಇಂಗ್ಲಿಷ್ ಲೇಖನಗಳನ್ನು, ನಮ್ಮ ಕಾಲೇಜಿನ ಸಾಹಿತ್ಯವನ್ನೂ ಅವರಿಗೆ ಕಳಿಸಿದ್ದೇನೆ. ಇನ್ನೊಂದು ಬಾರಿ ಇತಲಿಗೆ ನಾನು ಬಯಸಿದಾಗ ಹೋಗಬಹುದೆನ್ನುವಷ್ಟು ಧೈರ್ಯ ನನಗೆ ಬಂದಿರುವುದು ಅವರ ದೆಸೆಯಿಂದಲೇ.

## ೦ ೦ ರೆ| ಫಾ| ಜೆರೋಮ್ ಡಿ'ಸೋಜ

ಉಡುಪಿಯ ಬಳಿ ಇರುವ ಉದಿಯಾವರದಲ್ಲಿ ಹುಟ್ಟಿದ ರೆ| ಫಾ| ಡಿಸೋಜ ಹಿಂದೆ ಮದರಾಸಿನ ಲೊಯೊಲಾ ಕಾಲೇಜಿನ ಪ್ರಿನ್ಸಿಪಾಲರಾಗಿದ್ದರು. ಅವರ ಇಂಗ್ಲಿಷ್ ವಾಕ್ಪಟುತ್ವ ಬಹುಶ್ರುತವಾದುದು. ಅವರು ಸೇರಿದ ಧರ್ಮ ಪ್ರಚಾರ ಸಂಘವು ಅವರನ್ನು ಪ್ರಾಚ್ಯ ದೇಶಗಳ ಶಿಕ್ಷಣ ಕ್ಷೇತ್ರದ ವರಿಷ್ಠ ಹುದ್ದೆಯಲ್ಲಿ ಅವರಿಗೆ ರೋಮಿನಲ್ಲಿ ಆಶ್ರಯ ನೀಡಿತ್ತು. ಪ್ರಗತಿಶೀಲ ಮನೋವೃತ್ತಿಯ ಪೋಪ್ ಜಾನ್ ಕ್ರೈಸ್ತ ಗುರುಗಳ ಸಮ್ಮೇಳನವನ್ನು (ಇಕ್ಯುಮೆನಿಕಲ್ ಕೌನ್ಸಿಲ್) ರೋಮ್‌ನಲ್ಲಿ ಜರಗಿಸಿದ ಸಂದರ್ಭದಲ್ಲಿ ದೇವರಾಯರು ಇಂಡಿಯಾದಿಂದ ಬಂದು ಹೋಗುವ ಗುರುಗಳಿಗೆ ನೆರವು ನೀಡಿ ಅವರುಗಳ ಸ್ನೇಹ ಸಂಪಾದನೆ ಮಾಡಿದರಂತೆ. ಕರ್ತವ್ಯಪರಾಯಣರಾದ ಅವರ ನೆರವಿನ ಉಪಕಾರಸ್ಮರಣೆ ಮಾಡುವುದಕ್ಕೆ ನೂತನ ಕ್ರೈಸ್ತ ವರ್ಷದ ಶುಭಾಕಾಂಕ್ಷೆಯನ್ನು ನೀಡುವುದಕ್ಕೂ ರಾಯರ ಮನೆಗೆ ಬಂದಿದ್ದ ಜೆರೋಮ್ ಡಿಸೋಜ ಒಂದು ತಾಸು ಅತ್ಯಂತ ರಸವತ್ತಾದ ಆಪ್ತ ವಾಕ್ಯಗಳನ್ನಾಡಿದರು. ನನ್ನ ಹತ್ತಿರ ಕಾಲೇಜಿನ ಬಗ್ಗೆ ವಿಚಾರಿಸಿ ನಮ್ಮ ಪ್ರಿನ್ಸಿಪಾಲ ಸುಂದರರಾಯರು ಪ್ರೆಸಿಡೆನ್ಸಿ ಕಾಲೇಜಿನಲ್ಲಿ ತನ್ನ ಸಹಪಾಠಿಯಾಗಿದ್ದುದನ್ನು ಸ್ಮರಿಸಿದರು. ವಾಕ್ಚಾತುರ್ಯದ ಬಗ್ಗೆ ಚರ್ಚೆ ಹೊರಳಿದಾಗ ದಿವಂ| ಸತ್ಯಮೂರ್ತಿಯವರು ೧೯೩೭ರ ಚುನಾವಣಾ ಪ್ರಚಾರ ಕಾಲದಲ್ಲಿ ಮಾಡಿದ ಭಾಷಣಗಳ ಸ್ವಾರಸ್ಯವನ್ನು ವಿವರಿಸಿದರು. 'ನನಗೆ ಯಾರ ಮೇಲೂ ಮತ್ಸರವಿಲ್ಲ; ಆದರೆ ಈತನನ್ನು ಕಂಡರೆ ಅಸೂಯೆ" ಎಂದು ಸತ್ಯಮೂರ್ತಿ ತಿರುಚಿರಪಳ್ಳಿಯ ಸ್ಟೆಂಟ್ ಜಾಸೆಫ್ಸ್ ಕಾಲೇಜಿನ ಒಬ್ಬ ಪಾದ್ರಿಯ ಬಗ್ಗೆ – ಆತ ವಿದ್ಯಾರ್ಥಿಗಳ ಅಪಾರ ವಿಶ್ವಾಸವನ್ನು ಗಳಿಸಿದ ಕಾರಣಕ್ಕಾಗಿ – ನುಡಿದ ಮಾತನ್ನು ಉತ್ಸಾಹದಿಂದ ಜ್ಞಾಪಿಸಿದರು. 'ನೀವೂ ಏನೂ ಕಡಮೆಯಲ್ಲ' ಎಂದು ನಾನು ಫಾದರ್ ಜೆರೋಮ್ ಅವರು ವಿಶ್ವಸಂಸ್ಥೆಗೆ ಹೊರಟ ಭಾರತೀಯ ನಿಯೋಗದಲ್ಲಿ ಒಮ್ಮೆ ಸದಸ್ಯರಾಗಿದ್ದುದನ್ನು ಜ್ಞಾಪಿಸಿದೆ.

## ೦ ೦ ಕಲಾವೈಭವ

ಜಗತ್ಪ್ರಸಿದ್ಧ ರೋಮ್ ನಗರದ ಕಲಾವೈಭವವನ್ನು ನನ್ನ ಪ್ರಥಮ ರೋಮ್ ಸಂದರ್ಶನ ಕಾಲದಿಂದಲೇ ನಾನು ಗುರುತಿಸಲು ತೊಡಗಿದೆ. ನವಂಬರ ೨೪ರಂದು ಒಂದು ವಾರಗಳ ಕಾಲ ಮೊದಲನೆಯ ಸಲ, ದಶಂಬರದ ಕೊನೆಯ ಕೆಲವು ದಿನಗಳಲ್ಲೆ ಎರಡನೆಯ ಸಲ, ನನ್ನ ಆರು ತಿಂಗಳ ಆರ್ಥಿಕ ಅಧ್ಯಯನ ಪರ್ವದ ಕೊನೆಯ ಮೂರು ದಿನಗಳಲ್ಲಿ ಮೂರನೆಯ ಸಲ, ನನಗೆ ರೋಮ್ ನಗರದಲ್ಲಿ ಪರಿಭ್ರಮಣ ಮಾಡುವ ಅವಕಾಶ ಒದಗಿತು. ಪರದೇಶ, ಪರಭಾಷೆ–ಸಾಲದ್ದಕ್ಕೆ ನನ್ನ ಪ್ರಥಮ ಸಂದರ್ಶನದ ವೇಳೆಗೆ ಕೊರೆಯುವ ಚಳಿಗಾಲ ನನಗಿಂತ ಮುನ್ನವೇ ರೋಮ್ ಪ್ರವೇಶ ಮಾಡಿದ ಹಾಗಿತ್ತು. ಹೀಗಾಗಿ ಮೊದಲ ಸಲ ನನಗೆ ಮನೆ ಬಿಟ್ಟು ಹೊರಗೆ ಹೋಗಲು ಅಂಜಿಕೆ. ಅಲ್ಲಲ್ಲಿ ರಸ್ತೆಯನ್ನು ದಾಟ ಬೇಕಾದರೆ ಕಿರ್ರೆಂದು ಕಿರಿಚುತ್ತ ಹರಿದಾಡುವ ಇತಾಲಿಯನ್ ಕಾರುಗಳ ನಡುವೆ ಬದುಕಿ ಉಳಿಯಬಹುದೇ ಎಂಬ ಪ್ರಾಣ ಭೀತಿ. ಆದ್ದರಿಂದ ಬಹಳ ಜಾಗರೂಕತೆಯಿಂದಲೇ ನಾನು ಮನೆ ಬಿಟ್ಟು ಹೊರಡುತ್ತಿದ್ದೆ. ರೋಮ್ ಮುಟ್ಟಿದ ಮರುದಿನವೇ ಸಿಸ್ಟೈನ್ ಚೆಪೆಲ್ ನೋಡಲು ಹೊರಟೆ. ಚೆಪಲಿನ ಮುಂದುಗಡೆ ಬಸ್ಸು ಮತ್ತು ಕಾರುಗಳ ಸಂದಣಿ, ಒಳಗಡೆ ಅನವರತ ಜನಪ್ರವಾಹ. ಇತಾಲಿಯನ ನವೋದಯ (ರಿನೆಸೆನ್ಸ್) ಕಾಲದ ಅಮರ ತೈಲಚಿತ್ರ ಮತ್ತು ಶಿಲ್ಪಗಳ ಓರಣವಾದ ಪ್ರದರ್ಶನ. ಕ್ರಿಸ್ತ ಶಕ ೧೩೦೦, ೧೪೦೦ರ ಶತಕಕ್ಕೆ ಸೇರಿದ ಪ್ರತಿಭಾವಂತ ಚಿತ್ರಕಾರ ರಿಂದ ಕ್ರಿಸ್ತ ಜೀವನದ ಘಟನಾವಳಿಗಳ ಅದ್ಭುತ ನೋಟ. ಪಿನಕೊತ್ತಾ (ಚಿತ್ರಶಾಲೆ) ಎಂದು ಕರೆಯಲ್ಪಡುವ ಈ ಭಾಗದಲ್ಲಿ ಒಟ್ಟು ೧೮ ಕೊಠಡಿ ಗಳಿವೆ. ಮೊದಲ ಕೊಠಡಿಯಲ್ಲಿ ಬೈಜಂಟಾಯಿನ್ ಚಿತ್ರಗಳಿವೆ. ಎರಡನೆಯ ಕೊಠಡಿ ಜಿಯಾತ್ತೊ ಮತ್ತವನ ಅನುಯಾಯಿಗಳ ಕೌಶಲದಿಂದ ತುಂಬಿದೆ. ಮೂರನೆಯದರಲ್ಲಿ ಬಿಯಾತೊ ಎಂಜಲಿಕೊ (೧೪೫೫) ಬರೆದ ಚಿಕ್ಕ ಗಾತ್ರದ ಚಿತ್ರಗಳು. ನಾಲ್ಕನೇ ಕೊಠಡಿ ಮೆಲೊಜೊಡ ಫೊರ್ಲಿ (೧೧೪೩೮–೧೪೯೪)ಯ ಹಸ್ತ ಕೌಶಲಕ್ಕೆ ಮೀಸಲು. ಏಳನೆಯ ಕೊಠಡಿಯಲ್ಲಿ ರಾಫೆಲನ ಗುರು ಪೆರುಜನೋ ಬರೆದ 'ಮದೊನ್ನಾ ಮತ್ತು ಸಂತರು'.

'ಪುನರಾಗಮನ' ಇವನ್ನು ನೋಡಬಹುದು. ಎಂಟನೆಯ ಕೊಠಡಿ ರಾಫೆಲ್ ಬರೆದ ವರ್ಣ ಚಿತ್ರ ಮತ್ತು ಕಸೂತಿ ಚಿತ್ರಗಳ ಅಪೂರ್ವ ಲೋಕವನ್ನು ನಮ್ಮ ಕಣ್ಣ ಮುಂದೆ ಬಿತ್ತರಿಸುತ್ತದೆ. ಪ್ರತಿ ಕೊಠಡಿಯೂ ವಿಸ್ತಾರವಾಗಿದ್ದು ಗೋಡೆಗಳ ಎತ್ತರ ೨೦ ಅಡಿಗೂ ಮಿಗಿಲಾಗಿ ಅಷ್ಟು ಹರವನ್ನೆಲ್ಲಾ ಆಕ್ರಮಿಸಬಲ್ಲ ಗಾತ್ರದ ವರ್ಣಚಿತ್ರಗಳನ್ನು ತೂಗಹಾಕಿದ್ದಾರೆ. ರಾಫೆಲನ ಚಿತ್ರಗಳ ಜಗದ್ವಿಖ್ಯಾತ ವರ್ಣವಿನ್ಯಾಸ ಎಂಥ ಅಜ್ಞನನ್ನೂ ಬೆರಗುಗೊಳಿಸೀತು. ಪ್ರತಿಯೊಂದು ತೈಲಚಿತ್ರದ ಗಾತ್ರ ಮತ್ತು ಅದರಲ್ಲಿ ಅಡಕವಾಗಿರುವ ಮನುಷ್ಯಾಕೃತಿಗಳ ಸಂಖ್ಯೆ ನಮ್ಮನ್ನು ಮೂಕ ವಿಸ್ಮಯಕ್ಕೆ ತುತ್ತಾಗಿಸುವವು. ಉದಾಹರಣೆಗೆ ರಾಫೆಲನ ಕೊಠಡಿಯಲ್ಲಿ 'ಎಥೆನ್ಸ್ ಶಾಲೆ' ಎಂಬ ಚಿತ್ರವಿದೆ. ಅದರಲ್ಲಿ ಗ್ರೀಕ್ ದಾರ್ಶನಿಕರಾದ ಪ್ಲೇಟೊ, ಅರಿಸ್ಟೋಟಲ್ ಶಿಷ್ಯ ವರ್ಗದೊಡನೆ ತಮ್ಮ ಪಾಠ ಮುಗಿಸಿ ಮಾತನಾಡಿಕೊಂಡು ಶಾಂತಿಯಿಂದ ಹೊರಬೀಳುವ ದೃಶ್ಯದಲ್ಲಿ ಪುಟಿದೇಳುವ ಸಜೀವತೆ, ಚೈತನ್ಯ, ಪರಿಪೂರ್ಣತೆ ಎಲ್ಲ ಚಿತ್ರಕಾರರಿಗೂ ಒಂದು ಆದರ್ಶವಾಗಲು ಅರ್ಹವಾದ್ದು. ರಾಫೆಲ್ ಕೊಠಡಿಯ ಬಳಿಯಿಂದಲೇ ಅಗಲಕಿರಿದಾದ ಪಾವಟಿಗೆಗಳನ್ನಿಳಿದು ಹೋದರೆ ಸಿಸ್ಟೈನ್ ಚೆಪೆಲ್ ಸಿಗುತ್ತದೆ. ಇದು ವ್ಯಾಟಿಕನ್ ವಸ್ತು ಸಂಗ್ರಹಾಲಯದ ಜೀವ ಕೇಂದ್ರ. ಇಲ್ಲಿ ಮೈಕೆಲೆಂಜಲೋ ಬಿಡಿಸಿದ ಮುಚ್ಚಿಗೆ ಚಿತ್ರಗಳಿರುವುದರಿಂದಲೆ ಈ ಪುಟ್ಟ ಇಗರ್ಜಿ ಜಗತ್ತಿನ ಅತ್ಯಂತ ಪ್ರಸಿದ್ಧ ಇಗರ್ಜಿ ಎನಿಸಿದೆ. ಸೃಷ್ಟಿ ಮತ್ತು ಪ್ರಳಯದ (ಅಂತಿಮ ತೀರ್ಪಿ)ನ ( Last judgement ) ದೃಶ್ಯಗಳನ್ನೊಳಗೊಂಡ ಈ ಚಿತ್ರಗಳನ್ನು ತಾಸುಗಟ್ಟಲೆ ಅಧ್ಯಯನ ಮಾಡುವ ಕಲಾಭ್ಯಾಸಿಗಳಿದ್ದಾರೆ. ನನ್ನಂತೆ ಅರ್ಧ ತಾಸಿನಲ್ಲಿಯೇ ಮುಗಿಸುವ ಅವಸರಿಗಳೂ ಇದ್ದಾರೆ. ಏನು ಗೊತ್ತಿರದಿದ್ದರೂ ಗೈಡ್ ಪುಸ್ತಕಗಳನ್ನು ಹಿಡಿದುಕೊಂಡು ಕಣ್ಣ ಮುಂದಿನ ಮೌಲಿಕ ಕಲಾಕೃತಿಗೂ ಮುದ್ರಿತ ಕಲಾಕೃತಿಗೂ ಇರುವ ಸಾಮ್ಯ ವೈಷಮ್ಯಗಳನ್ನು ತೂಗಿ ನೋಡಿ ಸಂತೋಷಪಡುವ ಅಮೆರಿಕನ್ ಮಹಿಳಾ ಸಂದರ್ಶಕರೂ ಇದ್ದಾರೆ. ನನ್ನ ಮೊದಲ ಸಂದರ್ಶನದ ವೇಳೆಗೆ ಈ ಚಿತ್ರಗಳನ್ನು ಇನ್ನೊಮ್ಮೆ ನೋಡಬೇಕು ಎಂದುಕೊಂಡೆ. ಎರಡು ತಿಂಗಳ ಮೇಲೆ ಅದು ಸಾಧ್ಯವಾಯಿತು. ಮತ್ತೊಮ್ಮೆ ನನ್ನ ಸಹಪಾಠಿಗಳೊಡನೆ ತಾಸೆರಡು ತಾಸು ವ್ಯಾಟಿಕನ್ ಮ್ಯೂಸಿಯಮ್

ನೋಡಿರದ ನನ್ನ ಮಿತ್ರರಿಗೆ ಮಾರ್ಗದರ್ಶಕನಾಗಿ ಅಲೆದಾಡಿದೆ. ಚಿತ್ರಕಲೆಯಲ್ಲಿ ೧೨ ವಿಭಾಗವುಳ್ಳ ಪ್ರತಿಮಾ ಶಾಲೆಯನ್ನೂ ಆಗ ನೋಡಿದೆ.

ನಾಲ್ವತ್ತು ಕೋಟಿ ಕ್ರೈಸ್ತ ಜನಾಂಗದ ಪವಿತ್ರ ರಾಜಧಾನಿ ಕೇವಲ ಕ್ರೈಸ್ತರಿಗೆ ಮಾತ್ರವಲ್ಲ ಪ್ರಪಂಚದ ಎಲ್ಲ ನಾಗರಿಕ ಜನಾಂಗಗಳಿಗೂ ಯಾತ್ರಾಸ್ಥಳವಾಗಿ ಪರಿವರ್ತನೆಗೊಂಡಿರುವುದು. ಕುಲಜಾತಿ ಕಾಲ ಭೇದವಿಲ್ಲದ ರಾಫೆಲ್, ಮೈಕಲೆಂಜಿಲೊ ಮುಂತಾದ ವರ್ಣಶಿಲ್ಪಿಗಳ ದೆಸೆಯಿಂದ. ರೋಮ್ ನಗರದ ಆಧುನಿಕ ವಿಲಾಸ ವಿಭ್ರಮದ ನಡುವೆ – ಭೌಗೋಲಿಕವಾಗಿಯೂ ಸಹ – ವಿಜೃಂಭಿಸಿರುವ ವ್ಯಾಟಿಕನ್ ವಸ್ತುಸಂಗ್ರಹಾಲಯ ಅಲ್ಪರಿಗೂ ಮಹೋನ್ನತಿಯ ದರ್ಶನವನ್ನು ಮಾಡಿಸಬಲ್ಲ ಮಾತು ಬೇಡದ ಒಂದು ಜಾಗತಿಕ ಅನುಭವ ಮಂಟಪವೆಂದು ನನ್ನ ಭಾವನೆ.

ಇನ್ನೊಮ್ಮೆ ಸೈಂಟ್ ಪೀಟರ್ಸ್ ಇಗರ್ಜಿಯನ್ನು ಕಂಡೆ. ಈ ಇಗರ್ಜಿಯ ಮುಂದುಗಡೆಯ ವಿಶಾಲವಾದ ಚೌಕ ನಮ್ಮನ್ನು ಮೊದಲ ನೋಟಕ್ಕೆ ದಂಗುಬಡಿಸಿದರೆ ಇಗರ್ಜಿಯ ಔನ್ನತ್ಯ, ಒಳಗಡೆ ಅಮೃತ ಶಿಲೆಯಲ್ಲಿ ಕಂಡರಿಸಿದ ಮೈಕಲೆಂಜಲೋನ ಪ್ರಸಿದ್ಧ ಕೃತಿ 'ಪಿಯೆತಾ'. (ಕರುಣೆ) ಸಾಲಾಗಿ ನಿಂತ ದೀರ್ಘ ಸ್ತಂಭಗಳು, ಕಮಾನುಗಳು, ನಟ್ಟ ನಡುವಿನ ಮೈಕಲೆಂಜಲೋ ಕೃತ ಗೋಲವುಳ್ಳ ೫೭೧ ಅಡಿ ಉದ್ದ ೪೧೪ ಅಡಿ ಅಗಲ ಇರುವ ಪ್ರಪಂಚದ ಅತಿ ದೊಡ್ಡ ಈ ಇಗರ್ಜಿ ಮೂರುವರೆ ಎಕರೆ ಸ್ಥಳವನ್ನು ಆಕ್ರಮಿಸಿದೆ. ಇದರ ಕೇಂದ್ರ ಗೋಲವು ೧೩೭ ಅಡಿ ವ್ಯಾಸವುಳ್ಳದ್ದಾಗಿದೆ. ಸೈಂಟ್ ಪೀಟರ್ಸ್ ಚೌಕದ ಆಕಾರವನ್ನು ರೂಪಿಸಲು ಬರ್ನಿನಿ ಎಂಬ ಮಹಾಶಿಲ್ಪಿ ಹತ್ತು ವರ್ಷ ಕಾಲ ದುಡಿದನಂತೆ. ಚಳಿಯೋ, ಗ್ರೀಷ್ಮವೋ, ಸರ್ವ ಋತುಗಳಲ್ಲಿಯೂ ಸೈಂಟ್ ಪೀಟರ್ಸ್ ಇಗರ್ಜಿಯ ಪಾವಟಿಗೆಗಳಲ್ಲಿ ಸಂದರ್ಶಕರ ನೆರವಿ ತಪ್ಪಲಾರದು. ಸಂತ ಪೀಟರನನ್ನು ರೋಮಿಗೆ ಎಳೆದುಕೊಂಡು ತಂದಾಗಿನ ಸಂಕಲೆಯನ್ನು ಪ್ರದರ್ಶಿಸುವ ಇನ್ನೊಂದು ಇಗರ್ಜಿ ಸೈಂಟ್ ಪೀಟರ್ಸ್‌ಗೆ ಅನತಿ ದೂರದಲ್ಲೇ ಮೈಕಲೆಂಜಲೋ ಅಮೃತಶಿಲೆಯಲ್ಲಿ ಮಹಾಕ್ರೋಧವನ್ನು ತೋರ್ಪಡಿಸುವ ಮೋರೆಯುಳ್ಳಮೋಸಸ್ ಶಿಲ್ಪ ಇಲ್ಲಿದೆ.

ಇನ್ನೊಂದು ಇಗರ್ಜಿಯಲ್ಲಿ ಸಂತ ಪಾವುಲನನ್ನು ಪ್ರಾಕಾರದ ಹೊರಗೆ ಪ್ರತಿಷ್ಠೆ ಮಾಡಿದ್ದಾರೆ. ೧೩ನೇ ಶತಮಾನದಲ್ಲಿ ಕಟ್ಟಿ, ೧೯ನೇ

ಶತಮಾನದಲ್ಲಿ ನವೀಕರಿಸಲ್ಪಟ್ಟ ಈ ಇಗರ್ಜಿಯ ಒಳಗಡೆ ಪ್ರಪಂಚದ ಹಲವು ಭಾಗಗಳಿಂದ ಆಮದು ಮಾಡಿದ ನಾನಾ ವರ್ಣದ ಅಮೃತಶಿಲೆ ಗಳನ್ನು ನೆಲ ಮತ್ತು ಗೋಡೆಗಳಿಗೆ ಹೊದಿಸಿದ್ದಾರೆ. ಇಲ್ಲೇ ಧರ್ಮ ಸಮ್ಮೇಳನಕ್ಕೆ ಬಂದ ಕ್ರೈಸ್ತ ಗುರುಗಳಿಗೆ ಪೋಪ್ ಜಾನ್ ಹಿಂದಿನ ದಿನವೇ ಧರ್ಮಸಂದೇಶವನ್ನು ನೀಡಿದರಂತೆ: ಅದಕ್ಕೋಸ್ಕರ ಕಟ್ಟಿದ ಅಟ್ಟಳಿಕೆ ಗಳನ್ನು ನಾನು ನೋಡಲು ತೆರಳಿದ ವೇಳೆ ಬಿಚ್ಚುತ್ತಿದ್ದರು.

ರೋಮ್ ಏಳು ಬೆಟ್ಟಗಳ ಮೇಲೆ ಕಟ್ಟಿದ ನಗರ. ಐತಿಹಾಸಿಕವಾಗಿ ದಿಲ್ಲಿಯಷ್ಟೇ ಪ್ರಖ್ಯಾತವಾದ ನಗರ. ದಿಲ್ಲಿಯಂತೆ ವಿಶಾಲವಾಗಿ ಹರಡಿ ಕೊಂಡಿರುವುದರಿಂದ ನಿಧಾನವಾಗಿ ನೋಡಲು ಸಾಧ್ಯವಾಗುವ ಸ್ಥಳ. ನಿತ್ಯವೂ ಪ್ರವಾಸಿಗಳನ್ನು ನಗರದ ಸುತ್ತಲೂ ಕೊಂಡೊಯ್ಯಲು ಸರ್ಕಾರಿ ಪ್ರವಾಸ ಖಾತೆಯ ಬಸ್ಸುಗಳಿವೆ. ಒಟ್ಟು ನಾಲ್ಕು ದಾರಿಯಲ್ಲಿ ಈ ಬಸ್ಸು ಗಳು ಸಂಚರಿಸಿ ಆ ಮಾರ್ಗದಲ್ಲಿ ಬರುವ ಪ್ರೇಕ್ಷಣೀಯ ಸ್ಥಳಗಳನ್ನು ಸವಿವರವಾಗಿ ನಮಗೆ ತೋರಿಸುತ್ತವೆ. ಅಲ್ಲದೆ ಪ್ರವಾಸ ಮುಗಿದ ನಂತರ ಗಿರಾಕಿ ತಂಗಿರುವ ಹೋಟಲಿನಲ್ಲಿ ಅವನನ್ನು ಇಳಿಸುತ್ತವೆ. ಮೂರು ತಾಸಿನ ಈ ನಗರ ಪ್ರವಾಸವನ್ನು ನಾವು ನಾಲ್ಕು ಸಲ ಅಂದರೆ ನಾಲ್ಕು ದಾರಿಯಾಗಿ – ಮುಗಿಸಿದರೆ ರೋಮ್ ನಗರದ ಬಹುಭಾಗ ಕಂಡಂತಾಗು ತ್ತದೆ. ರಾತ್ರಿಯ ವೇಳೆ ನಗರದ ವಿದ್ಯುದಲಂಕಾರವನ್ನು ಆಸ್ವಾದಿಸ ಬಯಸು ವವರಿಗೆ 'ರೋಮ್ ಬೈ ನೈಟ್' ಪ್ರವಾಸವನ್ನು ಏರ್ಪಡಿಸಿದ್ದಾರೆ. ಈ ಶೀರ್ಷಿಕೆಯನ್ನು ಗಮನಿಸಿ ಇರುಳಿನ ಜೀವನದ ವೈಖರಿಯ ಸವಿಯನ್ನು ಕಣ್ಣಿಂದ ಅನುಭವಿಸಲು ನನ್ನ ಕೆಲವು ಸ್ನೇಹಿತರು ಹೋಗಿ ಅವರೆಣಿಕೆ ಹಾಕಿ ದ್ದನ್ನು ಕಾಣದೆ ಬೆಪ್ಪರಂತೆ ಮರಳಿದರು. ರೋಮಿನ ಬೀದಿಯ ದೀಪ ಗಳನ್ನು ತೋರಿಸಿ ಯಾವುದೋ ನೆಲಮಾಳಿಗೆಯ ಒಂದು ಬಾರಿನಲ್ಲಿ ಬೀರು ಕುಡಿಸಿ ಹೋಟಲಲ್ಲಿ ಇವರನ್ನು ಇಳಿಸಿದಾಗ ಇವರ ಬಾಡಿದ ಮೋರೆ ಗಳನ್ನು ನೋಡಿದ ನನಗೆ 'ಹೋಮ್ ಬೈ ನೈಟ್' ಮಾಡಿದ ನಾನೇ ಬುದ್ಧಿ ವಂತ ಎಂದನಿಸಿತು.

## ೦೦ ನಾ ಕಾಣದ ಪೋಪ

ಈ ಕ್ರೈಸ್ತ ಕಾಶಿಯ ಪ್ರಥಮ ಗುರು ಪೋಪ ಜಾನ್ ಅವರನ್ನು ನಾನು ಭೆಟ್ಟಿಯಾಗಬೇಕೆಂದು ರೋಮ್ ಮುಟ್ಟಿದಂದೇ ನನ್ನ ಸ್ನೇಹಿತರು ಏರ್ಪಾಟು ಮಾಡಲು ಹೊರಟಿದ್ದರು. ಆದರೆ ನಾನು ಈ ಸುದಿನವನ್ನು ಮುಂದೂಡಿದ್ದರಿಂದ ಮತ್ತೆಂದೂ ಅದು ಮರುಕಳಿಸದಂತಾದ್ದು ಒಂದು ಘಟನೆ ಆಯಿತು. ಇಂಗ್ಲಿಷಿನಲ್ಲಿ 'ಒಂದು ಮೊಳೆ ಇಲ್ಲದ್ದಕ್ಕಾಗಿ ಕುದುರೆ ತಪ್ಪಿಸಿಕೊಂಡು ಹೋದ ಬಗ್ಗೆ ಒಂದು ಶಿಶುಗೀತೆ ಇದೆಯಲ್ಲವೇ. ನೇಪಲ್ಸಿನಲ್ಲಿ ನನ್ನ ಪ್ರಥಮ ದಿನ ಕಳೆದ ತಕ್ಷಣ 'ಮನೆರೋಗ'ದಿಂದ ಬಳಲಿದವನಾಗಿ ಆಸರೆಗೆಂದು ರೋಮಿಗೆ ಧಾವಿಸಿದೆನೆಂದು ಮೊದಲು ಹೇಳಿದೆನಷ್ಟೆ. ಆಗ ನನ್ನ ಕಪ್ಪು ಬೂಟನ್ನಿರಿಸಿದ ಟ್ರಂಕು ಇನ್ನೂ ಬಂದರಿನ ಕಸ್ಟಮ್ಸ್‌ನವರ ಅಧೀನದಲ್ಲಿದ್ದುದರಿಂದ ಯಾವುದೋ ಅಸಂಗತವಾದ ಕ್ಯಾನ್ವಾಸ್ ಶ್ಯೂ ಹಾಕಿಕೊಂಡು ಹೊರಟಿದ್ದೆ. ಕ್ಯಾನ್ವಾಸ್ ಬೂಟು ಹಾಕಿಕೊಂಡು ಪೋಪ್‌ರನ್ನು ನೋಡುವುದು ಶಾಸ್ತ್ರಸಮ್ಮತವಾಗಿರಲಿಲ್ಲ; ಹೊಸ ಕಪ್ಪು ಶ್ಯೂ ಕೊಂಡರೆ ನನ್ನ ಹತ್ತಿರ ಇದ್ದ ಅಮೌಲ್ಯ ೬೫ ಪೌಂಡುಗಳಲ್ಲಿ ಎರಡು ಮೂರು ಪೌಂಡು ಕೈಬಿಟ್ಟಹಾಗೆ. ಊರಿನ ನನ್ನ ಗುರುಗಳನ್ನಾದರೂ ಅವರು ಕರೆಯದೆ ನಾನಾಗಿ ಹೋಗಿ ನೋಡುವ ಮನೋವೃತ್ತಿ ನನಗಿಲ್ಲವಾಗಿ, ಸ್ವಂತ ಖರ್ಚಿನಲ್ಲಿ ವಿದೇಶೀಯ ಪೋಪರನ್ನು ನೋಡಬೇಕೆ? ಎಂಬ ಅಸಡ್ಡೆಯಿಂದ ಕಾರ್ಯಕ್ರಮವನ್ನು ಹಿಂದೆ ತಳ್ಳಿದೆ. ತದನಂತರ ಪೋಪ ಜಾನ್ ಅವರ ಪ್ರಾಗತಿಕ ಯೋಜನೆಗಳನ್ನು ಕ್ರಮಶಃ ಅರಿತ ಮೇಲೆ ಅವರನ್ನು ಕಂಡೇ ಹೋಗೋಣ ಎನಿಸಿತ್ತು. ಆದರೆ ವಿಧಿ ಬೇರೆಯೇ ಎಣಿಸಿತು. ಮೇ ೩೧—ನಾನು ಇತಾಲಿಯದ ಭೂಮಿಯಲ್ಲಿ ಕಳೆದ ಕೊನೆಯ ದಿನ. ಅಂದು ಮತ್ತೆ ನನ್ನ ಇಸ್ವೇ ಸಂಸ್ಥೆಯ ಸಹಪಾಠಿಗಳ ಜತೆ ನಮಗೆ ಪೋಪ್ ದರ್ಶನ ನಿಯೋಜಿತವಾಗಿತ್ತು. ಆದರೆ ಪೋಪರು ಒಂದು ವಾರದಿಂದ ಕಾಯಿಲೆಬಿದ್ದು ಕಾರ್ಯಕ್ರಮ ರದ್ದಾಯಿತು. ಆ ರಾತ್ರಿ ನಮ್ಮ ಇಸ್ವೇ ಪ್ರಾಧ್ಯಾಪಕರೊಡನೆ ನಮಗೆ ಕೊನೆಯೂಟ, ಸಮಾರೋಪ ಸತ್ಕಾರ—ಇದನ್ನು ನಾವು ಮುಚ್ಚಿದ ಬಾಗಿಲಿನೊಳಗೇ ನೆರವೇರಿಸಬೇಕಾಯಿತು. ವಿದಾಯ ಕಾಲದ ನಮ್ಮ ಅನ್ಯೋನ್ಯ ದುಃಖಕ್ಕೆ ಪೋಪರ

ದೇಹಾಲಸ್ಯ ಬರೆ ಎಳೆದಿತ್ತು. ಇಡೀ ರಾತ್ರಿ ಸ್ಯೆಂಟ್ ಪೀಟರ್ಸ್ ಚೌಕದಲ್ಲಿ ಧರ್ಮಭೀರು ಇತಾಲಿಯನ್ ಶ್ರೀಸಾಮಾನ್ಯರು ಜಾಗರ ಹೂಡಿದರು. ರಾತ್ರಿ ಕಳೆಯುತ್ತಿದ್ದಂತೆ ಹಸನ್ಮುಖಿ ಪೋಪ ಜಾನ್ ಕೊನೆಯುಸಿರೆಳೆದ ರೆಂದು ಲಂಡನಿಗೆ ಹೋದ ಮೇಲೆ ನನಗೆ ತಿಳಿಯಿತು.

ನಾನು ರೋಮ್‌ಗೆ ಹೋಗುವುದಕ್ಕಿಂತ ಕೆಲವು ತಿಂಗಳು ಮುನ್ನವೇ ಪೋಪರು ಕರೆದ ಧರ್ಮ ಸಮ್ಮೇಳನ ಅಲ್ಲಿ ಸಮಾವೇಶಗೊಂಡಿತ್ತು. ಬಸ್ಸುಗಳಲ್ಲಿ ಕಾರುಗಳಲ್ಲಿ ಸಾಲಂಕೃತವಾಗಿ ವರ್ಣಮಯ ಉಡುಪನ್ನು ತೊಟ್ಟ ಕರಿ ಬಿಳಿ ಏಶ್ಯನ್ ಲ್ಯಾಟಿನ್ ಅಮೆರಿಕನ್ ಧರ್ಮಗುರುಗಳನ್ನು ನೂರಾರು ಸಂಖ್ಯೆಯಲ್ಲಿ ನೋಡಬಹುದಾಗಿತ್ತು. ಇವರಲ್ಲಿ ಭಾರತದಿಂದ ಬಂದ ಗುರುಗಳಿಗೆ ಅಧಿಕೃತವಾದ ನೆರವನ್ನೂ, ಮಾನವೀಯ ಪ್ರೀತಿ ವಿಶ್ವಾಸಗಳನ್ನೂ ನೀಡಿ ದೇವರಾಯರು ಭಾರತೀಯ ಕ್ರೈಸ್ತ ಗುರುಗಳ ಪ್ರೀತಿಯನ್ನು ಗಳಿಸಿದ್ದರು. ಒಂದು ದಿನ ಸುಮಾರು ೩೦–೪೦ ಭಾರತೀಯ ಗುರುಗಳ ಜತೆಗೆ ದೇವರಾಯರೂ ನಾನೂ ಕೂತು ಫೋಟೋ ತೆಗೆಸಿ ಕೊಳ್ಳಬೇಕಾಯಿತು. ಟೈಬರ್ ನದಿಯನ್ನು ದಾಟಿ ಒಂದು ಬೆಟ್ಟದಲ್ಲಿ ಜೆಸು ಯಿಟ್ ತರಬೇತಿ ಕೇಂದ್ರವಿದೆ. ಯಾವುದೋ ಸಂಜೆ ನಾವು ಅಲ್ಲಿಗೆ ತೆರಳಿ ಅವರ ಆತಿಥ್ಯವನ್ನು ಸ್ವೀಕರಿಸಿದೆವು. ತರಬೇತಿ ಕೇಂದ್ರ ನಿಲುವಂಗಿಯವರ ಅಂತಾರಾಷ್ಟ್ರೀಯ ನಿಲ್ದಾಣದಂತೆ ಸೊಗಯಿಸಿತು. ಅಲ್ಲಿ ಜೆರೋಮ್ ಡಿಸೋಜರಲ್ಲದೆ ಇನ್ನೊಬ್ಬರು ಉಡುಪಿಯ ಪಾದ್ರಿ (ಭಾರತೀಯ ನೌಕಾ ಪಡೆಯ ಮಾಜಿ ಅಧಿಕಾರಿ) ಸಿಕ್ಕಿ ಉಡುಪಿಯವನಾದ ನನ್ನನ್ನು ಮತ್ತೊಮ್ಮೆ ಬಂದು ನೋಡಬೇಕೆಂದು ಒತ್ತಾಯಿಸಿದರು. ನಮಗಿಬ್ಬರಿಗೂ ಹೆಡ್ಮಾಸ್ಟರ್ ಆದ ಶ್ರೀ ರಾಕ್ ಫೆರ್ನಾಂಡೀಸ್‌ರನ್ನು ಅವರು ಸ್ಮರಿಸಿ ಕೊಂಡರು.

ಇತಲಿಯಲ್ಲಿ ಧರ್ಮಗುರುಗಳಿಗೆ ಜನಜೀವನದಲ್ಲಿ ವಿಶಿಷ್ಟ ಸ್ಥಾನ ವಿದೆ. ಕ್ಯಾಥೊಲಿಕ್ ಜನಾಂಗದ ತಾಯ್ನೆಲವಾದ ಈ ದೇಶದಲ್ಲಿ ಗುರುಗಳು ಜನಜೀವನದೊಡನೆ ಹಾಸುಹೊಕ್ಕಾಗಿ ಸೇರಿಕೊಂಡಿದ್ದಾರೆ. ರಾಜಕೀಯ ವಾಗಿ ಮಾರ್ಕ್ಸ್‌ವಾದವನ್ನೊಪ್ಪಿಕೊಂಡವರೂ ಗುರುಗಳಿಗೆ ತಗ್ಗಿ, ಬಗ್ಗಿ ನಡೆಯುತ್ತಾರೆ. ಕ್ರೈಸ್ತ ಮತದ ಸಂಪ್ರದಾಯಗಳನ್ನು ತಮ್ಮ ವೈಯಕ್ತಿಕ ಮತ್ತು ಕೌಟುಂಬಿಕ ಜೀವನದಲ್ಲಿ ಪಾಲಿಸುತ್ತಾರೆ. ವಿಶ್ವವಿಶಾಲವಾಗಿ

ವ್ಯಾಪಿಸಿರುವ ರೋಮನ್ ಕ್ಯಾಥೊಲಿಕ್ ಪಂಥದ ಬುನಾದಿ ಮಾರ್ಕ್ಸ್
ವಾದದ ನಾಸ್ತಿಕತೆಯೂ ಅಲುಗಾಡಿಸಲಾರದಷ್ಟು ಭದ್ರವಾಗಿದೆ. ಧರ್ಮ
ಶ್ರದ್ಧೆ ಇರುವಲ್ಲಿ ಜೀವನದ ಸಮಸ್ಯೆಗಳ ಸಿಡಿತ, ತುಮುಲ, ಒಳತೋಟಿ
ಕಡಿಮೆಯಾಗಿರುವುದರಿಂದ ಮನೋರೋಗಿಗಳ ಸಂಖ್ಯೆ ಕಡಿಮೆಯಾಗಿರು
ತ್ತದಂತೆ. ಇತಲಿಯ ಧಾರ್ಮಿಕ ಪರಿಸರವು ಸಾಮಾನ್ಯ ಮನುಷ್ಯನ ಬದು
ಕಿನ ಸಮತೋಲನವನ್ನು ಉಳಿಸಿಕೊಂಡು ಬಂದಿದೆ. ಹಳ್ಳಿ – ಶಹರು,
ಕಾಡು-ಮೇಡು, ಬೆಟ್ಟ ಕಣಿವೆ ಎನ್ನದೆ ಎಲ್ಲೆಲ್ಲೂ ತಲೆ ಎತ್ತಿ ನಿಂತಿರುವ
ಹಳೆ ಹೊಸ ಇಗರ್ಜಿಗಳು, ಪ್ರತಿ ಸ್ಥಳದಲ್ಲಿಯೂ ಜನರಿಗೆ ಧರ್ಮೋಪಚಾರ
ವನ್ನೆಸಗುವ ಕರಿ ಬಿಳಿ ನಿಲುವಂಗಿಯ ಅಸಂಖ್ಯಾತ ಧರ್ಮಗುರುಗಳು
ಇತಲಿಯ ಬದುಕಿಗೆ ಸಂಸ್ಕಾರವನ್ನೂ ಸಾರ್ಥಕ್ಯವನ್ನೂ ಒದಗಿಸಿದ್ದಾರೆ.
ಪ್ರಾಯಶಃ ಇಂಥ ಪರಿಸರವನ್ನು ಇನ್ನೆಲ್ಲಾದರೂ ಕಾಣಬೇಕಾದರೆ ನಾವು
ಭಾರತಕ್ಕೇ – ಅದರಲ್ಲೂ ದಕ್ಷಿಣ ಭಾರತಕ್ಕೇ – ಕಣ್ಣು ಹೊರಳಿಸಬೇಕಾ
ಗುವುದು.

ಆರ್ಥಿಕ ಅಭಿವೃದ್ಧಿಯಂಥ ಶುದ್ಧ ಭೌತಿಕ ವಿಷಯವನ್ನು ಕಲಿಸು
ವುದಕ್ಕೆಂದೇ ವ್ಯವಸ್ಥಿತವಾದ ನಮ್ಮ ಇಸ್ಟೇಯಲ್ಲೂ ಒಂದೆರಡು ಬಾರಿ
ಧರ್ಮಗುರುಗಳ ಪ್ರವೇಶ-ಪ್ರವಚನ ನಡೆಯಿತು. ಮೊನ್‌ಸಿನ್ಯಾರ್
ಒಬ್ಬರು ಪೋಪ್ ಜಾನ ಬಡ ದೇಶಗಳ ಬೆಳವಣಿಗೆಯ ಬಗ್ಗೆ ನೀಡಿದ
ಸಂದೇಶದ ಕುರಿತು ಉಪನ್ಯಾಸ ಮಾಡಿದರು. ರಾತ್ರಿಯೂಟದ ಬಳಿಕ
ನಡೆದ ಈ ಎರಡು ಉಪನ್ಯಾಸಗಳಲ್ಲಿಯೂ ಹಾಜರಿದ್ದ ನನಗೆ ಅವರ
ಉಪನ್ಯಾಸದ ವಿಷಯಕ್ಕಿಂತಲೂ ಅವರ ಪ್ರವಚನದ ರಾಗ-ಧಾಟಿಯ
ಮೇಲೆಯೇ ಹೆಚ್ಚು ಗಮನವಿದ್ದಿತು. ನನ್ನ ಸಹಪಾಠಿಗಳಲ್ಲಿ ಕೆಲವರು ಈ
ಉಪನ್ಯಾಸವನ್ನು ಮೆಚ್ಚಲು ಇನ್ನೊಂದು ಕಾರಣವೂ ಇತ್ತು. ಮೊನ್‌ಸಿ
ನ್ಯಾರ್ ರೋಮಿನಿಂದ ಬಂದವರೆಂದು ಅವರ ಹೆಸರಿನಲ್ಲಿ ನಮಗೂ ವಿಶೇಷ
ಔತಣ – ಹುಳಿ ತೀರ್ಥ – ಬಡಿಸಿದರು. ಹದತಪ್ಪಿ ತೀರ್ಥ ಸ್ವೀಕರಿಸಿ
ಮತ್ತರಾದಕೆಲವರಿಗೆ ಉಪನ್ಯಾಸಕಾರರೇ ಪೋಪ್ ಜಾನರೆಂಬ ಭ್ರಮೆಯೂ
ಉಂಟಾಯಿತಂತೆ.

ಗುರುಗಳಿಂದ ಸಾಮಾಜಿಕ ಧಾರ್ಮಿಕ ಪ್ರಯೋಜನವನ್ನು ಪಡೆದ
ಇತಾಲಿಯನ್ ಶಿಷ್ಯವರ್ಗ ಈ ಗುರುಗಳ ಅಸಂಖ್ಯಾತ ಮಠಸಂದೋಹದ

ಆರ್ಥಿಕ ಭಾರವನ್ನು ಅದು ಹೇಗೆ ಹೊತ್ತುಕೊಂಡಿದೆ ಎಂಬುದೂ ಒಂದು ಸೋಜಿಗದ ವಿಷಯ. ಸಂದರ್ಭ ದೊರೆತಾಗಲೆಲ್ಲ ಕೆಲವು ಕೆಲಸಗಳನ್ನು ಗುರುಮಠದಿಂದಲೇ ಮಾಡಿಸುವುದು ಇತಾಲಿಯದಲ್ಲಿ ಸಾಮಾನ್ಯ. ಇದಕ್ಕೆ ಕಾರಣ, ಗುರುಮಠಗಳು ಬರೇ ಪಾಠ ಪ್ರವಚನದ ಕೇಂದ್ರಗಳಾಗಿಲ್ಲದಿರುವುದು. ಅಲ್ಲಿ ಕೈಕಸುಬುಗಳನ್ನೂ ಕಲಿಸುತ್ತಾರೆ. ಅಲ್ಲಿನ ಪಾದ್ರಿಗಳು ಯಾವ ಕೆಲಸವನ್ನಾದರೂ ಮಾಡಬಲ್ಲರು, ಮಾಡಿಸಬಲ್ಲರು. ನಮಗೆ ಪೋಪರ ಸಂದೇಶವನ್ನು ಬೀರಲು ಬಂದಿದ್ದ ಮೋನ್‌ಸಿನ್ಯಾರ್ ನಮ್ಮ ಜತೆ ನೇಪಲ್ಸಿನ 'ಇಲ್‌ಮತ್ತೀನಾ' ದಿನಪತ್ರಿಕೆಯ ಯಂತ್ರಾಗಾರದಲ್ಲಿ ಮುದ್ರಣ ಯಂತ್ರಗಳ ಪರಿಚಯವನ್ನು ತಜ್ಞರಂತೆ ವಿವರಿಸಿ ಹೇಳಿದರು. ನಮಗೆ ನಮ್ಮ ಸಂಸ್ಥೆ ನೀಡಿದ ಡಿಪ್ಲೊಮಾವನ್ನು ರೋಮಿನ ಯಾವುದೋ ಗುರುಮಠದಲ್ಲಿ ಸುಂದರವಾಗಿ ಕೈಬರಹದಲ್ಲಿ ಬರೆಸಿದ್ದರು. ಬೆಟ್ಟದ ಹಳ್ಳಿಯ ಒಂದು ಇಗರ್ಜಿಯಲ್ಲಿ ನಮ್ಮ ಡೈರೆಕ್ಟರ್ ಡಿ ಜನ್ನಾರೋ ನಮಗೆಲ್ಲ ಒಂದೊಂದು ಕಾರ್ಡು ಚಿತ್ರ ತೆಗೆಸಿಕೊಟ್ಟು, ಪಾಕೇಟಿನಿಂದ ಒಂದಷ್ಟು ಕಿತ್ತಳೆ ನೋಟುಗಳನ್ನು ಕೊಟ್ಟಿದ್ದನ್ನು ಅವಾಕ್ಕಾಗಿ ನೋಡಿದ ನಮಗೆ ಇಟಲಿಯದ ಶಿಷ್ಯಕೋಟಿ ಗುರುಮಠಗಳಿಗೆ ಆರ್ಥಿಕ ಬೆಂಬಲ ನೀಡುವ ಧಾರಾಳ ಮನೋಧರ್ಮದ ಪರಿಚಯವಾಯಿತು. ಫ್ಲಾರೆನ್ಸ್ ನಗರ ಚರ್ಮದ ಸರಕುಗಳಿಗೆ ಪ್ರಸಿದ್ಧವಾದುದಷ್ಟೇ. ಅಲ್ಲಿನ ಒಂದು ಇಗರ್ಜಿಯಲ್ಲಿ ತರಬೇತಿಗೆ ಬರುವ ಪಾದ್ರಿಗಳಿಗೆ ಚರ್ಮದ ಕುಶಲ ಕೈಗಾರಿಕೆಯನ್ನು ಕಲಿಸುವುದಷ್ಟೇ ಅಲ್ಲದೆ ವಿದೇಶೀಯರಿಗೆ ದುಬಾರಿ ಬೆಲೆಗೆ ಸರಕುಗಳನ್ನು ಮಾರಲು ಒಂದು ದರ್ಶನ ಕೇಂದ್ರವನ್ನೂ ಸ್ಥಾಪಿಸಿದ್ದಾರೆ. ಹಾಲೆಂಡಿನ ಕ್ಯಾಥೊಲಿಕ್ ಯುನಿವರ್ಸಿಟಿಯಿಂದ ಒಬ್ಬರು ಅರ್ಥಶಾಸ್ತ್ರದಲ್ಲಿ ಪರಿಣತಿ ಪಡೆದ ಪಾದ್ರಿಯವರನ್ನು ನಮಗೆ ಉಪನ್ಯಾಸ ಮಾಡಲು ಕರೆಸಿದ್ದರು. ಇವರು ನಮ್ಮ ದಕ್ಷಿಣ ಇಟಲಿಯ ಪ್ರವಾಸ ಕಾಲದಲ್ಲಿ ನಮ್ಮೊಡನೆ ಸ್ನೇಹಿತರಷ್ಟೇ ಸಲುಗೆಯಿಂದ ವರ್ತಿಸಿ ನಮ್ಮ ಪ್ರವಾಸದ ಕಷ್ಟಸುಖದಲ್ಲಿ ಸಹಭಾಗಿಗಳಾದರು. ಅವರ ಪಾಂಡಿತ್ಯ ಸ್ನೇಹ ಮತ್ತು ವಿನಯಪೂರ್ಣ ನಮ್ಮಲ್ಲಿ ಆಮೇಲೆ ಮನೆಮಾತಾದವು.

## ೦ ೦ ಇಸ್ವೇ ತೊಡಗಿತು

ರೋಮಿನ ನನ್ನ ವಾರಪೂರ್ತಿಯ ಪ್ರಥಮ ವಾಸ್ತವ್ಯ ಮುಗಿಸಿ ದಶಂಬರ ೧ರಂದು ನೇಪಲ್ಸಿನ ಲೇಪ್ಲೊಂತಾನೆ ಹೋಟಲಿಗೆ ಮರಳಿದೆ. ದಶಂಬರ ೩ರಂದು ಇಸ್ವೇಯ ಅಧ್ಯಯನ ಕಾರ್ಯಕ್ರಮ ಯಾವ ಸಡ ಗರವೂ ಇಲ್ಲದೆ ಡೈರೆಕ್ಟರ್ ಜನ್ನಾರೋ ಅವರ ಉಪೋದ್ಘಾತ ಭಾಷಣ ದಿಂದ ತೊಡಗಿತು. ಮೊದಲ ನಿಜವಾದ ಉಪನ್ಯಾಸ ನೇಪಲ್ಸ್ ವಿಶ್ವವಿದ್ಯಾ ನಿಲಯದ ಅರ್ಥಶಾಸ್ತ್ರ ವಿಭಾಗದ ವರಿಷ್ಠ ಪ್ರೊಫೆಸರ್ ಪಲೊಂಬಾ ಅವರದು. ಮದರಾಸು ಬಿಟ್ಟು ಹದಿಮೂರು ವರ್ಷಗಳ ಅನಂತರ ನಾನು ಮತ್ತೊಮ್ಮೆ ವಿದ್ಯಾರ್ಥಿಯಾದೆ. ಪ್ರತಿ ಉಪನ್ಯಾಸವನ್ನು, ಉಪ ನ್ಯಾಸಕರನ್ನು ನನ್ನ ಅಂತರಂಗದಲ್ಲೇ ಒರೆಗೆ ಹಚ್ಚುವ ವಿಮರ್ಶಕ ಬುದ್ಧಿ ನನ್ನನ್ನು ಸದಾ ಕಾಡುತ್ತಿತ್ತು. ಉಪನ್ಯಾಸಕರ ವಿಥ ವಿಧವಾದ ಪಾಂಡಿತ್ಯದ ಆಕರ್ಷಣೆ–ಒಂದು ಕಡೆ, ನಾಲ್ಕು ಭೂಖಂಡಗಳಿಂದ ಚಿತ್ರಯಿಸಿದ ನಾನಾ ದೇಶದ, ನಾನಾ ಹಿನ್ನೆಲೆ, ಸಂಸ್ಕಾರ ಮತ್ತು ವೃತ್ತಿ ಮನೋವೃತ್ತಿ ಗಳ, ನಾನಾ ವರ್ಣದ, ವಯಸ್ಸಿನ ನನ್ನ ಸಹಪಾಠಿಗಳ ನಿರಂತರ ರಸಿಕತೆ, ರಸವಂತಿಕೆ ಒಂದು ಕಡೆ, ನೇಪಲ್ಸ್ ನಗರದ ರಮಣೀಯ ಸನ್ನಿವೇಶ ಇನ್ನೊಂದು ಕಡೆ – ಹೀಗೆ ಈ ಮೂರು ಮುಪ್ಪುರಿಗೊಂಡು ನನ್ನ ಬದುಕಿನ ಆರು ತಿಂಗಳನ್ನು ಒಂದು ಪೂರ್ವ ಪುಣ್ಯ ಸಂಚಿತ ರಸಪರ್ವವನ್ನಾಗಿ ಮಾಡಿದವು. ನಾನು ಉಪಾಧ್ಯಾಯನಾದರೂ, ಅಧ್ಯಯನವನ್ನಿನ್ನೂ ತೊರೆ ಯದ ಅರ್ಥಶಾಸ್ತ್ರಾಭ್ಯಾಸಿಯಾಗಿದ್ದುದರಿಂದ ನನ್ನ ವಯಸ್ಸು ಅಧ್ಯಯ ನಕ್ಕೆ ಯಾವ ಆತಂಕವನ್ನೂ ಮಾಡಲಿಲ್ಲ. ಅಷ್ಟೇ ಏಕೆ, ನನ್ನ ಇಸ್ವೇಯ ಮೊದಲ ವರ್ಷದ ವಿದ್ಯಾರ್ಥಿಗಳಲ್ಲಿ ನಾನೇ ಸರ್ವಪ್ರಥಮನೆಂದು ಇಸ್ವೇ ಮಾಡಿದ ಗುಟ್ಟಿನ ತೀರ್ಪು ರಟ್ಟಾದಾಗ ಈ ಶ್ರೇಷ್ಠ ಮೌಲ್ಯಾಂಕನದ ಕೀರ್ತಿ ಯನ್ನು ನಾನು ಭಾಗಶಃ ನನ್ನ ಉಪನ್ಯಾಸಕರಿಗೂ, ಕುಶಾಗ್ರ ಮತಿಗಳಾದ ನನ್ನ ಸಹಪಾಠಿಗಳಿಗೂ, ನನ್ನ ಆರೋಗ್ಯವನ್ನು ಕಾಪಾಡಿಕೊಟ್ಟ ನೇಪಲ್ಸ್ ನಗರದ ವಾತಾವರಣಕ್ಕೂ ಹಂಚಿಕೊಡಬೇಕಾಯಿತು.

ಇಸ್ವೇ (I. S. V. E = Istituto Di Studi per to Sviluppo Economico) ಎಂಬುದು ಒಂದೇ ಉಸಿರಿಗೆ ಉಚ್ಚರಿಸಲಾರದ,

ಅಥವಾ ಉಚ್ಚರಿಸಿದರೆ ಉಸಿರು ಕಟ್ಟುವಷ್ಟು ದೀರ್ಘವಾದ ನನ್ನ ಶಿಕ್ಷಣ ಸಂಸ್ಥೆಯ ಹ್ರಸ್ವ ನಾಮ. "ಆರ್ಥಿಕ ಅಭಿವೃದ್ಧಿಯ ಅಧ್ಯಯನ ಸಂಸ್ಥೆ" ಎಂದು ಅದರ ಅರ್ಥ. ರೋಮ್ ಇತಾಲಿಯದ ರಾಜಕೀಯ ಕೇಂದ್ರ, ತೊರಿನೋ-ಮಿಲಾನೊ ಆರ್ಥಿಕ-ವಾಣಿಜ್ಯ ಕೇಂದ್ರ-ಹೀಗಿದ್ದೂ ಆರ್ಥಿಕ ಅಭಿವೃದ್ಧಿಯನ್ನು ಕಲಿಸುವ ಒಂದು ಸಂಸ್ಥೆ, ಹಿಂದುಳಿದ ದಕ್ಷಿಣ ಇಟಲಿಯ ಪ್ರಾತಿನಿಧಿಕ ನಗರ ನೇಪಲ್ಸಿನಲ್ಲಿ ಜನ್ಮವೆತ್ತಲು ಪ್ರಬಲ ಕಾರಣಗಳಿವೆ. ೧೯೫೦ರಿಂದ ಇತಾಲಿಯ ದೇಶದಲ್ಲಿ ಯೋಜನಾತ್ಮಕವಾಗಿ ಅರ್ಥ ಮಂಡಲವನ್ನು ಬೆಳೆಸಬೇಕೆಂಬ ರಾಷ್ಟ್ರೀಯ ಹಂಬಲವು ಮೂಡಿ ಪ್ರವರ್ಧಮಾನವಾಯಿತು. ಇಸ್ವೀ ಸ್ಥಾಪನೆಗೊಂಡ ೧೯೬೧ನೆಯ ವರ್ಷ ದಲ್ಲಿ – ೧೨ ವರ್ಷಗಳ ಸಂತತ ಪ್ರಯತ್ನದಿಂದ ಯುದ್ಧಭಗ್ನವಾದ ಇತಾಲಿ ಯದ ಆರ್ಥಿಕ ಜೀವನ ಸುಧಾರಿಸಿತ್ತು. ಆಡಳಿತಗಾರರಲ್ಲಿ ಇತಾಲಿಯದ ದಕ್ಷಿಣ ಭಾಗವನ್ನು ಮುಂದಕ್ಕೆ ತರುವ ಆಸೆಯು ಸ್ವಲ್ಪಮಟ್ಟಿಗೆ ಅಂಕುರಿಸಿ ದಂತೆ ಅಲ್ಲಲ್ಲಿ ಔದ್ಯಮಿಕ ಕೈಗಾರಿಕೆಗಳೂ, ಬಂದರು, ರಾಜಮಾರ್ಗ ಮುಂತಾದ ಸ್ಥಾವರಗಳು ತಲೆ ಎತ್ತಿದವು. ಇದರಿಂದ ಇತಾಲಿಯನ್ ಉದ್ದಿಮೆಗಾರರಿಗೆ ಒಂದು ಬಗೆಯ ಆತ್ಮವಿಶ್ವಾಸ, ಧೈರ್ಯ ಮೂಡಿದ್ದರ ಸಂಕೇತವೆನ್ನುವಂತೆ ಭರದಿಂದ ಬೆಳೆದ ಉತ್ತರ ಇತಾಲಿಯದ ಸರಕುಗಳಿಗೆ ಮಾರುಕಟ್ಟೆಯಾಗಬಲ್ಲ ಹಿಂದುಳಿದ ದೇಶಗಳ ಗಿರಾಕಿಗಳ ಮನವೊಲಿ ಸುವ ಸಾರ್ವಜನಿಕ ಸಂಪರ್ಕ ಸಾಧನವಾಗಿ ಅನಭಿವೃದ್ಧ ತೆಂಕಣ ಇತಾಲಿಯ ರಾಜಧಾನಿಯೆನಿಸುವ ನೇಪಲ್ಸ್ ನಗರದಲ್ಲಿಯೇ ಇಸ್ವೀ ಜನ್ಮ ತಾಳಿದ್ದು ಅರ್ಥಪೂರ್ಣವಾಗಿತ್ತು. ಪ್ರಗತಿಶೀಲ ತೊರಿನೋ-ಮಿಲಾನೊ ನಗರದ ಪ್ರತಿಷ್ಠಿತ ಉದ್ದಿಮೆದಾರರೇ ನೇಪಲ್ಸನ್ನು ಆಯ್ಕೆ ಮಾಡಿದ್ದು ಅವರ ವಿವೇಕವನ್ನೂ ಜಾಣ್ಮೆಯನ್ನೂ ಸಾರುವುದು. ಅಂತಾರಾಷ್ಟ್ರೀಯ ವಾಣಿಜ್ಯ ಛೇಂಬರಿನ ಇತಾಲಿಯನ್ ಶಾಖೆ ನಮ್ಮ ಇಸ್ವೀಗೆ ತಂದೆ; ಅಂತರಾ ಷ್ಟ್ರೀಯ ತಾಂತ್ರಿಕ ಮತ್ತು ಆರ್ಥಿಕ ಸಮಿತಿ ತಾಯಿ; ಇತಾಲಿಯನ್ ಸರಕಾರ ದಾದಿ. ಸಂಸ್ಥೆಯ ರೂಪರೇಖೆಗಳನ್ನು ನಿರ್ಮಿಸಿಕೊಟ್ಟವರು ಆಡಳಿತ ಶಿಕ್ಷಣವನ್ನು ನೀಡುವ ತೋರಿನೋ ನಗರದ ಇಪ್‌ಸೋವಾ (Ipsoa) ಎಂಬ ಇನ್ನೊಂದು ಸಂಸ್ಥೆ. ಇಸ್ವೀ ಪಾಠಕ್ರಮದಲ್ಲಿ, ನೆರ ವಾಗಲು ಇತಲಿಯ ವಿಶ್ವವಿದ್ಯಾನಿಲಯಗಳು – ಮುಖ್ಯವಾಗಿ ರೋಮ್

ಮತ್ತು ನೇಪಲ್ಸ್ – ಮಾತ್ರವೇ ಅಲ್ಲದೆ, ಹಾಲ್ಲೆಂಡಿನ ಕ್ಯಾಥೊಲಿಕ್ ವಿಶ್ವವಿದ್ಯಾನಿಲಯ, ಪ್ಯಾರಿಸಿನ ಓ ಇ ಸಿ ಡಿ, ಇತಾಲಿಯದ ಬೊಲೊನ್ಯಾ ನಗರದಲ್ಲಿರುವ ಅಮೆರಿಕದ ಜಾನ್ಸ್ ಹಾಪ್‌ಕಿನ್ಸ್ ಸ್ನಾತಕೋತ್ತರ ಸಂಶೋಧನ ಕೇಂದ್ರ, ರೋಮಿನ ಇಂಟರ್ ನ್ಯಾಶನಲ್ ಕಂಪ್ಯೂಟರ್ ಸೆಂಟರ್ ಮುಂತಾದ ಸಂಸ್ಥೆಗಳು ಉತ್ಸಾಹದಿಂದ ಇಸ್ವೇ ಕೂಟವನ್ನು ಸೇರಿಕೊಂಡವು. ಆರ್ಥಿಕ ಬೆಂಬಲವನ್ನು ನೀಡೇಲು ಫಿಯಟ್, ಒಲಿವೆತ್ತಿ, ಪಿರೆಲ್ಲಿ ಮುಂತಾದ ಖಾಸಗಿ ಉದ್ದಿಮೆಗಳೂ ಈರಿ, ಫಿನ್ ಇಂಡಸ್ಟ್ರಿಯ, ಇಸ್ವೆಮಿರ್ ಮುಂತಾದ ಸರ್ಕಾರಿ ಸಂಸ್ಥೆಗಳೂ, ಬಾಂಕಾ ದಿತಾಲಿಯಾ ಮತ್ತು ಬಾಂಕೊದಿನಾಪೊಲಿ ಮುಂತಾದ ಬ್ಯಾಂಕುಗಳೂ ಪಾಲುಗಾರಿಕೆ ಹೊತ್ತವು. ವಿದ್ಯಾರ್ಥಿಗಳನ್ನು ಏಶಿಯ, ಲ್ಯಾಟಿನ್, ಅಮೆರಿಕ, ಆಫ್ರಿಕ, ಮತ್ತು ದಕ್ಷಿಣ ಯುರೋಪ್ ಖಂಡಗಳಿಂದ ಆರಿಸಬೇಕೆಂದು ಗೊತ್ತಾಯಿತು. ಇತಲಿಯಲ್ಲಿ ಅನುಸರಿಸಿದ ಅಭಿವೃದ್ಧಿಯ ವಿಧಿ ವಿಧಾನಗಳ ಮೂಲಕ ವಿದ್ಯಾರ್ಥಿಗಳು ಆರ್ಥಿಕ ಬೆಳವಣಿಗೆಯ ಸಾಮಾನ್ಯ ಸೂತ್ರಗಳನ್ನು ಅರಿತುಕೊಳ್ಳುವಂತೆ ಮಾಡಬೇಕು; ತತ್ವ, ಸೂತ್ರ ಮತ್ತು ಪ್ರತ್ಯಕ್ಷಾನುಭವಗಳ ಮಿಲನದಿಂದ ವಿದ್ಯಾರ್ಥಿಗಳಲ್ಲಿ ತಮ್ಮ ಸ್ವಂತ ದೇಶದ ಸಮಸ್ಯೆಗಳ ಜಿಡುಕನ್ನು ಬಿಡಿಸುವ ಕಾರ್ಯಶಕ್ತಿ ಅರಳಬೇಕು; ಪರಸ್ಪರ ಸಹಕಾರ ಮತ್ತು ಸಹಜೀವನದ ತತ್ವಗಳನ್ನು, ಹೊಂದಾಣಿಕೆಯ ಅನುಭವವನ್ನು ಅವರಲ್ಲಿ ಕುದುರಿಸಿ ಅವರ ನಡವಳಿಕೆ ಅಂತಾರಾಷ್ಟ್ರೀಯ ಅಭಿವೃದ್ಧಿಗೆ ಅನುಕೂಲಿಸುವಂತೆ ಮಾರ್ಪಡಿಸಬೇಕು – ಈ ಮೂರು ಪ್ರಾಯೋಗಿಕ ಉದ್ದೇಶಗಳನ್ನಿರಿಸಿಕೊಂಡು ಇಸ್ವೇ ಕಾರ್ಯತತ್ಪರವಾಗಬೇಕಾಗಿತ್ತು. ಈ ಉದ್ದೇಶವು ಎಷ್ಟರ ಮಟ್ಟಿಗೆ ನನ್ನ ಮತ್ತು ನನ್ನ ಸಹಪಾಠಿಗಳಿಗೆ ಜೀವನದಲ್ಲಿ ಚರಿತಾರ್ಥವಾಯಿತೆಂಬ ವಿಷಯ ಮುಂದಿನ ಪುಟಗಳಲ್ಲಿ ಬಿತ್ತರಿಸುವುದು ನನ್ನ ಕರ್ತವ್ಯ. ನನ್ನ ಈ ಬರಹದಲ್ಲಿ ಅನೇಕ ಕಡೆ 'ನಮ್ಮ' ಎಂಬುದಾಗಿ ಬಹುವಚನದ ಉಪಯೋಗ ಓದುಗರಿಗೆ ಆಶ್ಚರ್ಯವನ್ನುಂಟುಮಾಡಬಹುದು. ಆದರೆ ಇದು ನನಗೆ ಸ್ವಾಭಾವಿಕವಾಗಿಬಿಟ್ಟಿದೆ. ನಾನನುಭವಿಸಿದ ಕತೆಯನ್ನೇ ಸೂಕ್ಷ್ಮದಲ್ಲಿ ಹೇಳುವುದಾದರೆ ಇದು 'ನಾನು' 'ನಾವು' ಆದ ಕಥೆ: ಹಿಂದುಳಿದ ವಿಧ ವಿಧ ಸಂಸ್ಕಾರ ಮತ್ತು ಹಿನ್ನೆಲೆಯ ಸುಮಾರು ನಲ್ವತ್ತು ಜನ ಬೆಳವಣಿಗೆಯ ಸೂತ್ರಗಳ

ಬಗ್ಗೆ ಅಹರ್ನಿಶಿ ಯೋಚಿಸುತ್ತ, ಯೋಜನೆಗಳ ಸುರುಳಿ ಬಿಚ್ಚುತ್ತ, ಆರ್ಥಿಕ ಸಾಮಾಜಿಕ ತಾರತಮ್ಯಗಳ ನಡುವೆಯೂ ಎದ್ದು ತೋರುವ ಸಮಾನ ಸ್ವರೂಪ ದರ್ಶನವನ್ನು ಮಾಡಿಕೊಂಡು ವಿಶ್ವಕುಟುಂಬದ ಸುಖದುಃಖ ಗಳ ಏಕತಾನವನ್ನು ತಮ್ಮ ಹೃದಯದಲ್ಲಿಯೂ, ಏಕರೂಪತೆಯನ್ನು ತಮ್ಮ ಬುದ್ಧಿಯಲ್ಲಿಯೂ ಸ್ಥಿರಗೊಳಿಸಿದ ಸತ್ಯಕಥೆ. ಇಷ್ಟೇ ವಿಶ್ವವಿದ್ಯಾ ನಿಲಯವೇನೂ ಆಗಿರಲಿಲ್ಲವಾದರೂ 'ಮನ್ಮನೋಮಂದಿರಕೆ ಓ ಲೋಕ ಗುರುಗಳೆಲ್ಲ ಬನ್ನಿ' ಎಂದು ಅಕ್ಷರಶಃ ಆಹ್ವಾನವಿತ್ತ ಒಂದು ಅಸಾಂಪ್ರದಾಯಿಕ ಉಚ್ಚ ಅಧ್ಯಯನ ಕೇಂದ್ರವಾಯಿತು; ಲೋಕ ಸಂಸ್ಕೃತಿಯ ಭಿನ್ನರೂಪಗಳನ್ನು ಒಂದೇ ಕಡೆ ಸೇರಿಸಿದ ಅಪೂರ್ವ ಚಿತ್ರ ಶಾಲೆಯಾಯಿತು. ಅರ್ಥಶಾಸ್ತ್ರ. ಸಮಾಜಶಾಸ್ತ್ರ. ರಾಜನೀತಿ, ಮನಃ ಶಾಸ್ತ್ರಗಳಲ್ಲಿ ಪರಿಣತರಾದ ಐರೋಪ್ಯ ಪಂಡಿತರ ವಿಶ್ವಸಂಚಾರಿಗಳ ಆಡುಂಬೊಲವಾಯಿತು. ವಾದಗಳು, ಚರ್ಚೆಗಳು, ನಿರೂಪಣೆಗಳು. ಸಮರ್ಥನೆಗಳು – ಒಂದೇ ಎರಡೇ. ಅಭಿವೃದ್ಧಿ ಪಥದ ಸೂಕ್ಷ್ಮಾತಿ ಸೂಕ್ಷ್ಮ ಅಣುರೇಣುಗಳನ್ನೂ ಬುದ್ಧಿಯ ಬಲೆಯಲ್ಲಿ ಸೆರೆಹಿಡಿದು ಪರೀಕ್ಷಿಸಿ. ವಿವೇಚಿಸಿ, ಚಿಂತನ-ಮಂಥನಗಳಿಗೆ ಒಡ್ಡಿದುದಾಯಿತು. ನಮ್ಮ ಶಿಕ್ಷಕರಲ್ಲಿ ರಾಜನೀತಿಜ್ಞರಿದ್ದರು. ಅರ್ಥಶಾಸ್ತ್ರದ ಘನಪಂಡಿತರು ಹೇಗೂ ಇರಲೇಬೇಕಲ್ಲವೇ ಅವರೂ ಇದ್ದರು, ಮನಃಶಾಸ್ತ್ರಜ್ಞರಿದ್ದರು. ಅರೆಬರೆ ಸಮಾಜವಾದಿಗಳೂ. ಅಚ್ಚ ಕೆಂಬಣ್ಣದ ಸಾಮ್ಯವಾದಿಗಳೂ, ಅವರ ಜತೆಗೆನೆ ವ್ಯಾಪಾರ ಸ್ವಾತಂತ್ರ್ಯದ ಪುರಸ್ಕರ್ತರೂ ಇದ್ದರು. ಎಲ್ಲರೂ ತಮ್ಮ ಒಡವೆಯನ್ನು ನಮ್ಮ ಪರಿಶೀಲನೆಗೆ ಒಡ್ಡಿದರು. ಇವರುಗಳ ಮಾತು. ವಿಚಾರ, ಸಾಮಾಜಿಕ ಸಂಘಟನೆಯ ತತ್ತ್ವನೀತಿಗಳನ್ನು ಬುದ್ಧಿಯ ಒರೆಗೆ ಹಚ್ಚುವುದು ನಮ್ಮ ದೈನಂದಿನ ಕಾರ್ಯಕ್ರಮವಾಯಿತು. ಒಂದು ಸಮಸ್ಯೆಗೆ ಎಷ್ಟು ಮುಖಗಳೋ ಅದರ ಪರಿಹಾರಕ್ಕೆ ಅದರ ಹತ್ತು ಪಟ್ಟು ಹಾದಿಗಳು. ಈ ಪೈಕಿ ಇದಮಿತ್ಥಂ ಯಾವುದು ? ಹಾಗೊಂದು ಇರಬಹುದೇ ?

ಇಷ್ಟೇ ಪ್ರಕಟಣೆಯ ಭಾಷೆಯಲ್ಲಿ ಹೇಳುವುದಾದರೆ:– ಉಪನ್ಯಾಸ ಮತ್ತು ಸಭೆಗಳಿಂದಾಗಿ ವಿದ್ಯಾರ್ಥಿಯ ಮಾನಸಿಕ ದಿಗಂತ ಹಿಗ್ಗುತ್ತದೆ.

– ಅಧ್ಯಯನ ಘಟಕಗಳಿಂದ ಸಾಮಾಜಿಕ ಹೊಂದಾಣಿಕೆ ಮನವರಿಕೆ ಯಾಗುತ್ತದೆ.

– ಸ್ಥಿತಿಚಿತ್ರ ವಿಶ್ಲೇಷಣೆ ( Case study )ಯಿಂದ ವಿಚಾರಶಕ್ತಿ ಕೆರಳುತ್ತದೆ.

– ಸಂಶೋಧಕ ಕಾರ್ಯದಿಂದ ವೈಚಾರಿಕ ಧುರೀಣತ್ವ ಅರಳುತ್ತದೆ.

– ಕಾರ್ಖಾನೆ, ಕೃಷಿಮಂಡಲ ಮುಂತಾದ ಅಭಿವೃದ್ಧಿ ಕ್ಷೇತ್ರಗಳ ವೀಕ್ಷಣೆಯಿಂದ ಆಯಾ ಸ್ಥಳಗಳಲ್ಲಿ ಕಾರ್ಯನಿರತರಾದ ಜನಗಳ ವ್ಯಾವಹಾರಿಕ ದೃಷ್ಟಿಕೋನದ ಪರಿಚಯ ಉಂಟಾಗುತ್ತದೆ.

ಒಟ್ಟಿನಲ್ಲಿ – ವಿಚಾರ ಸ್ವಾತಂತ್ರ್ಯದ ಕೊಟ್ಟಕೊನೆಗೆ ಹೊಣೆಗಾರಿಕೆ ಜಾಗೃತವಾಗುತ್ತದೆ.

ಅವಧಿ, ಪಾಠಪಟ್ಟಿ, ಅಧ್ಯಾಪಕಮಂಡಲ




☐ ಸಾಮಾನ್ಯ:

ಅರ್ಥಶಾಸ್ತ್ರದ ವಿನೂತನ ಸಮಸ್ಯೆಗಳು.

ಅರ್ಥಶಾಸ್ತ್ರಕ್ಕೆ ಬೇಕಾದ ಗಣಿತ.

ಆರ್ಥಿಕ ಸಂಖ್ಯಾಶಾಸ್ತ್ರ, ಜನಸಂಖ್ಯಾಶಾಸ್ತ್ರ.

ಓಪರೇಶನ್ ರಿಸರ್ಚ್.

ರಾಷ್ಟ್ರೀಯ ಆರ್ಥಿಕ ಬಜೆಟ್.

ಅಂತಾರಾಷ್ಟ್ರೀಯ ಅಂಕೆಸಂಖ್ಯೆ.

□ ಆರ್ಥಿಕ ಬೆಳವಣಿಗೆ:

ಸಿದ್ಧಾಂತಗಳು : ಕ್ಲಾಸಿಕಲ್ (ಸಾಂಪ್ರದಾಯಿಕ).
ಮಾರ್ಕ್ಸವಾದಿ, ಸಮಕಾಲೀನ.
ಸೈದ್ಧಾಂತಿಕ ಮಾದರಿಗಳು.
ಆರ್ಥಿಕ ಅಭಿವೃದ್ಧಿಯ ಮೂಲ ಕಾರಣಗಳು.
–ಬಂಡವಾಳದ ಸಂಚಯನ.
ಇವುಗಳ ಉತ್ಪತ್ತಿ ಸಮಸ್ಯೆಗಳು.
ಖಜಾನೆ ಮತ್ತು ಹಣಕಾಸಿನ ಧೋರಣೆಗಳು.
ಇವು ಆಯ್ಕೆ ಮಾಡುವ ಸೂತ್ರಗಳು.
ಜನಸಂಖ್ಯೆ ಮತ್ತು ಶ್ರಮಜೀವಿಗಳ ಸಂಖ್ಯಾ-ಪ್ರಮಾಣ.
ನೈಸರ್ಗಿಕ ಸಂಪತ್ತು.
ಇತರ
–ಆಡಳಿತ, ವೃತ್ತಿಪರ ಶಿಕ್ಷಣ, ಆರೋಗ್ಯ ಸಂರಕ್ಷಣೆ, ತಾಂತ್ರಿಕ ಪ್ರಗತಿ, ವೈಜ್ಞಾನಿಕ ಸಂಶೋಧನೆ, ಔದ್ಯಮಿಕ ಆವಿಷ್ಕಾರ.
ಅಭಿವೃದ್ಧಿಗೆ ಅನುಕೂಲವಾದ ಸಂಘಟನೆ.
ಅಂತಾರಾಷ್ಟ್ರೀಯ ವ್ಯಾಪಾರ ಮತ್ತು ಆರ್ಥಿಕ ಅಭಿವೃದ್ಧಿ.

□ ಆರ್ಥಿಕ ಅಭಿವೃದ್ಧಿ:

ಧೋರಣೆ ಸಾಧನೆ.
ಅಂತಾರಾಷ್ಟ್ರೀಯ ಸಮಸ್ಯೆಗಳ ಧೋರಣೆ.
ಅಭಿವೃದ್ಧಿ ಮುಖವಾದ ಧೋರಣೆಗಳಿಗೆ ನೆರವು ನೀಡುವ ಸಾಧನಗಳು.
ಕಾರ್ಯವಿಧಾನ ಮತ್ತು ಯೋಜನೆ, ಯೋಜನೆಯ ತಂತ್ರಸೂತ್ರಗಳು. ರಾಷ್ಟ್ರೀಯ, ಅಂತಾರಾಷ್ಟ್ರೀಯ ಪ್ರತ್ಯಕ್ಷ ಯೋಜನೆಗಳು
ಇತಾಲಿಯನ್ ಆರ್ಥಿಕ ಅಭಿವೃದ್ಧಿಯ ಸ್ಥಿತಿಚಿತ್ರ.

☐ ವ್ಯವಸ್ಥಾಪಕ ಮತ್ತು ಮಾರಾಟದ ವಿಭಾಗಗಳು:

ವ್ಯಾಪಾರ ವ್ಯವಸ್ಥೆ, ಸಂಘಟನೆ.
ಅಂತಾರಾಷ್ಟ್ರೀಯ ವ್ಯಾಪಾರದ ತಂತ್ರಗಳು.
ಮಾರಾಟದ ಧೋರಣೆ.
ಮಾರಾಟದ ವಿಶ್ಲೇಷಣೆ.

☐ ಮನುಷ್ಯನ ವರ್ತನೆಯ ಶಾಸ್ತ್ರಗಳು:

ಆರ್ಥಿಕ ಬೆಳವಣಿಗೆಯಲ್ಲಿ ಮನಃಶಾಸ್ತ್ರದ ಪಾತ್ರ.
ಆರ್ಥಿಕ ಬೆಳವಣಿಗೆಯ ಸಾಮಾಜಿಕ ಸಮಸ್ಯೆಗಳು.
ವ್ಯಾಪಾರದಲ್ಲಿರುವ ಸಮಾಜಶಾಸ್ತ್ರ.
ಸಾರ್ವಜನಿಕ ಅಭಿಪ್ರಾಯ.

೦ ೦ ವಿಶ್ವ ನೀಡಂ

| | ದೇಶ | ವಿದ್ಯಾರ್ಥಿ |
|---|---|---|
| ಆಫ್ರಿಕ | ೭ | ೮ |
| ಲ್ಯಾಟಿನ್ ಅಮೇರಿಕಾ | ೧೦ | ೧೫ |
| ಏಶಿಯಾ | ೭ | ೧೦ |
| ಯುರೋಪ್ | ೫ | ೯ |
| | ೨೯ | ೪೨ |

ಮುಸಲಿನಿಯ ಕಾಲದಲ್ಲಿ ಕಟ್ಟಲಾದ ನಾಪೊಲಿಯ ಹೊರವಲಯದ ಒಂದು ಪ್ರದರ್ಶನಭವನದಲ್ಲಿ ಆರು ತಿಂಗಳ ಕಾಲ ಇಪ್ಪತ್ತೊಂಬತ್ತು ದೇಶಗಳಿಂದ ಆಗಮಿಸಿದ ೪೨ ಮಂದಿ ವಿದ್ಯಾರ್ಥಿಗಳು ಆಶ್ರಯವನ್ನು

ಪಡೆದರು. ಇಂಗ್ಲಿಷ್, ಇಟಾಲಿಯನ್, ಫ್ರೆಂಚ್, ಸ್ಪಾನಿಷ್, ಸ್ವಾಹಿಲಿ, ಅರೆಬಿಕ್, ಇರಾನಿಯನ್, ಪೋರ್ಚುಗೀಸ್, ಸ್ಲಾವ್ ಪೋಲಿಷ್ ಇತ್ಯಾದಿ ಭಾಷೆಗಳನ್ನಾಡುವ ನಮ್ಮ ದಿನನಿತ್ಯದ ಕಲರವದಿಂದ ಇಷ್ಟೇ ಒಂದು ವಿಶ್ವನೀಡವೆ ಆಯಿತು. ಸೋಮಾಲಿಯದಿಂದ ಅಬ್ದುರ್ರಜಕ್ ಮಹಮ್ಮದ್ ಎಂಬಾತ ಅಲ್ಲಿನ ಸಾಮಾನ್ಯ ಆಡಳಿತ ಕಚೇರಿಯಿಂದ ಬಂದಿದ್ದ. ಆತನ ಜತೆಗೆ ಅದೇ ದೇಶದ ಶಿಕ್ಷಣ ಶಾಖೆಯ ಉನ್ನತಾಧಿಕಾರಿ ಹಸನ್-ಅಲಿ-ಅಲಿಯೂ ಬಂದಿದ್ದ. ಮೊದಲಿನವನು ಮಹಾ ಒರಟ. ಮಾತಿನಲ್ಲೂ ನಡತೆಯಲ್ಲೂ ಎಲ್ಲರನ್ನೂ ಕೆಣಕಿಸುವ, ಎಲ್ಲರಿಂದಲೂ ಬೈಸಿಕೊಳ್ಳುವ ಬುದ್ಧಿಗೇಡಿ. ಎರಡನೆಯವನು ವಿನಯಶಾಲಿ, ನಯವಿದ, ಸ್ನೇಹಭಾಷಿ, ಅಪ್ಪಟ ಮುತ್ಸದ್ದಿ. ಅವನಿಗೆ ಇಟಾಲಿಯನ್ ಭಾಷೆಯ ಜತೆಗೆ ಸಾಕಷ್ಟು ಇಂಗ್ಲಿಷ್ ಸಮರ್ಪಕವಾಗಿ ಆಡಲು ಬರುತ್ತಿದ್ದುದರಿಂದಲೂ, ಅವನು ಲೇಫ್ಪೋಂತಾನೆ ನಿವಾಸಿಯಾದುದರಿಂದಲೂ, ಅವನೇ ನಮ್ಮ ಮೊದಲ ದುಭಾಷಿಯಾದ. ಊಟದ ವೇಳೆ ಆತ ರಾಜಕೀಯ ಸಾಮಾಜಿಕ ಚರ್ಚೆ ಮಾಡುವ ಸೊಗಸು ಕರ್ಣಮಧುರವಾಗಿರುತ್ತಿತ್ತು. ಪೋರ್ಚುಗಾಲಿನಿಂದ ಬಂದ ಅಪೊಲನಾರಿಯೋ ಅಲ್ಲಿನ ಸರಕಾರಿ ಖಜಾನೆಯ ಒಬ್ಬ ತರುಣ ಅಧಿಕಾರಿ. ಮಾತು ಕಡಿಮೆಯಾದರೂ ಗಣಿತದಲ್ಲಿ ಗಟ್ಟಿಗ. ದಿನವೆಲ್ಲ ಮೋರೆ ಗಂಟಿಕ್ಕಿಕೊಂಡೇ ಇರುತ್ತಿದ್ದನೋ ಅಥವಾ ಶತ್ರು ಭಾರತೀಯನಾದ ನನ್ನನ್ನು ಕಂಡು ಹಾಗೆ ಮಾಡುತ್ತಿದ್ದನೋ ತಿಳಿಯದು. ಯುಗೋಸ್ಲಾವಿಯಾದಿಂದ ಬಂದ ಇಬ್ಬರಲ್ಲಿ ಒಬ್ಬ ಪತ್ರಿಕೋದ್ಯಮಿ – ಸರ್ಕಾರಿ ಸಾಪ್ತಾಹಿಕದ ಸಂಪಾದಕ ಮಿಲೊವಾನ್ ಬಾಲೆತಿಚ್, ಎರಡನೆಯವನು ದ್ರಕುತಿನ್ ಸೊಸ್ಕಿಚ್, ಅರ್ಥಶಾಸ್ತ್ರಜ್ಞ. ಇವರಿಬ್ಬರಲ್ಲಿ ಬಾಲೆತಿಚ್ ಅತ್ಯಂತ ಸ್ನೇಹಪರ, ಮಾತಾಳಿ, ಯಾರನ್ನು ಕಂಡರೂ ನಕ್ಕು ಮಾತನಾಡಿಸುವ. ಪತ್ರಿಕೋದ್ಯಮಿಯಾದುದರಿಂದ ಇಂಗ್ಲಿಷ್ ಅವನಿಗೆ ಅರ್ಥವಾಗುತ್ತಿತ್ತು. ಆದರೆ ಮಾತನಾಡಲು ಸರಿಯಾಗಿ ಬರುತ್ತಿರಲಿಲ್ಲ. ಇವನೂ ಲೇಫ್ಪೋಂತಾನೆಯ ಗಿರಾಕಿಯಾದ್ದರಿಂದ ಊಟದ ಹೊತ್ತು ನಮ್ಮ ಚರ್ಚಾಕೂಟದಲ್ಲಿ ಇವನಿಗೆ ನಾಯಕಪಟ್ಟ. ಇವನ ದನಿಯೂ ಗಂಭೀರ, ವಿಷಯವೂ ಅಷ್ಟೇ ಚರ್ಚಾಸ್ಪದ. ಸೋಮಾಲಿಯದ ಅಲಿಗೂ ಇವನಿಗೂ ನಡೆವ ವಾಗ್ವಾದವನ್ನು ಇಟಾಲಿಯನ್ ಭಾಷೆಯಲ್ಲಿ ಕೇಳುವುದೂ, ನೋಡುವುದೂ

ಸೊಗಸು. ಮಾರ್ಕ್ಸ್‌ವಾದದ ಮಹಾತ್ಮೆಯನ್ನು ತುಸುವೇ ಅಲ್ಲಗಳೆದರೂ ಈತ ಕೆಂಡವಾಗುತ್ತಿದ್ದ. ಆಗ ಅವನ ಹಾವಭಾವ, ವರ್ತನೆ, ದನಿ ಏರಿಕೆ ಇವು ದರ್ಶನೀಯವಾಗಿರುತ್ತಿದ್ದವು. ಕೆಲವು ಕಾಲಾನಂತರ ಅವನೂ, ನಾನೂ ಸಮಾನಾಂತರ ಚರ್ಚೆ ತೊಡಗಿದೆವು. ಅವನು ಇತಾಲಿಯನ್ ಭಾಷೆಯಲ್ಲಿ ಕೇಳಿದ ಪ್ರಶ್ನೆಗಳಿಗೆ ನನ್ನದು ಇಂಗ್ಲಿಷಿನಲ್ಲಿ ಉತ್ತರ. ಇಂಡಿಯಾದ ಬಗ್ಗೆ ಚರ್ಚೆಗಿದ್ದಷ್ಟು ಅಭಿಮಾನ ಅವನಿಗೆ ನನ್ನ ಮೇಲೂ. ಒಂದು ದಿನ 'ನನ್ನ ದೇಶ ನಿನಗೆ ಹೊಸ ಬಗೆಯ ಅಟೋಮೆಟಿಕ್ ರೈಫಲ್ ಶಸ್ತ್ರ ಕಳಿಸಿಕೊಟ್ಟಿದೆ' ಎಂದು ಗುಟ್ಟಾಗಿ ನನ್ನ ಹತ್ತಿರ ರಾಯಭಾರಿ ಕಚೇರಿಯ ಸುದ್ದಿ ತಲುಪಿಸಿದ. ಇತಾಲಿಯದ ಪ್ರವಾಸಕಾಲದಲ್ಲಿ ಎಲ್ಲ ರೊಡನೆಯೂ ವಾದ ವಿವಾದಮಾಡುವ ಬಾಲೆತಿಚ್ ಇರುವಲ್ಲಿ ಬೇಸರವಿಲ್ಲ ಎಂಬುದಾಗಿತ್ತು. ಅವನ ಉತ್ಸಾಹ ಅರ್ಥಶಾಸ್ತ್ರದಲ್ಲಿಲ್ಲ, ಕೇವಲ ರಾಜ ನೀತಿಯಲ್ಲಿ ಎಂದು ನಮಗರಿವಾಗಲು ಬಹಳ ದಿನ ಹಿಡಿಯಲಿಲ್ಲ ಆಮೇಲೆ ಬೇಕೆಂದೇ ನಾವು ಅವನನ್ನು ಮಾರ್ಕ್ಸ್‌ವಾದದ ಬಗ್ಗೆ ಕೆಣಕುವು ದಿತ್ತು. ಆದರೆ ಆತ ನಿಷ್ಠಾವಂತ. ಹಿಡಿದದ್ದೆ ಬಡಿಗೆ–ಕುರುಡನಿಗೆ. ನನ್ನ ಮಾನಸಿಕ ಮಟ್ಟದಲ್ಲಿ ವ್ಯವಹರಿಸಬಲ್ಲ ಕೆಲವೇ ಜನರಲ್ಲಿ ಈತನೂ ಒಬ್ಬ ನಾದುದರಿಂದ ಬಾಲೆತಿಚ್ ನನಗೆ ಆಪ್ತರಾದ ಕೆಲವೇ ಜನರಲ್ಲಿ ಒಬ್ಬ ನಾದನು. ಅವನ ಸ್ವದೇಶ ಮಿತ್ರ ಸೊಸ್ಕಿಚ್ ಮಾತ್ರ ಅವನಿಗೆ ವಿರುದ್ಧ ಮನೋವೃತ್ತಿಯವನು. ಯಾರೊಡನೆಯೂ ಮಾತನಾಡಲೊಲ್ಲ. ಫುಟ್ ಬಾಲ್ ಆಟದಲ್ಲಿ ಚೆಂಡನ್ನು ಮಾತ್ರ ಸರಿಯಾಗಿ ಒದೆಯುತ್ತಿದ್ದ. ಪ್ರಾಯಃ ಇತಾಲಿಯದಲ್ಲಿ ಚಳಿಗಾಲದಲ್ಲಿ ವಾಸಮಾಡಬೇಕಾದ ಶಿಕ್ಷೆಗೆ ಪ್ರತಿಶಿಕ್ಷೆಯೋ ಏನೋ ಎಂಬಂತೆ ಆ ಚೆಂಡು ಕ್ರುದ್ಧಪದಾಘಾತವನ್ನು ಅನುಭವಿಸ ಬೇಕಾಗಿತ್ತು. ದಕ್ಷಿಣ ಅಮೇರಿಕಾ ಖಂಡದ ಚಿಲಿ ದೇಶದಿಂದ ಒರ್ಲಾಂಡೊ ಬರ್ತ್‌ಲೊನೆ ಯಾರಾ ಎಂಬ ತಾಮ್ರದ ಕಂಪೆನಿ ಅಧಿಕಾರಿಯೂ, ದೊದೇರೊ ಎಂಬ ವಿಶ್ವವಿದ್ಯಾನಿಲಯದ ಅರ್ಥಶಾಸ್ತ್ರಜ್ಞನೂ ಬಂದಿದ್ದರು. ಇವರಲ್ಲಿ ಬರ್ತ್‌ಲೋನೆ ಮೂವತ್ತರ ತರುಣ, ಇತಾಲಿಯದೇಶದ ಮೊಮ್ಮಗ. ಅವನ ಅಜ್ಜಿ ಜನೋವಾದಲ್ಲಿ ಇನ್ನೂ ಬದುಕಿದ್ದಾಳೆಂದು ಬರ್ತ್‌ಲೋನೆ ಆಕೆಯನ್ನು ನೋಡಲು ಒಂದು ವಾರ ರಜಾ ಹಾಕಿ ಹೋಗಿದ್ದ. ಆತನಿಗೂ ಇಂಗ್ಲಿಷ್ ಸ್ವಲ್ಪ ಮಟ್ಟಿಗೆ ಬರುತ್ತಿದ್ದುದರಿಂದ

ಮೊದಲ ನೋಟಕ್ಕೆ ನನಗೂ ಅವನಿಗೂ ಸ್ನೇಹ ಚಿಗುರಿತು. ಸ್ಪಾನಿಷ್ ಇಟಾಲಿಯನ್, ಇಂಗ್ಲಿಷ್ ಮೂರನ್ನೂ ಆಡಬಲ್ಲ ಅವನ ವಾಕ್ಚಾತುರ್ಯ ಜತೆಗೇ ರೂಪಸಂಪತ್ತು ಮೋಹಕವಾಗಿದ್ದವು. ಜಗಳಕ್ಕೆ ಕಾಲು ಕೆರೆಯದ ಈ ಲ್ಯಾಟಿನ್ ಅಮೇರಿಕನ್ ತರುಣನಿಗೆ ಯಾರ ಮೇಲೂ ಮತ್ಸರವೆಂಬು ದಿಲ್ಲ. ಎಲ್ಲರ ಜತೆಗೂ ಎಲ್ಲ ಕಾಲಕ್ಕೂ ಬೆರೆಯಬೇಕು. ಸರಸಸಲ್ಲಾಪ ಕ್ಕಿಳಿಯಬೇಕು—ಅಂಥ ಮನೋಭಾವ. ಮಿಲಾನ್ ನಗರದ ಛೇಂಬರ್ ಆಫ್ ಕಾಮರ್ಸಿನವರು ಇಷ್ಟೇ ಗುಂಪಿಗೇರ್ಪಡಿಸಿದ ಸತ್ಕಾರ ಸಮಾರಂಭದಲ್ಲಿ ಧನ್ಯವಾದಾರ್ಪಣೆ ನನ್ನ ಪಾಲಿಗೆ ಬಂದಿತ್ತು. ನಾನು ಇಂಗ್ಲಿಷಿನಲ್ಲಿ ಮಾಡಿದ ವಂದನೆಯು, ತರ್ಜುಮೆಯಿಂದ ಮಿಲಾನ್ ನಗರದ ಭಾರೀ ಉದ್ದಿಮೆ ದಾರರಿಗೆ ಸಂತೋಷವಾದಂತೆ ತೋರಿತು. ಗುಂಪಿನ ಹಿಂದುಗಡೆ ಗೋಣು ಹಾಕಿ ನಿತ್ತ ಬರ್ತಲೋನೆ ನನ್ನ ವಂದನಾರ್ಪಣೆ ಮುಗಿದ ಕೂಡಲೇ ಸಮೀಪ ಬಂದು ಕೈಕುಲುಕಿ, "ಇಂಥ ಮಾತುಗಾರಿಕೆ ನಾನು ಕೇಳಿಲ್ಲ. ನಮ್ಮ ಇಡೀ ಗುಂಪಿಗೆ ನೀನು ವಾಗ್ಮಿ" ಎಂದು ಬಡಬಡಿಸಿದ. ಅವನ ಸಹದೇಶಿ ದೊದೇರೋ ಕೂಡ ಹರಕುಮುರುಕು ಇಂಗ್ಲಿಷ್ ಆಡಬಲ್ಲ, ಅದಕ್ಕಿಂತ ಹೆಚ್ಚು ಅರ್ಥವಿಸಿಕೊಳ್ಳಬಲ್ಲ. ಅವನಿಗೆ ಭಾರತೀಯ ದರ್ಶನದ ಮೇಲೆ ಅಭಿರುಚಿ. ನನ್ನ ಹತ್ತಿರ ಕೂತು ವೇದಾಂತದ ಬಗ್ಗೆ ಹೇಳು, ಹಿಂದೂ ಧರ್ಮದ ಅರ್ಥ ಏನು? ಹೀಗೆ ಬಿಡುವಾದಾಗಲೆಲ್ಲ ಕೇಳು ತ್ತಿದ್ದ. ಈ ವಿಷಯದಲ್ಲಿ ನಾನು ಅಲ್ಪಜ್ಞಾನಿ ಎಂಬುದನ್ನು ಪ್ರಾಸ್ತಾವಿಕ ವಾಗಿ ತಿಳಿಸಿ, ಆಮೇಲೆ ನನ್ನದೇ ಆದ ದರ್ಶನಮಾರ್ಗವನ್ನು ವಿವರಿ ಸಿದರೂ ಅದು ಅವನಿಗೆ ಸಂತೋಷ. ಕೊಲಂಬಿಯ ದೇಶದಿಂದ ಯಾರ ಮಿಲೋ ರೊಬ್ಲೇದೊ ಎಂಬ ಸಹಕಾರಿ ಅಧಿಕಾರಿಯ ಜತೆಗೆ ತೊರ್ರೆಸ್ ಸಾಂಕೆಜ್ ಎಂಬ ತರುಣ ನ್ಯಾಯಶಾಸ್ತ್ರಜ್ಞ ಇಷ್ಟೇ ಸೇರಿದ್ದ. ರೊಬ್ಲೆದೊ ಎಷ್ಟು ಸೌಮ್ಯ ಸ್ವಭಾವದ ಅಧಿಕಾರಿ ಮನೋವೃತ್ತಿಯ ಅಳುಕನೋ ಅಷ್ಟೇ ಉಗ್ರನರಸಿಂಹನಾಗಿದ್ದ ತೊರ್ರೆಸ್. ಕೊಲಂಬಿಯ ವಿಶ್ವವಿದ್ಯಾ ನಿಲಯದಲ್ಲಿ ನ್ಯಾಯಶಾಸ್ತ್ರವನ್ನು ಬೋಧಿಸುತ್ತಿದ್ದ ತೊರ್ರೆಸ್ ಎಂಥ ಪ್ರಾಧ್ಯಾಪಕರನ್ನೂ ವಾದದಲ್ಲಿ ಸೋಲಿಸಬಲ್ಲವನಾಗಿದ್ದ. ನಮ್ಮ ವರ್ಗದ ಉಪನ್ಯಾಸಗಳ ಪ್ರಶ್ನಾವೇಳೆಯಲ್ಲಿ ತೊರ್ರೆಸ್ ಬಾಯಿ ತೆರೆದನೆಂದರೆ ಪ್ರಶ್ನೆಯೇ ಒಂದು ಚಿಕ್ಕ ಉಪನ್ಯಾಸವಾಗಿಬಿಡುತ್ತಿತ್ತು. ಪ್ರತಿಯೊಂದು

ಪದದ ಮೇಲೂ ಅವನು ಹಾಕುವ ಸ್ವರಾಘಾತ, ವಾಕ್ಯದ ಕ್ರಮಪ್ರಾಪ್ತ ವೇಗ, ಓಘ, ಒಟ್ಟು ವಿವೇಚನೆಯ ಓಜೋಪೂರ್ಣ ಶೈಲಿಗೆ ಸಾಧಾರಣ ದರ್ಜೆಯ ಪ್ರಾಧ್ಯಾಪಕರು ತತ್ತರಿಸುತ್ತಿದ್ದರು. ಒಬ್ಬಿಬ್ಬರು ಉತ್ತರಿಸ ಲಾಗದೆ ಕೋಪದಿಂದ ಕನಲಿದ್ದೂ ಉಂಟು. ತೊರ್‍ರೇಸ್ ಕೂಡ ತನ್ನ ವಾದ ಸಮರ್ಥನೆಯ ಕಾಲದಲ್ಲಿ ಪರಶುರಾಮನಾಗಿಬಿಡುವ. ನಿಷ್ಠುರ ವಾದಿಯಾದ ಅವನನ್ನು ಯಾರೂ ಎದುರಿಗೆ ಕಟ್ಟಿಕೊಳ್ಳಬಾರದೆಂದು ಲ್ಯಾಟಿನ್ ಅಮೇರಿಕದ ತರುಣರ ತಂಡದಲ್ಲಿ ನಿಶ್ಚಿತವಾಗಿತ್ತು. ಅದಕ್ಕೆ ಪೋಷಕವಾಗುವ ಒಂದು ಸನ್ನಿವೇಶವನ್ನು ಆ ಗುಂಪು ಜನವರಿಯ ಹೊತ್ತಿಗೆ ಇದಿರಿಸಬೇಕಾಯಿತು. ಪಾಲೆರ್ಮೊದಲ್ಲಿ ಅಮೇರಿಕದ ಸುದ್ದಿ ಖಾತೆಯವರು ಯುರೋಪಿನಲ್ಲಿದ್ದ ಲ್ಯಾಟಿನ್ ಅಮೇರಿಕನ್ ವಿದ್ಯಾರ್ಥಿ ಗಳ ಒಂದು ಸಮ್ಮೇಳನವನ್ನು ಕೂಡಿಸಿದರು. ಇಸ್ಪೇಯಿಂದ ಒಬ್ಬ ವಿದ್ಯಾರ್ಥಿ ಹೋಗಬೇಕಾಗಿತ್ತು. ತೊರ್‍ರೇಸ್‌ಗೆ ಇದಿರಾಳಾಗಿ ಅರ್ಜೆಂಟೀನದ ಪ್ರೊ। ತಬೊರ್ದಾ ನಿಂತುಬಿಟ್ಟ. ಅದೇನು ವಾಗ್ಯುದ್ಧ ನಡೆಯಿತೋ, ಆ ಗೊಂದಲದಲ್ಲಿ ಅದೆಂತು ತೀರ್ಮಾನವಾಯಿತೋ, ಗುಂಪಿನ ಸಭೆ ಯಿಂದ ಹೊರಗೆ ಬರುವಾಗ ತೊರ್‍ರೆಸ್‌ನ ಫ್ರೆಂಚ್ ಗಡ್ಡ ಕುಣಿಯು ತ್ತಿತ್ತು, ತಬೋರ್ದನ ಮುಖ ಕಪ್ಪಾಗಿ ಹೆಪ್ಪುಗಟ್ಟಿತ್ತು. ಅಂತೂ ತೊರ್‍ರೆಸ್ ಗೆದ್ದು ಪಾಲೆರ್ಮೊಕ್ಕೆ ಹೋಗಿ ಸ್ವಧರ್ಮವಶಾತ್ ಅಮೆರಿಕನ್ ವಿದೇಶಾಂಗ ನೀತಿಯನ್ನು ಚೆನ್ನಾಗಿ ಒದ್ದು ಬಯ್ದು ಬಂದನಂತೆ. ಇದರಿಂದ ಪಾಠ ಕಲಿತೇ ಡೈರೆಕ್ಟರ್ ಜನ್ನಾರೋ ಆಮೇಲೆ ಇಂಥ ವಿಷಯಗಳಿಗೆ ಚುನಾವಣೆ ಗಿಂತ ನಾಮಕರಣವೇ ಮೇಲು ಎಂಬ ತೀರ್ಮಾನಕ್ಕೆ ಬಂದರಂತೆ. ಈ ಪರಿವರ್ತಿತ ಧೋರಣೆ ಸಕಾಲದಲ್ಲಿ ನನಗೆ ಅನುಕೂಲವಾಗಿ ತಿರುಗಿದ ವಿಚಾರ ಸಂದರ್ಭ ಬಂದಾಗ ಬರೆಯುತ್ತೇನೆ.

ತೊರ್‍ರೆಸನ ಪ್ರಸನ್ನರೂಪವನ್ನು ನೋಡುವ ಭಾಗ್ಯ ನನ್ನಂಥ ಕೆಲವು ಪುಣ್ಯವಂತರಿಗೆ ಮಾತ್ರ ಮೀಸಲು. ಇಸ್ಪೇ ಅಧಿಕಾರಿ ಮಂಡಳಿಗೂ, ಉಳಿದ ಲ್ಯಾಟಿನ್ ಅಮೆರಿಕನರಿಗೂ ಅವನೊಂದು ಸಿಂಹಸ್ವಪ್ನ. ಮಾತು, ಮನೋಭಾವ, ಧೋರಣೆ ಎಲ್ಲದರಲ್ಲೂ ಆತ ನನಗೆ ದಕ್ಷಿಣ ಅಮೆರಿಕದ ಪ್ರಾತಿನಿಧಿಕ ಪ್ರಜೆಯಾಗಿ ಕಂಡ. ವೈಚಾರಿಕ ಪರಿಣತಿಯಲ್ಲಿ ಆತ ಉಳಿದ ಸಂಗಡಿಗರಿಗಿಂತ ನೂರು ಮಾರು ಎತ್ತರದಲ್ಲಿದ್ದ. ಅದೇಕೋ ಅವನನ್ನು

ಕಂಡು ಮಾತು ಆಡುವಾಗಲೆಲ್ಲ ನನ್ನ ವಯಸ್ಸು ಹತ್ತು ವರ್ಷವೇ ಇಳಿ ದಂತೆ, ನಾನಿನ್ನೂ ಡಿಗ್ರಿ ತರಗತಿಯ ವಿದ್ಯಾರ್ಥಿಯಾಗಿರುವಂತೆ ಅನಿಸಿಕೆ ಮೂಡುತ್ತಿತ್ತು. ಸಾಂಕ್ರಾಮಿಕ ತಾರುಣ್ಯದ ಅಂಥ ರಸ ನಿಮಿಷಗಳಿಗೆ ನಾನು ತೊರ್ರೆಸ್‌ಗೆ ಚಿರಋಣಿ. ಅಲ್ಲದೆ ನಾವಿಬ್ಬರೂ ಸೌಮ್ಯವಾದ ಸಮಾಜವಾದಿಗಳೆಂದು ಮೊದಲೇ ತೀರ್ಮಾನಿಸಿಕೊಂಡಿದ್ದುದರಿಂದ ಈ ಸಮಾನ ರಾಜಕೀಯ ಆಸಕ್ತಿಯೂ ನಮ್ಮಿಬ್ಬರನ್ನು ಪರಸ್ಪರ ಆಕರ್ಷಿಸಲು ಕಾರಣವಿರಬೇಕು. ಹೆರ್ರೆರೊ ತೂದಾ ಸ್ಪೆಯಿನ್ ದೇಶದ ಸರ್ಕಾರಿ ಅಧಿ ಕಾರಿ, ಶ್ರದ್ಧಾಳು ಕೆಥೊಲಿಕ, ಪ್ರತಿ ಭಾನುವಾರ ಇಗರ್ಜಿಗೆ ಹೋಗಿ ಬರುತ್ತಿದ್ದ. ನಮ್ಮ ಮಹಡಿಯಲ್ಲೇ ವಾಸಿಸುತ್ತಿದ್ದ ಅವನ ಸಹವಾಸಿ ನಾಸ್ತಿಕ ಬಾಲೆತಿಚ್ ಅವನಿಗೆಷ್ಟು ಕೀಟಲೆ ಕೊಟ್ಟರೂ ಸಹಿಸಿಕೊಂಡ ತುದಾ ದಯಾಮಯ ಮಿತಭಾಷಿ, ಮಹಾನುಭಾವ.

ಲ್ಯಾಟಿನ್ ಅಮೇರಿಕದ ಎಲ್‌ಸಲ್ವದೋರ್, ಗ್ವಾಟೆಮಾಲ, ಮೆಕ್ಸಿಕೊ, ಡೊಮಿನಿಕನ್ ರಿಪಬ್ಲಿಕ್, ನಿಕರಗುವಾ, ಹೊಂಡುರಾಸ್ – ಈ ದೇಶಗಳಿಂದಲೂ ಒಬ್ಬಿಬ್ಬರು ಪ್ರತಿನಿಧಿಗಳಿದ್ದರು. ಅವರಲ್ಲಿ ಹೇಳಿ ಕೊಳ್ಳುವ ಯಾವ ಗುಣವೂ ಇಲ್ಲವಾದ್ದರಿಂದ ನನಗೀಗ ಅವರ ಹೆಸರೂ ಮರೆತುಹೋಗಿದೆ.

ಒಟ್ಟು ಲ್ಯಾಟಿನ್ ಅಮೆರಿಕದ ಈ ಗುಂಪಿನಲ್ಲಿ ಕಾಲೇಜಿನಿಂದ ಹೊರ ಬಂದ ತರುಣರೇ ತುಂಬಿಕೊಂಡಂತಿತ್ತು ಅಥವಾ ಅವರ ರಾಷ್ಟ್ರೀಯ ಮನೋಧರ್ಮವೇ ಹಾಗೋ? ಇಸ್ವೇಯನ್ನು ಅವರು ಬಹಳ ಲಘು ವಾಗಿ ಕಾಣುತ್ತಿದ್ದರೆಂಬುದು ನನ್ನ ಊಹೆ. ಅವರ ಚಂಚಲ ಸ್ವಭಾವ ವನ್ನೂ ಉಗ್ರತೆಯನ್ನೂ ಹತೋಟಿಯಲ್ಲಿಡುವುದು ಇಸ್ವೇ ವರಿಷ್ಠರಿಗೆ ತಲೆನೋವಾಗಿತ್ತೆಂದು ತೋರುವುದು. ಈ ಗುಂಪಿನಲ್ಲೆ ನಮ್ಮ ಗುಂಪಿನ ಒಬ್ಬಳೇ ಮಹಿಳೆ – ಸಿನ್ಯೊರಿನಾ ಎಲಿನಾ ಅರ್ಜೆಂಟಿನಾ ದೇಶದವಳು – ಇದ್ದಳು. ಅವಳು ಮಹಿಳೆ ಎಂದು ಜೀವಶಾಸ್ತ್ರ ಸಾರುತ್ತಿದ್ದರೂ ಅವಳ ಕೀರಲು ದನಿ ಕೂಗಿ ಹೇಳುತ್ತಿದ್ದರೂ, ಹೊರ ಆಕಾರದಲ್ಲಿ ಆಕೆ ಹುಡುಗ ರಂತೆಯೇ ಇದ್ದಳು. ಅಲ್ಲದೆ ಹುಡುಗರ ತುಂಟತನವೂ ಆಕೆಯಲ್ಲಿತ್ತು. ಪ್ರಾಧ್ಯಾಪಕರ ಪಾಠವನ್ನು ಆಕೆ ಐದು ನಿಮಿಷ ಕೇಳಿದರೆ ದೊಡ್ಡದು. ಎಷ್ಟೋ ದಿನ ಗೈರು ಹಾಜರು. ಆದರೆ ಆಕೆಯಲ್ಲಿ ಸಹಜವಾದ ಹಾಸ್ಯ

ಪ್ರವೃತ್ತಿ ಇದ್ದಂತೆ ಕಂಡಿತು. ಅಧ್ಯಯನದ ಅವಧಿ ಮುಗಿಯುವ ಮೊದಲು ತಾನೇ ಬರೆದ ಇಸ್ಸ್ವೇ ವ್ಯಂಗ್ಯಚಿತ್ರವನ್ನು ಒಂದು ಚಿಕ್ಕ ಧ್ವಜದಂತೆ ಮುದ್ರಿಸಿ ನಮಗೆ ಹಂಚಿದ್ದಳು. ಪುಸ್ತಕ ಭಾರದಿಂದ ಕುಗ್ಗಿದ ವಿದ್ಯಾರ್ಥಿನಿಯೊಬ್ಬಳ ಚಿತ್ರವನ್ನು ಬರೆದು ಪಕ್ಕದಲ್ಲಿ 'ಇಸ್ಸ್ವೇ' ಎಂದು ಅದರಲ್ಲಿ ಬರೆಯಲಾಗಿತ್ತು.

ಆಫ್ರಿಕದ ನನ್ನ ಸಹಪಾಠಿಗಳನ್ನು ಜ್ಞಾಪಿಸಿಕೊಂಡರೆ -ಮೊದಲಿಗೆ ತೋರುವಾತ ಇಸ್ಸ್ವೇಯನ್ನು ಅರ್ಧದಲ್ಲೇ ತೊರೆದು ಹೋದ ಒವಾಲಾ ಅವಿನೋ, ಆರಡಿ ಎತ್ತರದ ಈ ಕರಿಯಣ್ಣ ಕೀನ್ಯಾದ ಛೇಂಬರ್ ಆಫ್ ಕಾಮರ್ಸಿನ ಅಧ್ಯಕ್ಷ. ಅವನಿಗೆ ಪದವಿ ಇರಲಿಲ್ಲವಾದುದರಿಂದ ಅವನು ನಮ್ಮನ್ನು ಕಂಡಾಗ ನಾಚಿಕೆಮುಳ್ಳಿನಂತೆ ಮುದುರಿಕೊಳ್ಳುತ್ತಿದ್ದ. ಮನೆಯಲ್ಲಿದ್ದ ತನ್ನ ಕಾರಿಗೆ ಅಪಘಾತವಾದರೂ ಮನೆಮಂದಿ ಸುರಕ್ಷಿತವಾಗಿದ್ದಾರೆಂದು ಆನಂದದಿಂದ ಎಲ್ಲರ ಹತ್ತಿರವೂ ಬಿನ್ನವಿಸಿಕೊಂಡ. ಒಂದು ದಿನ ನನ್ನ ಹತ್ತಿರ ೨೦,೦೦೦ ಲೀರೆ ಬೇಕೆಂದು ಬೇಡಿದ. ಅಷ್ಟು ಹೊತ್ತಿಗೆ ಆತನ ಚಾಳಿಗಳ ಸುಳಿವು ಸ್ನೇಹಿತರಿಂದ ನನಗೆ ದೊರೆತದ್ದರಿಂದ ನಾನು ತಪ್ಪಿಸಿಕೊಂಡೆ. ಆಮೇಲೆ ನನ್ನನ್ನು ಕಂಡರೆ ದೂರ ಸರಿಯುತ್ತಿದ್ದ. ಫೆಬ್ರುವರಿಯಲ್ಲಿ ಕೀನ್ಯದಲ್ಲಿ ತಾನು ಚುನಾವಣೆಗೆ ನಿಲ್ಲಲೇಬೇಕೆಂದು ತನ್ನ ಪಕ್ಷದವರು ಒತ್ತಾಯಿಸುತ್ತಿರುವುದರಿಂದ ತಾನು ಮರಳಬೇಕೆಂದು ಹಠ ಹಿಡಿದು ಊರಿಗೆ ಹೊರಟುಬಿಟ್ಟ. ಕೀನ್ಯಾದ ಚುನಾವಣೆಯ ಫಲಿತಾಂಶದ ಪಟ್ಟಿಯಲ್ಲಿ ಒವಾಲಾನ ಹೆಸರಿರಲಿಲ್ಲ. ಪ್ರಾಯಶಃ ಆತನಿಗೆ ಇಸ್ಸ್ವೇಯ ಪಾಠಗಳ ಸೀಸದ ಗುಳಿಗೆಯನ್ನು ನುಂಗಲಾಗದ್ದರಿಂದ ಚುನಾವಣೆಯ ನೆಪ ಹೇಳಿ ಜಾರಿಕೊಂಡನೆಂದು ತೋರುತ್ತದೆ. ಈತನಿಗೆ ವಿರುದ್ಧವಾದ ಮನೋವೃತ್ತಿಯ ಆಫ್ರಿಕದ ಇನ್ನೊಸೆಂಟ್ ಒಬೇಬೆ ನನ್ನ ಪರಮ ಮಿತ್ರನಾಗಿದ್ದ. ಅಲ್ಲಿನ ರಾಯಭಾರ ಕಚೇರಿಯಲ್ಲಿ ಕೆಲಸ ಮಾಡುತ್ತಿದ್ದ ಒಬೇಬೆಗೆ ತಾನೊಬ್ಬ ವಿದೇಶಾಂಗ ಖಾತೆಯ ಪ್ರತಿನಿಧಿ ಎಂದು ಬಹಳ ಹೆಮ್ಮೆ ಇತ್ತು. ಸಂದರ್ಭ ದೊರೆತಾಗ ಆತನನ್ನು ಚಿವುಟಿ ಕಪ್ಪೆಯಂತೆ ಉಬ್ಬಿಸುವುದು ನನ್ನ ಉದ್ಯೋಗ. ಇದನ್ನು ತಿಳಿದ ನನ್ನ ಸ್ನೇಹಿತರು ಒಬೇಬೆ ನನ್ನನ್ನು ಸಂಧಿಸಿದಾಗ ನಮ್ಮನ್ನು ಸಮೀಪಿಸಿ ಹೊಸ ತಮಾಷೆಯ ಅನುಭವಕ್ಕೆ ಕಿವಿ ತೆರೆದಿಡುತ್ತಿದ್ದರು. ನಮ್ಮ ಸಂಸ್ಥೆಯ ಮುಖಮಂಟಪದಲ್ಲಿ ಪ್ರಪಂಚದ ಒಂದು ನಕಾಶೆ ತೂಗಹಾಕಿದ್ದರು. ಮಧ್ಯಾಹ್ನದ ವಿರಾ

ಮದ ವೇಳೆ ಒಂದು ದಿನ ಒಬೇಬೆ ಕೆಲವರನ್ನು ಆ ನಕಾಶೆಯ ಬಳಿ ಕರೆ
ದೊಯ್ದು ನೈಜೀರಿಯಾದ ರಾಜಧಾನಿ ಲೆಗೋಸ್‌ಗೆ ಬೆರಳು ತೋರಿಸಿ
'ಇದು ಪ್ರಪಂಚದ ಕೇಂದ್ರವಲ್ಲವೇ ?' ಎಂದು ಗಂಭೀರವಾಗಿ ಪ್ರಶ್ನಿಸಿದ
'ಹೌದು ಈ ನಕಾಶೆಯಂತಿರುವ ಚಪ್ಪಟೆ ಪ್ರಪಂಚಕ್ಕೆ ನಿನ್ನ ಲೇಗೊಸ್
ಕೇಂದ್ರ; ಅಲ್ಲದೆ ಪ್ರಪಂಚ ಗೋಲದಲ್ಲಿ ಎಲ್ಲಾ ರಾಜಧಾನಿಗಳೂ ಕೇಂದ್ರ
ಸ್ಥಾನದಲ್ಲಿಯೇ ಇರಬೇಕು' ಎಂದು ನಾನು ಹೇಳಿದಾಗ ಎಲ್ಲರೂ ನಕ್ಕರು.
ಒಬೇಬೆ ನನ್ನ ವಿಶೇಷ ಸ್ನೇಹಿತನಾದ್ದರಿಂದ ಈ ನಗೆಪಾಟಲು ತಡೆದು
ಕೊಂಡ. ಇನ್ನೊಮ್ಮೆ ದಕ್ಷಿಣ ಇತಾಲಿಯದ ಯಾವುದೋ ಕಾಡುಹಾದಿ
ಯಲ್ಲಿ ನಮ್ಮ ಗುಂಪಿನ ಬಸ್ಸನ್ನು ಪೊಲೀಸರು ತಡೆಹಿಡಿದರು. ಸಿಗರೇಟ್
ಹೊಗೆಯನ್ನು ಕುಳಿತ ಸಂಗಡಿಗರ ಮೇಲೆ ನಿಧಾನವಾಗಿ ಸುರಿಸುತ್ತಾ
ಬಸ್ಸಿನ ಮುಂಗಡೆಯಿಂದ ಗೌರವವಾಗಿ ನಡೆದುಕೊಂಡು ಹೋಗಿ ಹಿಂದಿನ
ಸೀಟಿನ ನಮ್ಮ ವರಿಷ್ಠ ಡಾ। ಫೆರ್ರೂಲಾ ಹತ್ತಿರ 'ನನ್ನ ಹತ್ತಿರ ಡಿಪ್ಲೊ
ಮ್ಯಾಟಿಕ್ ಪಾಸ್‌ಪೋರ್ಟ್ ಇದೆ, ಅದನ್ನು ತೋರಿಸಿದರೆ ಬಿಡಲಾರರೆ ?"
ಎಂದ ಒಬೇಬೆ. ಡಾ। ಫೆರ್ರೂಲಾ ಒಳಗಿಂದೊಳಗೇ ನಕ್ಕರು. ಒಬೇಬೆ
ಬೆಂಬತ್ತಿ ಬಂದಿದ್ದ ನಾನು 'ಹೌದು, ನಿನ್ನೊಬ್ಬನನ್ನು ಬಿಟ್ಟಾರು; ಆದ್ದರಿಂದ
ನೀನು ಮೆಲ್ಲನೆ ನಡೆದುಕೊಂಡು ರೋಮ್‌ಗೆ ಹೋಗಿ, ನಮ್ಮ ಅವಸ್ಥೆ
ಯನ್ನು ಇತಾಲಿಯನ್ ಅಧ್ಯಕ್ಷರಿಗೆ ತಿಳಿಸು, ಉಪಕಾರವಾಗುತ್ತದೆ'
ಎಂದು ದನಿಕೂಡಿಸಿದೆ. ಒಬೇಬೆ ಉಪಚಾರದ ನಗೆ ನಕ್ಕು ಮರಳಿ
ಆಸನ ಸ್ವೀಕಾರ ಮಾಡಿದ: ಇನ್ನೂ ಮೋಜಿನ ಪ್ರಸಂಗ ನಡೆದದ್ದು ನಮ್ಮ
ಅಧ್ಯಯನದ ಗುಂಪಿನಲ್ಲಿ. ನಮ್ಮ ಗುಂಪಿನ ಎಂಟು ಜನರಲ್ಲಿ ಒಬ್ಬರನ್ನು
ಅಧ್ಯಕ್ಷರನ್ನಾಗಿ ಮೊದಲ ಬಾರಿಗೆ ಆರಿಸಬೇಕಾಗಿತ್ತು. ಗುಂಪಿನ
ಸ್ನೇಹಿತರು ನನ್ನನ್ನು ಕೇಳಿಕೊಂಡರು. ಅಷ್ಟರಲ್ಲಿ ಅವರ ಮಾತನ್ನು
ಒಪ್ಪಿಕೊಂಡವನಂತೆ ನಟಿಸಿ ಥ್ಯಾಂಕ್ಯೂ ಜಂಟ್ಲ್‌ಮೇನ್ Thank you
for raising me to this chair ಎಂದು ಕುರ್ಚಿ ಹತ್ತಿ ಅಧ್ಯಕ್ಷ
ನಾಗಿಯೇಬಿಟ್ಟ. ಆ ವಿದೇಶೀಯ ಖಾತೆಗೆ ಬೇಕಾದ ಒಂದು ಲಕ್ಷಣ
ಇವನಲ್ಲಿ ಪೂರ್ತಿ ಮನೆಮಾಡಿದಂತೆ ತೋರಿತು – ತನಗೆ ಬೇಕಾದ ಮಾತನ್ನು
ಮಾತ್ರ ಕೇಳುವ ಹೆಗ್ಗುಣ ನೋಡಿ ಗುಂಪಿನವರಿಗೇ ಪರಮಾಶ್ಚರ್ಯವಾ
ಯಿತು: ನಾನೇ ಅವರನ್ನು ಸಮಾಧಾನಪಡಿಸಿ ಮುಂದಿನ ತಿಂಗಳು

ನೋಡೋಣ ಎಂದು ನೈಜೀರಿಯಾ – ಇಂಡಿಯಾ ಸಂಘರ್ಷವನ್ನು ನಿವಾರಿಸಬೇಕಾಯಿತು. ನಮ್ಮ ಶಿಕ್ಷಣ ಮುಗಿಯುತ್ತಲೇ ಒಬೇಬೆ ಬ್ರೂಸೆಲ್ಸ್‌ನಲ್ಲಿ ಎರಡನೇ ಕಾರ್ಯದರ್ಶಿಯಾಗಿ ನೇಮಕಗೊಂಡನೆಂದು ಕೇಳಿದೆ. ನೈಜೀರಿಯದ ಇತ್ತೀಚಿಗಿನ ಕ್ರಾಂತಿಯಲ್ಲಿ ಈತ ಯಾವ ಪಕ್ಷವೋ, ಪಕ್ಷಾಂತರವೋ, ನನಗರಿಯದು. ಅಂತೂ ನಾನು ಅವನನ್ನು ರಾಜದೂತನೆಂದು ನಟನೆಗಾಗಿ ಗೌರವಿಸುತ್ತಿದ್ದುದನ್ನು ಆತ ನಿಜವೆಂದೇ ನಂಬಿ ನನಗೆ ವಾಕ್ ಸ್ವಾತಂತ್ರ್ಯವನ್ನು ದಯಪಾಲಿಸಿದ್ದರಿಂದ ಒಬೇಬೆಗೆ ಅಂಕುಶ ಹಾಕಲು ಇವನೇ ತಕ್ಕವನೆಂದು ಸಹಪಾಠಿಗಳು ನನಗೆ ಪ್ರಶಸ್ತಿ ನೀಡಿದರು. ಸಿಯರಾ ಲಿಯೋನ್ ಸರ್ಕಾರದ ವ್ಯಾಪಾರಿ ವಿಭಾಗದಿಂದ ಬಂದ ಜೋಲಿಫ್ ಕಿಂಗ್ ಒಬೇಬೆಯ ನಿತ್ಯಸ್ನೇಹಿತ. ಒಬೇಬೆ ಕುಳ್ಳ, ಕಿಂಗ್ ಆಜಾನುಬಾಹು, ಒಳ್ಳೆಯ ಟೆನ್ನಿಸ್ ಆಟಗಾರ. ಇಷ್ಟೇ ಪಾಠ ಕ್ರಮವನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಪೂರ್ವಕವಾಗಿ ಬಯಸಿ ಬಂದವನು. ಕಾಂಗೋ ಗಣರಾಜ್ಯದಿಂದ ಬಂದಿದ್ದ ಫರ್ಡಿನೆಂಡ್ ಕಬೇಸ ಒಂದು ಎಳೆಗರು. ಆಕಾರದಲ್ಲಿ ದೀರ್ಘಕಾಯನಾದರೂ ಮನಸ್ಸು ಹಸುಳೆಯದು. ಏನು ಹೇಳಿದರೂ ನಂಬುವ. ಆದರೆ ಅವನಿಗೆ ಯಾರೂ ಹೆಚ್ಚು ಹೇಳುವಂತಿರಲಿಲ್ಲ. ಕಾರಣ, ಅವನಿಗೆ ಬರುತ್ತಿದ್ದ ಭಾಷೆ ಒಂದೇ – ಫ್ರೆಂಚ್. ಅದು ನಮ್ಮಲ್ಲಿ ಯಾರಿಗೂ ಬರುತ್ತಿರಲಿಲ್ಲ; ಅವನಿಗೆ ಇತಾಲಿಯನ್ ಕಲಿಯುವ ಇಚ್ಛೆ ಇರಲಿಲ್ಲ. ಇಂಗ್ಲಿಷ್ ಬರುತ್ತಿರಲಿಲ್ಲ. ಆದ್ದರಿಂದ ನಮ್ಮ ವರ್ಗದಲ್ಲಿ ಸೊಳ್ಳೆಗಳಿದ್ದರೆ ಮಾತ್ರ ಇವನಿಗೆ ಉದ್ಯೋಗ. ಆದರೂ ಪುರುಷಪ್ರಯತ್ನದಿಂದ ಈ ಆರು ತಿಂಗಳು ಹೇಗೋ ತಳ್ಳಿದ. ಈತನ ವಿಷಯ ಇನ್ನೊಂದು ಮಹತ್ವದ ಸಂಗತಿ ಏನೆಂದರೆ ಕಾಂಗೋ ಗಣರಾಜ್ಯದ ೧೯೬೦ರ ಖಾನೇಶುಮಾರಿಗೆ ದೊರೆಯಬಲ್ಲ ೧೪ ಪದವೀಧರ ಪ್ರಜೆಗಳಲ್ಲಿ ಕಬೇಸಾ ಒಬ್ಬನಂತೆ. ಇಂಥ ಅನರ್ಘ ರತ್ನವನ್ನು ಆರು ತಿಂಗಳ ಕಾಲ ಆರ್ಥಿಕ ಅಧ್ಯಯನ ಮಾಡಲು ಪರದೇಶಕ್ಕೆ ಕಳಿಸಿದ ಕಾಂಗೋ ರಾಜ್ಯ ಆರ್ಥಿಕ ಅಭಿವೃದ್ಧಿಗೆ ಕೊಡುವ ಮಹತ್ವ ಇದರಿಂದ ವ್ಯಕ್ತವಾಗುವುದಿಲ್ಲವೆ? ಇಷ್ಟೇಯಲ್ಲಿ ಮೂರು ತಿಂಗಳು ಕಾಲಹರಣ ಮಾಡುವಷ್ಟರಲ್ಲಿ ಈತನಿಗೆ ಬಡ್ತಿಯೂ ಸಿಕ್ಕಿತೆಂದು ಒಂದುದಿನ ಸಂತೋಷವಾಗಿ ನಮಗೆ ಹೇಳಿದ. ಕುರ್ಚಿ ಬಿಟ್ಟಕೂಡಲೇ ತೆರೆಜಾಗವನ್ನು ಆಕ್ರಮಿಸಲೆಳಸುವ

ಭಾರತದೇಶದ ಸ್ಥಿತಿ ಎಲ್ಲಿ? ತಿಂಗಳಿಗೊಮ್ಮೆ ಬಡ್ತಿ ಕೊಡುವ ಕಾಂಗೋ ಸರಕಾರ ಎಲ್ಲಿ? ಅಲ್ಲದೆ ಇನ್ನೊಂದು ವಿಷಯ ಮರೆಯುವಂತಿಲ್ಲ. ಎಲ್ಲ ಮಾತಿಗೂ ಸೀ ಸೀ (ಇತಾಲಿಯನ್ ಭಾಷೆಯ ಹೌದು, ಹೌದು) ಎನ್ನುವ ಕಬೇಸನ ಹೌದಪ್ಪತನ. ನಕಾಶೆಯಲ್ಲಿ ನೆಲಕಡಲೆ ಗಾತ್ರದ ಇನ್ನೊಂದು ಆಫ್ರಿಕನ ರಾಜ್ಯ, ಟೋಗೋ ಅಲ್ಲಿಂದ ಸರ್ಕಾರಿ ಪ್ರತಿನಿಧಿ ಸವಿದಿ ತೋವೆ (ಕನ್ನಡ ಮಾತಲ್ಲ ಇದು!) ಈತನಿಗೆ ಫ್ರೆಂಚ್ ಇತಾಲಿಯನ್ ಎರಡೂ ಚೆನ್ನಾಗಿ ಗೊತ್ತು. ಆಫ್ರಿಕದ ಗುಂಪಿನಲ್ಲಿ ಈತನ ಬೌದ್ಧಿಕ ಮಟ್ಟ ಶ್ರೇಷ್ಠ ವಾದುದು. ಫ್ರೆಂಚ್ ಭಾಷೆಯಲ್ಲಿ ಈತನ ಸಾಮರ್ಥ್ಯ ತೊರ್ರೇಸನ ಸ್ಪ್ಯಾನಿಷ್‌ನಷ್ಟೇ ಪ್ರಖರವಾದುದು.

ಅರಬ್ ಗಣರಾಜ್ಯದ ಎಲ್ ಶೇಖ್ ಪ್ರಾಧ್ಯಾಪಕರಿಗೆ ಬ್ರೇಕ್ ಹಾಕುವುದರಲ್ಲಿ ನಿಸ್ಸೀಮ. ಪಾಠದ ನಡುವೆ ಅವನು ಯಾವಾಗ ಬಲಗೈ ಎತ್ತಿ ಪ್ರಶ್ನೆಯ ಸೂಚನೆ ಕೊಡುತ್ತಾನೆಂದು ನಾವು ನಿರೀಕ್ಷಿಸಿಕೊಂಡೇ ಇರುತ್ತಿದ್ದೆವು. ಅವನಿಗೆ ಯಾವ ಉತ್ತರದಿಂದಲೂ ಸಮಾಧಾನವಾಗು ತ್ತಿರಲಿಲ್ಲ. ಈತ ನನ್ನ ಸಹಪಾಠಿ ಮಾತ್ರವಲ್ಲ ನನ್ನ ಕೊಠಡಿಯ ಪಕ್ಕದ ಸಹವಾಸಿ ಕೂಡ ಆಗಿದ್ದ. ಒಂದು ರಾತ್ರಿ ಇದ್ದಕ್ಕಿದ್ದಂತೆ ಶೇಕ್ ಕೋಣೆ ಯಲ್ಲಿ ಬವಳಿಬಂದು ಬಿದ್ದುಬಿಟ್ಟ. ವೈದ್ಯರನ್ನು ಕರೆತಂದು ಉಪಚಾರ ನಡೆದಮೇಲೆ ಔಷಧಕ್ಕಾಗಿ ವಿಯಾರೋಮದ ಫಾರ್ಮಸಿಗೆ ಏದುತ್ತಾ ಏದುತ್ತಾ ಓಡಿಹೋದವನು ನಾನೆಂಬುದನ್ನು ಕೇಳಿದ ಶೇಕ್‌ಗೆ ನನ ಮೇಲೆ ಭಾರೀ ಅಭಿಮಾನ. ವೈದ್ಯನಿಗೆ ಇಂಗ್ಲಿಷ್ ಬಾರದು. ಆ ರಾತ್ರಿ ಹಾಜರಿದ್ದ ನಮಗಾರಿಗೂ ಇತಾಲಿಯನ್ ಪೂರ್ತಿ ಬರುತ್ತಿರಲಿಲ್ಲ. ಹೀಗಾಗಿ ಕೇವಲ ಹಾವಭಾವಗಳಿಂದಲೇ ವೈದ್ಯನಿಗೆ ರೋಗದ ಪರಿಚಯವಾಗಬೇಕಾಗಿತ್ತು. ಏಳು ದಿನವೂ ನಿರಂತರ ಶೇಕ್ ರಾಜೋಪಚಾರವನ್ನು ಪಡೆದ. ಇಸ್ವೇಯ ವರಿಷ್ಠರು ಅವನನ್ನು ಸಂದರ್ಶಿಸಿದರು. ಹೋಟೆಲ್ ಸ್ಪ್ಲೆಂಡಿಡ್‌ನ ಲ್ಯಾಟಿನ್ ಅಮೇರಿಕನ್ ಸ್ನೇಹಿತರೂ ಬಂದರು. ಒಂದು ದಿನ ಬಾಲೆತಿಚ್ ಬಸ್ಸಿನಲ್ಲಿ ಹ್ಯಾಟನ್ನು ಸುತ್ತುವರಿಸಿ ೨೦,೦೦೦ ಲೀರೆ ಸಂಗ್ರಹಿಸಿದ– ಶೇಕ್‌ಗೆ ವಿದ್ಯಾರ್ಥಿವೃಂದದ ಉಡುಗೊರೆಯ ಸಲುವಾಗಿ. ಇದೂ ಒಂದು ಹೊಸ ಸಂಪ್ರದಾಯ ಎನಿಸಿತು. ಶೇಕನ ಕಾಯಿಲೆಗೆ ನಿಜವಾದ ಕಾರಣ ನಮಗೆ ಆ ಮೇಲೆ ತಿಳಿಯಿತು. ಬ್ರಹ್ಮಚಾರಿಯಾದ ಅವನಿಗೆ ಸಿಹಿ ಚಾಕ

ಲೇಟ್ ಮೇಲೆ ಅತೀವ ಪ್ರೇಮ. ಕಪಾಟಿನ ಹಿಂದುಗಡೆ ಖಾಲಿಯಾದ ಅನೇಕ ಡಬ್ಬಗಳ ಸಂಖ್ಯೆ ಮತ್ತು ಗಾತ್ರದ ಮೇಲಿಂದ ಈತನ ಹೊಟ್ಟೆ ಯಲ್ಲಿ ಹುಳ ಎದ್ದದ್ದೇ ಕಾಯಿಲೆ ಎಂದು ನಮಗೆ ವಿದಿತವಾಯಿತು. ಇರಾಕಿನ ನಸ್ಸಾರ್ ಹಸನ್‌ಗೆ ಇಸ್ವೇಯ ಪಾಠ ಪ್ರವಚನದಿಂದ ಯಾವ ಪ್ರಯೋಜನವೂ ಸಾಧ್ಯವಿರಲಿಲ್ಲ. ಅವನ ಇಂಗ್ಲಿಷ್ ಜ್ಞಾನ ದೇವರಿಗೇ ಪ್ರೀತಿ. ಅರಾಬಿಕ್ ಭಾಷಾಮಾಧ್ಯಮದಲ್ಲಿ ವಿಶ್ವವಿದ್ಯಾನಿಲಯದ ಶಿಕ್ಷಣ ಪಡೆದು ಬಂದ ಈ ಯುವಕನೂ ಕೋರ್ಸಿನ ಮಧ್ಯಕಾಲದಲ್ಲಿ ನಡೆದ ಇರಾಕಿ ಮಿಲಿಟರಿ ಕ್ರಾಂತಿಯ ನೆಪವೊಡ್ಡಿ ಮನೆಗೆ ಮರಳಿದ. ಪಶ್ಚಿಮ ಏಶಿಯಾದ ಎಲ್ಲ ವಿದ್ಯಾರ್ಥಿಗಳಲ್ಲಿ ಅತಿ ವಿಲಕ್ಷಣ ಪುರುಷ ಇರಾನಿ ನಿಂದ ಬಂದಿದ್ದ–ಯಾದ್ದೊಲ್ಲಾ ಕೊಶ್ಯರಾನ್. ಅವನಿಗೆ ಇಸ್ವೇ ಪಾಠ ಗಳಲ್ಲಿ ಸುತರಾಂ ಆಸಕ್ತಿ ಇರಲಿಲ್ಲ. ವರ್ಗದಲ್ಲಿ ಆತನ ಹಾಜರಿಯೇ ಅಪರೂಪ. ಅವನು ಮುಖ ತೋರಿಸಿದ ದಿನ ನಾವೆಲ್ಲಾ ಸೇರಿ ಅವನನ್ನು ಅಭಿನಂದಿಸುವುದಿತ್ತು. ಕೊಶ್ಯರಾನ್ ಚಿರವಿಲಾಸಿ, ನಮ್ಮ ವರ್ಗದ ಡಾನ್ ವನ್. ಹಗಲೆಲ್ಲ ನರ(ರಿ) ಬೇಟೆಯಾಡುತ್ತ ನಗರದಲ್ಲಿ ಅಲೆದಾಡುತ್ತಿದ್ದ. ಹೆಣ್ಣುಗಳ ಸ್ನೇಹ–ಪರಿಚಯ ಪಡೆಯುವುದರಲ್ಲಿ ನಿಷ್ಣಾತ. ಅಲ್ಲದೆ ಅವನನ್ನು ಯಾವ ವಿದೇಶ ವಿನಿಮಯ ಸಮಸ್ಯೆಯೂ ಬಾಧಿಸುವಂತೆ ಕಾಣಲಿಲ್ಲ. ಮೂರು ತಿಂಗಳಲ್ಲಿ ಪುಟ್ಟ ಫಿಯೆಟ್ ಕಾರೊಂದನ್ನು ಕೊಂಡ ಮೇಲೆ ಅವನ ಸುಳಿವೇ ಹತ್ತಲಾರದಾಯಿತು. ಆಗೊಮ್ಮೆ ಈಗೊಮ್ಮೆ ಹಾಜರಿ ಹಾಕಿ ತನ್ನ ಅಸ್ತಿತ್ವವನ್ನು ರುಜುವಾತುಗೊಳಿಸಲು ಆತ ಬಂದಾಗ ಆತನ ಅರ್ಥಶೂನ್ಯ ಯದ್ವಾ ತದ್ವಾ ಸವಾಲುಗಳಿಗೆ ಎಲ್ಲರೂ ನಗಬೇಕಾ ಗಿತ್ತು. ಮಾರ್ಚ್ ತಿಂಗಳಲ್ಲಿ ಸ್ವಿಝರ್ಲೆಂಡ್ ಪ್ರವಾಸ ಮಾಡುವ ಹುಚ್ಚು ಅವನಿಗೆ ತಗಲಿತು. ನನ್ನನ್ನು ತನ್ನ ಕಾರಿನ ಪಾಲುಗಾರ ಪ್ರವಾಸಿಯಾಗಿ ಕರೆದ. ಪುಕ್ಕಟೆ ಪ್ರವಾಸವಾದರೆ ಬರುತ್ತೇನೆಂದು ತಪ್ಪಿಸಿಕೊಂಡೆ. ಜಾಗತಿಕ ಆಹಾರ ಸಮ್ಮೇಳನಕ್ಕೆ ನನ್ನನ್ನು ಪ್ರತಿನಿಧಿಯಾಗಿ ಆರಿಸಿದ ಮೇಲೆ ಈತ ನನ್ನ ವಿಶೇಷಭೇಟಿ ತೆಗೆದುಕೊಂಡು 'ಇದನ್ನು ಹೇಗೆ ಗಿಟ್ಟಿಸಿಕೊಂಡಿ, ನನಗೂ ಸ್ವಲ್ಪ ಹೇಳಿಕೊಡು' ಎಂದು ವಕ್ರವಾಗಿ ಹೇಳಿದ. ನಾನೆಂದೆ 'ನಿನ್ನನ್ನೇ ಆರಿಸಿದ್ದರು, ಆದರೆ ನಿನ್ನ ಗಿಡ್ಡ ಮೀಸೆಯಿಂದ ತೊಂದರೆ ಆಯಿ ತಂತೆ. ಅದನ್ನಷ್ಟು ಬೋಳಿಸಿಬಿಡು. ಆಗ ನಿನ್ನನ್ನೂ ಯಾದಿಯಲ್ಲಿ ಸೇರಿ

ಸುತ್ತಾರೆ' ಎಂದು ಹೈಲು ಮಾಡಿದೆ. ಮುಖ ಕೆಂಪುಮಾಡಿ ಗುಟುರು ಹಾಕಿ ಆಚೆಗೆ ಹೋದ,

ಪಾಕಿಸ್ತಾನದ ಖಾಸಗೀ ಉದ್ದಿಮೆ ವಲಯದಿಂದ ಇಬ್ಬರು. ಬಂದಿದ್ದರು. ಇವರಲ್ಲಿ ಅಶ್ರಾಫ್ ವರೈಖ್ ಕರಾಚಿಯ ಮಿಲ್ಲೊಂದರ ಮೆನೇಜರ್, ಖೈರುಲ್ ಹುದಾ ೨೦ ವರ್ಷದ ಬಾಲಕ, ಡಾಕ್ಕಾದ ಕೋಕಿಲ್ ಬಟ್ಟೆ ಮಿಲ್ಲಿನ ಪಾಲುಗಾರ. ಪಾಕಿಸ್ತಾನದ ರಾಜಕೀಯ ನಿಲುಮೆಯನ್ನು ಸಮರ್ಥಿಸುವುದರಲ್ಲಿ ಇಬ್ಬರದೂ ಎತ್ತಿದ ಕೈ. ಹುದಾ ಸಾಕಷ್ಟು ಕಾಲ ಪರೀಕ್ಷೆಮಾಡಿ ನನ್ನನ್ನು ತನ್ನ ಸ್ಥಾನೀಯ ಪಾಲಕನಾಗಿ ಆರಿಸಿಕೊಂಡನೆಂದು ತೋರುತ್ತದೆ. ಇಸ್ವೇಯಲ್ಲಿದ್ದಷ್ಟು ಕಾಲವೂ ಅವನಿಗೆ ನನ್ನ ರಕ್ಷೆ ಬೇಕಾಗುತ್ತಿತ್ತು. ವರ್ಗದಲ್ಲಿ ನನ್ನ ಜತೆ ಕೂಡಬೇಕು, ನನ್ನ ಜೊತೆ ಅಡ್ಡಾಡಲು ಹೋಗಬೇಕು, ಸದಾ ನನ್ನ ಹತ್ತಿರ ಸುಳಿಯುತ್ತಿರಬೇಕು – ಅಂದರೆ ಅವನಿಗೆ ಸಮಾಧಾನ. ಸಿಂಹಳದ ಫಿಯಟ್ ಏಜನ್ಸಿಯ ಮೊಹಿದೀನ್ ನನಗೆ ಪರಮ ಆಪ್ತನಾದ ಸ್ನೇಹಿತ. ಸಿಂಹಳದ ಎರಡನೇ ಅಭ್ಯರ್ಥಿ ಉಮಗಲೀಯ ಯಾವ ಮಾತನ್ನು ನಂಬುವ ಹಸುವಿನಂಥ ಜೀವ.

ಉಳಿದವನು ಸುಬ್ಬಯ್ಯ, ನನ್ನ ಕೊಠಡಿಯ ಪಾಲುಗಾರ, ನಮ್ಮ ಸ್ವಿಸ್ ಯಾತ್ರೆಯ ಸಹಯೋಜಕ, ನಿಸ್ಪೃಹ ನಿರಹಂಕಾರಿ, ಅಣ್ಣಾಮಲೆ ವಿಶ್ವವಿದ್ಯಾನಿಲಯದ ಅರ್ಥಶಾಸ್ತ್ರ ಪ್ರಾಧ್ಯಾಪಕ, ಎನ್.ಸಿ.ಸಿ. ಮೇಜರ್ ಆದ್ದರಿಂದ ಶಿಸ್ತುಗಾರ, ಮಿತಾಹಾರಿ, ಮಿತಭಾಷಿ, ಅತ್ಯಂತ ಸ್ನೇಹಪರನಾದ ಈತನೂ ನಾನೂ ಸಮವಯಸ್ಕರು, ಸಮಾನ ವ್ಯಸನಿಗಳು. ನಾನೇ ಒಬ್ಬ ಬಡ ಭಾರತೀಯನೆಂದು ನೆನೆದುಕೊಂಡಿದ್ದರೆ ಸುಬ್ಬಯ್ಯ ನನಗಿಂತ ಕಡು ಬಡವ – ವಿದೇಶ ವಿನಿಮಯ ಸಂಗ್ರಹದಲ್ಲಿ ನನಗೆ £ ೭೫ ದಯಪಾಲಿಸಿದ ರಿಸರ್ವ್ ಬ್ಯಾಂಕಿನ ಮದ್ರಾಸ್ ಶಾಖೆ ಸುಬ್ಬಯ್ಯನಿಗೆ ಕೇವಲ £ ೧೫ ನೀಡಿತ್ತು. ನಾವಿಬ್ಬರೂ ಇತಾಲಿಯನ್ ವಿದೇಶಾಂಗ ಸಚಿವಾಲಯದ ಶಿಷ್ಯವೃತ್ತಿ ಪಡೆದವರಾದುದರಿಂದ ನಮ್ಮಲ್ಲಿ ಈ ಅಂತರ ಬರಬಾರದಿತ್ತು. ಸುಬ್ಬಯ್ಯನ ದೃಷ್ಟಿಯಲ್ಲಿ £ ೭೫ ತೂಕದ ಶ್ರೀಮಂತನಾದ ನಾನು ಬಂಡವಾಳಗಾರನಂತೆ ತೋರುತ್ತಿದ್ದೆ. ಎಷ್ಟೋ ಸಲ ಅವನಿಗೆ ಅಲ್ಪಾವಧಿ ಸಾಲವನ್ನೂ ನಾನು ನೀಡಿದ್ದುಂಟು. ಅಣ್ಣಾಮಲೆ ನಗರದ ಮನೆಮಂದಿಯ ಚಿಂತೆ ಸುಬ್ಬಯ್ಯನಿಗೆ ನನಗಿಂತಲೂ ತೀವ್ರವಾಗಿ ಬಾಧಿಸು

ತ್ರಿತ್ತು. ಬೇಸರವಾದಾಗ ನಮ್ಮ ನಮ್ಮ ಮಕ್ಕಳ ಆಟ ಪಾಠಗಳನ್ನು ಪರಸ್ಪರ ಮೆಲುಕುತ್ತ ಕಾಲ ಕಳೆಯುತ್ತಿದ್ದೆವು. ಲೇಪ್ಪೊಂತಾನೆಯ ಎರಡನೆಯ ಮಹಡಿಯ ವಿಶಾಲವಾದ ಕೊಠಡಿಯಲ್ಲಿ ದೊಡ್ಡದಾಗಿ ಹರಡಿದ ಎರಡು ಸುಪ್ಪತ್ತಿಗೆಯ ಮೇಲೆ ಚಳಿಗೆ ಮುದುರಿಕೊಂಡು ಮಾತಾಡುತ್ತನಿದ್ದೆ ಹೋಗುವುದು, ಎದ್ದ ಕೂಡಲೇ ಮದ್ರಾಸಿನಿಂದ ತಂದ ಡಿಕ್ಕಾಕ್ಷನ್ ಕಾಫಿ ಕುಡಿಸುವುದು ಸುಬ್ಬಯ್ಯನ ಕೆಲಸ. ಬೆಳಗಿನ ಕಾಫಿಗೆ ಪುಡಿ, ಸಕ್ಕರೆ, ಹಾಲು ನನ್ನದು, ಸೇವೆ ಸುಬ್ಬಯ್ಯನ ಲೆಕ್ಕಕ್ಕೆ. ಸ್ವಿಝ್ ರ್ಲೇಂಡಿನ ಎಂಟು ದಿನಗಳ ಪ್ರವಾಸವನ್ನು ನಾವು ಜತೆಯಲ್ಲೇ ಮಾಡಿದೆವು. ಲೇಪ್ಪೊಂತಾನೆ ಭೋಜನ ಶಾಲೆಯಲ್ಲಿ ನಮಗಿಬ್ಬರಿಗೆ ಗೋಡೆಯ ಬಳಿ ಒಂದು ಚಿಕ್ಕ ಉರುಟು ಮೇಜು ನಿಯಮಿಸಿದ್ದರು. ಅಲ್ಲಿ ಸುಬ್ಬಯ್ಯನ ಚಟ್ನಿಪುಡಿಯ ಬಗೆ ಬಗೆಯ ಅವತಾರಗಳನ್ನು ನಾನು ಸವಿ ನೋಡಿದೆ. ಉಪ್ಪಿನಕಾಯಿ, ಚಟ್ನಿಪುಡಿ ಇಲ್ಲದೆ ಸ್ಪಗೆಟ್ಟಿ ನಮ್ಮ ಗಂಟಲು ಸೇರುವುದು ಕಷ್ಟವಾಗಿತ್ತು. ಆದರೆ ಸುಬ್ಬಯ್ಯ ತಂದ ಈ ಸಹಾಯಕ ಸಾಮಗ್ರಿ ಒಂದು ವರ್ಷಕ್ಕೆ ಸಾಲುವಷ್ಟಿತ್ತು. ನಮ್ಮ ಆಹಾರಕ್ರಮದಲ್ಲಿ ಒಂದೇ ಭೇದ: ಸುಬ್ಬಯ್ಯನಿಗೆ ಮಿತವಾಗಿ ಆದರೂ ಬೀರು ಕುಡಿಯುವ ಆಸೆ; ನನಗೋ ಅಕ್ವಾದಿನಾಪೊಲಿ—ಇದು ನೀರಿಗೆ ನಾನು ಕೊಟ್ಟ ಉದ್ದನ್ನ ನಾಮಧೇಯ: ಕುಡಿಯುಲಿಕ್ಕೇನು?—ಅಕ್ವಾದಿನಾಪೊಲಿ ಎಂದಾಗ ನಮ್ಮ ವೇಟರ್ ಜೋಸೆಪ್ಪೆಯ ಮುಖ ಇಳಿದು ಹೋಗುತ್ತಿತ್ತು.

ವರ್ಣರಂಜಿತವಾದ ನಮ್ಮ ಅಂತಾರಾಷ್ಟ್ರೀಯ ಅಧ್ಯಯನ ತಂಡ ವನ್ನು ಪ್ರಥಮ ಸಲ ಇಸ್ವೇಯ ಪೌಲಮಾನ್ಯ(ದೊಡ್ಡ ಭವನ)ದಲ್ಲಿ ಕಂಡಾಗ ಆಕ್ಸ್‌ಫರ್ಡ್ ಎಟ್ಲಾಸೇ ಸಾಕಾರ ರೂಪದಿಂದ ಸಮಾವೇಶ ಗೊಂಡಂತೆ ಅನಿಸಿತ್ತು. ಪುಟ್ಟ ವಿಶ್ವಸಂಸ್ಥೆ ಎಂದು ನಮಗೆ ನಾಪೊಲಿಯ ನಾಗರಿಕರು ನಾಮಕರಣ ಮಾಡಿದ್ದು ತಪ್ಪಲ್ಲ.

### ೦ ೦ ಇಸ್ವೆ ಆಡಳಿತವ್ಯವಸ್ಥೆ

ಇಸ್ವೇಯ ಉದ್ದೇಶ ಮತ್ತು ಸ್ಥೂಲರೂಪಗಳನ್ನು ಹಿಂದೆ ಸೂಚಿಸಿ ದ್ದೇನೆ. ಇಸ್ವೇಯ ಅಂತರಿಕ ಆಡಳಿತವನ್ನು ನೋಡಿಕೊಳ್ಳಲು ಕೆಲವೇ

ಜನರನ್ನು ನೇಮಿಸಿದ್ದರು. ಎನ್ರಿಕೋ ಡಿ ಜೆನ್ನಾರೋ ಅವರು ಸಂಸ್ಥೆಯ ಡೈರೆಕ್ಟರ್, ಡಾ| ಫೆರ್ರೂಲಾ ಎಂಬ ಇಪ್ಸೋವದ ಹಳೆಯ ವಿದ್ಯಾರ್ಥಿ. ಉಪ-ಡೈರೆಕ್ಟರ್. ಅವರ ಕೈಕೆಳಗೆ ಡಾ| ಪೆರೋಡಿ, ಇಂಜಿನಿಯರ್ ಬೊನೆಯೋ ಮತ್ತು ಡಾ| ಮಲ್ಕಿಯೊನ್ನಾ ಈ ಮೂವರು ಸಹಾಯಕ ಉಪಾಧ್ಯಾಯರು – ತರ್ಜುಮೆಕಾರರು. ಆಡಳಿತ ಕಚೇರಿಯ ಡಾ| ಗ್ರೀದಾ ಮತ್ತು ಅವರ ಕಾರ್ಯದರ್ಶಿನಿ, ಟೈಪಿಸ್ಟ್. ಮಾನ್ಯ ಡಿ ಜನ್ನಾರೊ ತೊರೆನೊ ನಗರದ ನಿವಾಸಿ, ಹಿಂದೆ ಎಸ್ಸೊ ಕಂಪೆನಿಯಲ್ಲಿ ಕೆಲಸಕ್ಕಿದ್ದರು. ಯುದ್ಧ ಕಾಲದಲ್ಲಿ ಭಾರತದಲ್ಲೂ ಇದ್ದರುಂತೆ. ಸುಮಾರು ೫೫–೬೦ ವಯಸ್ಸಿನ ಡಿ ಜನ್ನಾರೋ ಚೆನ್ನಾಗಿ ಇಂಗ್ಲಿಷ್ ಮಾತಾಡಬಲ್ಲವರಾಗಿದ್ದರು. ಆಡಳಿತ ದಲ್ಲಿ ಪಳಗಿದವರಾಗಿ ಇಸ್ಸೆಯ ಗುಂಪು ಚೆದರದಂತೆ ಜಾಗ್ರತೆ ವಹಿಸು ವುದು ಇವರ ಹೊಣೆಯಾಗಿತ್ತು. ಡಾ| ಫೆರ್ರೂಲಾ ೩೫ರ ತರುಣ. ಡಿ ಜನ್ನಾರೋ ಉತ್ಸವ ಮೂರ್ತಿಯಂತೆ ತೊರಿನೊ – ನೇಪಲ್ಸ್ ನಡುವೆ ಸಂಚಾರ ಮಾಡುವರು. ಫೆರ್ರೂಲಾ ನಮ್ಮ ನಡುವೆ ಇದ್ದು ಯಾವಾಗಲೂ, ನಮ್ಮ ದೈನಂದಿನ ಮೇಲ್ವಿಚಾರಣೆ ನಡೆಸಬೇಕು. ಇತಾಲಿಯನ್ ಅಥವಾ ಫ್ರೆಂಚ್ ಉಪನ್ಯಾಸಕರನ್ನು ಇಂಗ್ಲಿಷಿಗೂ, ಇಂಗ್ಲಿಷ್ ಉಪನ್ಯಾಸಕರನ್ನು ಇತಾಲಿಯನ್ ಭಾಷೆಗೂ ಅನುವಾದ ಮಾಡುವ ಕೆಲಸವನ್ನೂ (ಬೊನೆ ಯೋ ಜತೆ) ಡಾ| ಫೆರ್ರೂಲಾ ಮಾಡಬೇಕಾಗಿತ್ತು. ಇಂಜಿನಿಯರ್ ಬೊನೆಯೋ ಪೂರ್ತಿ ಅನುವಾದಕರೆಂದೇ ನೇಮಕಗೊಂಡಿದ್ದರು. ಅವರ ಶ್ರೀಮತಿ ಅನ್ನಾಗೆ ಇಸ್ಸೇ ಕಚೇರಿಯಲ್ಲೇ ಕೆಲಸ. ಡಾ| ಪೆರೋಡಿ ಆರರಲ್ಲಿ ಮೂರು ತಿಂಗಳು ಕಾಯಿಲೆ ರಜೆಯಲ್ಲೇ ಇದ್ದುದರಿಂದ ಅವನ ಬದಲಿಗೆ ಯಾರು ಬರದಿದ್ದುದು ನಮಗೆ ಆಚ್ಚರಿಯಾಗಿತ್ತು. ಪ್ರತಿಯೊಬ್ಬ ಅಧಿಕಾರಿಯೂ ನಮ್ಮನ್ನು ಅತ್ಯಂತ ಗೌರವದಿಂದಲೂ, ಸ್ನೇಹ ಮತ್ತು ಅಭಿಮಾನದಿಂದಲೂ ನಡೆಸಿಕೊಂಡರು. ಅವರಿಗೆ ನಾವು ಕೊಡುತ್ತಿದ್ದ ದಿನಂಪ್ರತಿ ಕೀಟಲೆ ಅಷ್ಟಿಷ್ಟಲ್ಲ. ಮುಖ್ಯವಾಗಿ ಲ್ಯಾಟಿನ್ ಅಮೇರಿಕದ ತರುಣರ ಗುಂಪು ಮೊದಮೊದಲು ಆಂತರಿಕವಾಗಿಯೂ, ಆಮೇಲೆ ಬಹಿರಂಗವಾಗಿಯೂ ಇಸ್ಸೇಯ ಮೇಲೆ ಶಿಸ್ತುಭಂಗ ಚಳವಳಿ ಹೂಡಿ ದಾಗಲೂ ಅಧಿಕಾರಿ ವರ್ಗವು ಅವರ ಅಸದ್ವರ್ತನೆಯನ್ನು ನುಂಗಿ ಕೊಂಡಿತು. ಭಿನ್ನ ಸ್ವಭಾವದ ಅಂತಾರಾಷ್ಟ್ರೀಯ ಗುಂಪನ್ನು ನಡೆಸುವುದು

ಕಷ್ಟ ಸಾಧ್ಯವಾದ ಕೆಲಸವಾದರೂ ಇಸ್ವೇಯ ತರುಣ ಅಧಿಕಾರಿಗಳು ತಮ್ಮ ಕರ್ತವ್ಯ ನಿರ್ವಹಣೆಯಲ್ಲಿ ಸಾಕಷ್ಟು ಯಶಸ್ಸು ಸಂಪಾದಿಸಿದರೆಂದೇ ಹೇಳಬೇಕು. ಡಿ ಜನ್ನಾರೋ ತಿಂಗಳಿಗೆರಡು ಸಲ, ಅಥವಾ ವಿಶೇಷ ಸಂದರ್ಭಗಳಲ್ಲಿ ಇಸ್ವೇಗೆ ಭೇಟಿ ಕೊಡುತ್ತಿದ್ದರು. ಅವರು ಬಂದಾಗ ಮೂರು ನಾಲ್ಕು ವಿದ್ಯಾರ್ಥಿಗಳನ್ನು ಪ್ಯಾಲೆಸ್ ಅಂಬಾಸಡರ್ಸ್ ಹೋಟೆ ಲಿಗೆ ರಾತ್ರಿ ಊಟಕ್ಕೆ ಕರೆಯುವುದಿತ್ತು. ಹೋಟೆಲಿನ ೨೦ನೇ ಮಹಡಿ ಯಲ್ಲಿರುವ ಭೋಜನಶಾಲೆಯಿಂದ ನೇಪಲ್ಸಿನ ಇರುಳ ನೋಟ ಅತ್ಯಂತ ಮನೋಹರವಾಗಿರುತ್ತಿತ್ತು. ಮಾನವಿಕ ವಾತಾವರಣದಲ್ಲಿ ನಮ್ಮ ಕಷ್ಟ ಸುಖದ ನೇರವಾದ ಅರಿವು ಮಾಡಿಕೊಳ್ಳಲು ಊಟ ಒಂದು ನೆಪ. ಸಂಸ್ಥೆಯ ಪ್ರಪ್ರಥಮ ವರ್ಷವಾದುದರಿಂದ ನಮ್ಮಿಂದ ಅವರು ಹಲವು ಪಾಠ ಕಲಿತಿರಬಹುದೆಂದು ನನಗನಿಸುತ್ತಿದೆ. ಸಂಸ್ಥೆಯ ಕೊರತೆಗಳನ್ನು ಬಿಚ್ಚು ಮನಸ್ಸಿನಿಂದ ಡೈರೆಕ್ಟರ್ ಹತ್ತಿರ ಚರ್ಚಿಸಲು ಸಾಧ್ಯವಿತ್ತು. ಒಮ್ಮೆ ನಾನು ಲೈಬ್ರರಿಯಲ್ಲಿ ಹೆಚ್ಚು ಇಂಗ್ಲಿಷ್ ಗ್ರಂಥಗಳೂ, ಪತ್ರಿಕೆಗಳೂ ಅಗತ್ಯವೆಂದು ತಿಳಿಸಿದೆ. ಮುಂದಿನ ವಾರವೇ ಈ ಸೂಚನೆ ಕಾರ್ಯಗತ ವಾಯಿತು.

### ೦ ೦ ಪಾಠಪ್ರವಚನ

ಇಸ್ವೇಯ ಪಾಠಕ್ರಮ ಸ್ವಾರಸ್ಯವಾಗಿರುತ್ತಿತ್ತು. ಯುರೋಪಿನ, ಮುಖ್ಯವಾಗಿ ಇಟಲಿಯ – ವಿಭಿನ್ನ ವಿಶ್ವವಿದ್ಯಾನಿಲಯ ಮತ್ತು ಆರ್ಥಿಕ ಸಂಸ್ಥೆಗಳ ಪ್ರಯೋಗ ಪರಿಣತರೇ ನಮ್ಮ ಉಪಾಧ್ಯಾಯರಾಗಿದ್ದರೆಂದು ಹಿಂದೆ ಸೂಚಿಸಿದ್ದೇನೆ. ಹೆಚ್ಚಿನವರು ಇತಾಲಿಯನ್ ಭಾಷೆಯ ಮೂಲಕವೇ ಉಪನ್ಯಾಸ ಮಾಡುತ್ತಿದ್ದರೂ ಹತ್ತು ಮಿನಿಟಿಗೊಮ್ಮೆ ಅವರ ಉಪ ನ್ಯಾಸದ ವಿವರವನ್ನೊ, ಸಾರವನ್ನೊ, ಸಾರಾಂಶವನ್ನೋ ಬೋನೆಯೋ ಅಥವಾ ಫೆರ್ರೊಲಾ ಅವರಲ್ಲಿ ಒಬ್ಬರು ಇಂಗ್ಲಿಷಿಗೆ ತರ್ಜುಮೆ ಮಾಡು ವರು. ಇಂಗ್ಲಿಷ್ ಉಪನ್ಯಾಸವಾದರೆ ಲ್ಯಾಟಿನ್ ಗುಂಪಿಗೆ ಇತಾಲಿಯನ್ ಅನುವಾದ ಕೊಡಬೇಕು. ಹೀಗಾಗಿ ಉಪನ್ಯಾಸ ಕಾಲ[illegible] ಇಬ್ಬರು ನಮ್ಮ ಮುಂದೆ ಉಪಸ್ಥಿತರು. ಫ್ರೆಂಚ್ ಉಪನ್ಯಾಸಕಾ[illegible]ು ಬಂದರೆ

ನಮ್ಮ ತರಗತಿಯನ್ನು ಎರಡು ಪಾಲಾಗಿ ವಿಂಗಡಿಸಿ ಒಂದೊಂದು ಗುಂಪಿನ ಮುಂದೆ ಒಬೊಬ್ಬ ಅನುವಾದಕ ನಿಂತಿದ್ದು ಉಪನ್ಯಾಸಕನ ಫ್ರೆಂಚನ್ನು ಇತಾಲಿಯನ್‌ಗೂ, ಇಂಗ್ಲಿಷಿಗೂ ಏಕಕಾಲದಲ್ಲಿ ಭಾಷಾಂತರಿಸಬೇಕು. ಒಂದು ಗುಂಪಿಗೆ ನೀಡುವ ಭಾಷಾಂತರ ಇನ್ನೊಂದು ಗುಂಪಿಗೆ ತೊಡಕಾಗದಂತೆ ಪಿಸು ಮಾತನ್ನೂ, ಕಿವಿಮಾತನ್ನೂ ಬಳಸಿದ್ದೂ ಉಂಟು.

ಸಾಮಾನ್ಯವಾಗಿ ದಿನ ಒಂದಕ್ಕೆ ೬೦ ಮಿನಿಟುಗಳ ಎರಡೋ, ಮೂರೋ ಉಪನ್ಯಾಸಗಳು. ವಾರಕ್ಕೆರಡು ಬಾರಿ ಮೂರು ತಾಸಿನ ಚರ್ಚಾಗೋಷ್ಠಿ. ಚರ್ಚಾಗೋಷ್ಠಿಗೆ ಎರಡು ಅಧಿವೇಶನ. ಒಂದನೆಯದು. ಅಭ್ಯಾಸಗೋಷ್ಠಿ: ಏಳೆಂಟು ಜನರ ಚಿಕ್ಕ ಗುಂಪಿನಲ್ಲಿ ವಿಷಯದ ಚರ್ಚೆ ನಡೆಯುತ್ತದೆ. ಆ ಮೇಲೆ ಗುಂಪಿನ ತೀರ್ಮಾನವನ್ನು ಒಟ್ಟು ವರ್ಗಕ್ಕೆ ಪ್ರತಿ ಅಭ್ಯಾಸಗೋಷ್ಠಿಯವರೂ ವರದಿ ಮಾಡುವುದು ಒಂದು ರೀತಿಯಾದರೆ ಕೆಲವೊಮ್ಮೆ ಉಪನ್ಯಾಸಕಾರರು ಎಲ್ಲರನ್ನೂ ಕೂಡಿಸಿಕೊಂಡು ವಿದ್ಯಾರ್ಥಿಗಳ ಪ್ರಶ್ನೆಗಳಿಗೆ ಉತ್ತರ ಕೊಡುವುದು ಎರಡನೆಯ ರೀತಿ. ಉಪನ್ಯಾಸಗಳಷ್ಟೆ, ಕೆಲವೊಮ್ಮೆ ಅವಕ್ಕೂ ಉನ್ನತ ಮಟ್ಟದಲ್ಲಿ ನಡೆಯುತ್ತಿದ್ದ ಈ ಚರ್ಚಾಗೋಷ್ಠಿ, ಇಸ್ವೇ ಪಾಠಕ್ರಮದ ಸಾರವತ್ತಾದ ಭಾಗವೆಂದು ನನಗನಿಸಿತು. ಇತಾಲಿಯನ್ ವಿಶ್ವವಿದ್ಯಾನಿಲಯದ ಪಾಠಕ್ರಮಕ್ಕೆ ಅಮೇರಿಕದ ಸೆಮಿನಾರ್ ಪದ್ಧತಿಯನ್ನು ಕಸಿಮಾಡಿ ಇಸ್ವೇ ತನ್ನದೇ ಸ್ವತಂತ್ರ ಮಾರ್ಗವನ್ನು ರಚಿಸಿಕೊಂಡಿತ್ತು.

ಇಸ್ವೇ ವರ್ಗಗಳು ನಡೆಯುತ್ತಿದ್ದ ಭವನವು ಮುಸಲಿನಿ ಕಟ್ಟಿಸಿದ ಸಾಗರೋತ್ತರ ಪ್ರದರ್ಶನದ ಕಾರ್ಯಾಲಯವಾಗಿತ್ತಂತೆ. ಆ ಭಾಗಕ್ಕೆ ನಾಪೊಲಿಯ ಜನ 'ಮೋಸ್ರಾ' ಎಂದು ಕರೆಯುತ್ತಾರೆ. ಊರಿನ ಹೊರವಲಯದ ಒಂದು ಉಪವನದ ನಡುವೆ ಮೈಸೂರಿನ ವೃಂದಾವನದಲ್ಲಿರುವಂಥ ಕಾರಂಜಿಗಳ ಸಾಲನ್ನು ದಾಟಿದರೆ ನಾಲ್ಕಾರು ದೊಡ್ಡ ಕಟ್ಟಡಗಳು. ಅವುಗಳಲ್ಲಿ ಕೊನೆಯದು ಅಮೃತ ಶಿಲೆಯನ್ನು ಹೊದಿಸಿದ ಭವ್ಯವಾದ ಇಸ್ವೇ ಕಟ್ಟಡ. ಪ್ರವೇಶ ಮಾಡಿದ ಕೂಡಲೇ ಒಂದು ದೊಡ್ಡ ಹಾಲು, ಅದರ ಮುಂಭಾಗದಲ್ಲಿ ಲೈಬ್ರರಿ ಮತ್ತು ಪಕ್ಕದಲ್ಲಿ ಅಭ್ಯಾಸಗೋಷ್ಠಿಯ ೫ ಕೋಣೆಗಳು. ಮಹಡಿಯಲ್ಲಿ ಪ್ರತಿ ಅಧಿಕಾರಿ

ಗೂ ಒಂದೊಂದು ಪುಟ್ಟ ಕೊಠಡಿ, ಇಸ್ವೇ ಕಚೇರಿ, ಜೌಲಮಾನ್ಯ–(ನಮ್ಮ ಕ್ಲಾಸ್ ರೂಮ್) ಎಲ್ಲೆಲ್ಲೂ ಗೋಡೆಯಲ್ಲಿ ಹೊರನೋಟಕ್ಕೆ ವಿಶಾಲವಾದ ಗಾಜಿನ ಕಿಟಕಿಗಳು. ಚಳಿಗಾಲವಾದುದರಿಂದ ಕಿಟಕಿ, ಬಾಗಿಲು ಯಾವುದನ್ನು ತೆರೆದಿಡುವ ಪ್ರಮೇಯವಿರಲಿಲ್ಲ. ಕ್ಲಾಸ್ ಬೇಸರ ಬಂದಾಗ ಎರಡು ಕ್ಷಣ ಹೊರಗೆ ಕಣ್ಣು ಹಾಯಿಸಿದರೆ ಎಲೆ ಉದುರಿಸಿಕೊಂಡ ವೃಕ್ಷರಾಶಿಯ ಟೊಂಗೆ ರೆಂಬೆಗಳ ದೈವ ನಿರ್ಮಿತ ಕಲಾಕೃತಿ – ನೈಸರ್ಗಿಕವಾದರೂ ಸೂರಿಯುಲಿಸ್ಟಿಕ್ ಕಲೆಗಾರಿಕೆಯ ಮೂರಿ ಬೀರುವ ಶಾಖೋಪಶಾಖಾವಿಸ್ತರವಿಸ್ಮಯ. ಹೋಟೆಲಿಂದ ಇಸ್ವೇಯ ವರೆಗೆ ನಮ್ಮದೇ ಬಸ್ಸು ಏರ್ಪಾಟು. ಬಸ್ಸಿನಿಂದ ಇಳಿದವರೇ ನಾವು ನೇರವಾಗಿ ವರ್ಗಕ್ಕೆ ಹೋಗಬೇಕು. ೬೦ ಮಿನಿಟಿನ ತರುವಾಯ ೧೫ ಮಿನಿಟು ವಿರಾಮ. ಆ ಮೇಲೆ ೬೦ ಮಿನಿಟಿನ ಇನ್ನೊಂದು ಉಪನ್ಯಾಸ. ೬೦ ಮಿನಿಟು ಮಧ್ಯಾಹ್ನ ಊಟದ ವಿರಾಮ. ಅನಂತರ ಮೂರು ತಾಸುಗಳ ಉಪನ್ಯಾಸ. ಅಥವಾ ಚರ್ಚೆ. ಐದು ಗಂಟೆಗೆ ಮತ್ತೆ ಬಸ್ ಆರೋಹಣ, ಹೋಟೆಲಿಗೆ ಪುನರಾಗಮನ.

ಹಾಜರುಪಟ್ಟಿ ಇರಲಿಲ್ಲವಾದುದರಿಂದ ವಿದ್ಯಾರ್ಥಿ ಸಂಖ್ಯೆಯ ಏರಿಳಿತ ಬಹಳ. ಒಂದು ತಿಂಗಳು ಮೌನವಾಗಿ ಶಿಸ್ತು ಪಾಲಿಸಿದ ವರ್ಗ ಬರಬರುತ್ತ ಸ್ವತಂತ್ರವಾಯಿತು, ಸ್ವಚ್ಛಂದವಾಯಿತು. ಧೈರ್ಯಶಾಲಿಗಳ ಮಾದರಿಯನ್ನು ಕಟ್ಟ ಕಡೆಗೆ ಉಳಿದವರೂ ಅನುಸರಿಸುವಂತಾದುದು ಶೋಚನೀಯ. ಚಳಿ ಸ್ವಲ್ಪ ಹಿಂದಾದ ಮೇಲಂತೂ ನಾಪೋಲಿ ಬೀದಿಗಳ ಆಕರ್ಷಣೆಯನ್ನು ತಡೆಯುವುದು ಕಷ್ಟವಾಗಿತ್ತು. ಹೀಗಾಗಿ ಕ್ಲಾಸು ವಿರಳವಾಗಿ ಕಾಣಿಸುವುದು. ಒಂದನೇ ತಾರೀಕಂತೂ ಬ್ಯಾಂಕಿಗೆ ಹೋಗಿ ನಮ್ಮ ಮಾಸಿಕ ವೇತನ ಪಡೆಯುವ ಸಡಗರ. ಅಂದು ಕ್ಲಾಸಿಗೆ ನಾವೇ ರಜ ಕೊಡುತ್ತಿದ್ದೆವು. ಇಡೀ ಗುಂಪಿನಲ್ಲಿ ಹಾಜರಿಯ ಶಿಸ್ತನ್ನು ಕಾಯ್ದವರು ಏಶಿಯದ ವಿದ್ಯಾರ್ಥಿಗಳು. ನಮ್ಮ ವರ್ಗದ ಸಾಮೂಹಿಕತೆಯನ್ನೂ ಐಕ್ಯವನ್ನೂ ವಿಶೇಷ ಸದ್ದಿಲ್ಲದೆ ಕಾಪಾಡಿದ ಶ್ರೇಯಸ್ಸು ನಮಗೆ ಸಂದಿತು.

ಪ್ರೊಫೆಸರ್ ಪಲೊಂಬಾರ ಮೂರು ಉಪನ್ಯಾಸಗಳನ್ನು ವರದಿ ಮಾಡುವ ಕೆಲಸವನ್ನು ನನಗೆ ಕೊಟ್ಟರು. ಪಲೊಂಬಾರ ಸಿಂಹಾವಲೋಕನ ಕ್ರಮದ ಉಪನ್ಯಾಸದಲ್ಲಿ ಆರ್ಥಿಕ ಅಭಿವೃದ್ಧಿಯ ಮೂಲ

ಸೂತ್ರಗಳ ನಿರೂಪಣೆ ಅಡಕವಾಗಿತ್ತು. ಆರ್ಥಿಕ ಬೆಳವಣಿಗೆಯ ಮಾದರಿ
ಗಳನ್ನು ಕಲಿಸಿದ ತೋಮಾಸ್ ಅವರು ಅಮೇರಿಕದ ಯೇಲ್ ಪದವೀಧರ
ರಾದುದರಿಂದ ನಮಗೆ ಇಂಗ್ಲಿಷಿನಲ್ಲಿಯೇ ನೇರವಾದ ಪ್ರವಚನ ದೊರೆ
ಯಿತು. ಇದು ಒಂದು ಅಪರೂಪ ಸೇವೆ.

ಪ್ರೊ. ಲಸೊರ್ಸಾ ಜನಸಂಖ್ಯಾಶಾಸ್ತ್ರದ ತಜ್ಞರು. ತಾವೇ ಬರೆದ
ಪುಸ್ತಕದ ಅಂಕೆಸಂಖ್ಯೆಗಳನ್ನುಪಯೋಗಿಸಿ ನಿರರ್ಗಳವಾಗಿ ಬೋಧಿಸಬಲ್ಲರು.
ಅವರ ಸುಮಧುರವಾದ ಕಂಠಶ್ರೀಗೆ ಅನುವಾದಕರು ಆತಂಕವಾಗಿದ್ದರು.
ಎಫ್. ಎ.ಓ.ದಲ್ಲಿ ಅಂತಾರಾಷ್ಟ್ರೀಯ ಅನುಭವ ಹೊಂದಿದ ವಿತ್ತೋರಿಯಾ
ಮುರ್ರಾಮ ಬಹಳ ಹಸನ್ಮುಖದಿಂದ ಪಾಠ ಹೇಳುವರು. ಅವರ ಪಾಠ
ಸ್ಪಷ್ಟ, ಚರ್ಚಾ ಕಾಲ ದೀರ್ಘ. ಯೋಜನೆಯ ಪ್ರತ್ಯಕ್ಷರೂಪಗಳನ್ನು
ಅವರು ವಿಶ್ಲೇಷಿಸಬೇಕಾಗಿತ್ತು. ಒಪರೇಶನ್ಸ್ ರಿಸರ್ಚ್ ಎಂಬ ಗಣಿತ
ಮುಖವಾದ ಭಾಗವನ್ನು ಕಲಿಸಲು ಇತಾಲೊ ಕುತೋಲೋ ಎಂಬ
ಪ್ರೊಫೆಸರ್ ಸುಮಾರು ಮೂವತ್ತು ತಾಸು ಉಪನ್ಯಾಸ ನೀಡಿದರು.
—ಗೋರ್ಕಲ್ಲ ಮೇಲೆ ಮಳೆ ಸುರಿದಂತೆ. ನಮ್ಮಲ್ಲಿ ಸೇ.90 ಜನಕ್ಕೆ ಗಣಿತದ
ಗಂಧಗಾಳಿ ಇರಲಿಲ್ಲವಾದರೂ ಅವರಂತೂ ಪಾಠ ಒಪ್ಪಿಸಿಯೇ ಬಿಟ್ಟರು.
ಇವರೆಲ್ಲರೂ ನೇಪಲ್ಸ್ ವಿಶ್ವವಿದ್ಯಾನಿಲಯದಲ್ಲಿ ಆಯಾ ವಿಷಯದ
ವರಿಷ್ಠ ಪ್ರೊಫೆಸರುಗಳು. ರೋಮ್ ವಿಶ್ವವಿದ್ಯಾನಿಲಯದ ಪ್ರಖ್ಯಾತ
ಅರ್ಥ ಶಾಸ್ತ್ರಜ್ಞ ದಿನಾರ್ದಿ ಉದ್ಘಾಟನಾ ಉಪನ್ಯಾಸವನ್ನು ನೀಡಿದ್ದಲ್ಲದೆ
ಇನ್ನೊಂದು ದಿನ ಎರಡು ಉಪನ್ಯಾಸಗಳನ್ನು ಕೊಟ್ಟರು. ರೋಮಿನಿಂದ
ಕೊಸೆಂಜಾ ಮತ್ತು ಕ್ರೂಸ್ತರೊಸಾ ಎಂಬಿಬ್ಬರು ಉಪನ್ಯಾಸಕರು ಆಗಿಂ
ದಾಗ ಇಷ್ಟೇ ಪಾಠ ಪ್ರವಚನದಲ್ಲಿ ಸೇರಿಕೊಳ್ಳುತ್ತಿದ್ದರು. ಅವರು ಪ್ರೊಫೆ
ಸರ್ ಅಲ್ಲವಾದುದರಿಂದ ಅವರದು ಸಹಾಯಕ ಕಾರ್ಯಕ್ರಮ; ಪ್ರೊಫೆ
ಸರರ ಉಪನ್ಯಾಸದ ಬಳಿಕ ಚರ್ಚಾಗೋಷ್ಠಿಯ ನಾಯಕತ್ವವನ್ನು ಅವರು
ವಹಿಸುತ್ತಿದ್ದರು. ಹೆಚ್ಚಾಗಿ ಪ್ರೊಫೆಸರ್ ವರ್ಗದಲ್ಲಿನ ವಿದ್ಯಾರ್ಥಿಗಳಿಂದ
ಸ್ವಲ್ಪ ದೂರವಾಗಿರುವುದು — ನಮ್ಮ ಭಾರತೀಯ ಪದ್ಧತಿಗೆ ಸಮನಾಗಿ
ಉಪನ್ಯಾಸ ಮಾಡಿದರೆ ತಮ್ಮ ಕರ್ತವ್ಯ ಮುಗಿಯಿತೆಂದು ಭಾವಿಸುವುದು —
ಇತಾಲಿಯನ್ ಸಂಪ್ರದಾಯ. ಇದಕ್ಕೆ ವಿರುದ್ಧವಾದ್ದು ಅಮೇರಿಕನ್
ಪ್ರಾಧ್ಯಾಪಕರ ಮಾದರಿ. ಪಾವುಲ್ ಗಾರ್ಡನ್ ಮತ್ತು ಪ್ರೊಫೆಸರ್

ಸೆರಿನೋ ಜರ್ಪಾಗೋಷ್ಠಿಯ ಕಾಲ ವಿದ್ಯುತ್ತಿನಂತೆ ಬುದ್ಧಿಯನ್ನೋಡಿಸ ಬಲ್ಲರು. ಪ್ರಶ್ನೆಗಳಿಗೆ ರೂಪ್ರಕೊಟ್ಟು, ಪಾಠವನ್ನು ಕಲಾತ್ಮಕವಾಗಿ ಸೃಜಿಸ ಬಲ್ಲರು. ಪ್ರೊಫೆಸರ್ ಸೆರಿನೋ ಅವರ ಪಾಠ ಆಜನ್ಮ ಮರೆಯುವುದೇ ಇಲ್ಲ. ಅರವತ್ತು ವರ್ಷದ ಮುದುಕರಾದರೂ ವರ್ಗದ ನಡುವೆ ಅಡ್ಡಾಡಿ ಕೊಂಡೆ ಉಪನ್ಯಾಸ ಮಾಡಬೇಕು. ನಡುವೆ ಪಠಾತ್ತನೆ ಒಂದು ಪ್ರಶ್ನೆ– ತನ್ನ ಸಮೀಪದ ವಿದ್ಯಾರ್ಥಿಗೆ. ಮೊದಲು ಇಟಾಲಿಯನ್‌ನಲ್ಲಿ ಪಾಠ ತೊಡಗಿದರೂ ಅದು ಇಂಗ್ಲಿಷಿಗೆ ತಿರುಗಿ, ಸ್ಪಾನಿಷ್, ಅಥವಾ ಫ್ರೆಂಚಿನಲ್ಲಿ ಮುಂದುವರಿದರೂ ಸರಿಯೆ. ಎಲ್ಲ ಭಾಷೆಯನ್ನು ಬಲ್ಲ ಅವರ ಪಾಠ ಮುಂದುವರಿದಂತೆ ಭಾಷಾ ಪರಿವರ್ತನೆ ಮಾಡಿಕೊಂಡು, ವಿಷಯ ಪರಿವರ್ತನೆಯನ್ನೂ ಹೊಂದಿ ಸವೇಗವಾಗಿ ಧಾವಿಸುವಾಗ ಅನುವಾದ ಕರ ಕೆಲಸ ಮಜಾ ಆಗಿರುತ್ತಿತ್ತು. ಸಿಗಾರಿನ ನಳಿಕೆಗೆ ಪುಡಿ ತುಂಬಿಸು ವಾಗಲೂ, ಅದಕ್ಕೆ ಬೆಂಕಿ ಹಚ್ಚುವಾಗಲೂ, ಸೇದುವಾಗಲೂ ಅವರ ಉಪನ್ಯಾಸದ ಎಳೆ ಕಡಿಯುಲೊಲ್ಲದು. ಪೈಪ್ ಹತ್ತಿಕೊಂಡ ಮೇಲೆ ಹಿಂದಿನ ಭಾಷೆ ಮರೆತು ಬದಲಾಯಿಸಿಬಿಡುತ್ತಿತ್ತು. ಮೂರು ದಿನಗಳ ಕಾಲ ಅವರ ಸಮಾಜ ಶಾಸ್ತ್ರದ ಪಾಠ ಅವ್ಯಾಹತವಾಗಿ ನಡೆಯಿತು. ಪ್ರತಿಯೊಂದು ದೇಶದ ಬೆಳವಣಿಗೆಯ ಸಾಮಾಜಿಕ ಸಮಸ್ಯೆಯನ್ನು ಆಳವಾಗಿ ಅಧ್ಯಯನ ಮಾಡಿದ ಸೆರಿನೋ ತಮ್ಮ ಜ್ಞಾನ ಸಂಪನ್ನತೆ ಯಿಂದ ಎಲ್ಲರನ್ನೂ ದಂಗುಬಡಿಸಬಲ್ಲರು. 'ಪ್ರಪಂಚದ ಅತಿ ಚುರುಕು ಮೆಕ್ಯಾನಿಕ್'ಗಳು ಎಲ್ಲಿದ್ದಾರೆ?' ಎಂದು ನನ್ನನ್ನು ಕೇಳಿದರು. 'ಅಮೇರಿಕ ದಲ್ಲಿ' ಎಂದು ನಾನು ಹೇಳಿದೆ. 'ತಪ್ಪು, ನಿಮ್ಮಲ್ಲೇ, ಇಂಡಿಯಾದಲ್ಲಿ' ಎಂದು ನುಡಿದು ಎಂಥ ಕಾರುಗಳನ್ನಾದರೂ ಜೋಡಿಸಿ, ಸಂದುಗೂಡಿಸಿ, ಬಿಡಿಭಾಗಗಳನ್ನು ಕೈಯಲ್ಲೇ ತಯಾರಿಸಿ, ಸತ್ತ ಶವಗಳಿಗೆ ಜೀವದಾನ ಮಾಡುವ ಕಲೆಯಲ್ಲಿ ಪ್ರಥಮ ಸ್ಥಾನ ಇಂಡಿಯಾಕ್ಕೆ, ಎರಡನೆಯದು ಐಗುಪ್ತಕ್ಕೆ ಎಂದರು. ಸೊಕ್ರೆಟಸ್ ಮಾದರಿಯಲ್ಲಿ ಅವರು ಪಾಠ ತೊಡಗು ವರು: 'ಆರ್ಥಿಕ ಅಭಿವೃದ್ಧಿ ಎಂದರೇನು?' ಎಂಬ ಪ್ರಶ್ನೆಗೆ ನಮ್ಮಿಂದಲೇ ಹತ್ತಾರು ಉತ್ತರಗಳನ್ನು ಪಡೆದು ಅವನ್ನೇ ಮಥಿಸಿ ಅವುಗಳೆಲ್ಲ ಆಂಶಿಕ ಉತ್ತರಗಳೇ ಹೊರತು, ಪೂರ್ತಿಯಾಗಿ ಉತ್ತರ ಕೊಡುವುದು ಸಾಧ್ಯವಿಲ್ಲ ವೆಂಬುದನ್ನು ಪ್ರತಿದೇಶದಿಂದಲೂ ಸೋದಾಹರಣವಾಗಿ ಸಮರ್ಥಿಸುವರು.

ಅರ್ಥಶಾಸ್ತ್ರದ ಪರಿಮಿತಿಯನ್ನು ಎಲ್ಲರಿಗೂ ಮನದಟ್ಟು ಮಾಡುವರು. ಆರ್ಥಿಕ ಅಭಿವೃದ್ಧಿ ಆಯಾ ಸಮಾಜದ ಅಭಿವೃದ್ಧಿಯ ಒಂದು ಮುಖ ವಾದುದರಿಂದ ಅದರ ದಿಶೆ ಪ್ರಗತಿಗಳು ಆ ಸಮಾಜದಲ್ಲಿ ರೂಢವಾಗಿರುವ ಆಶೋತ್ತರ, ಸಂಪ್ರದಾಯಗಳು ಮುಂತಾದ ಮೂಲ ಹೇತುಗಳನ್ನು ಅವಲಂಬಿಸಿವೆಯೆಂದು ಸೂಚಿಸಿದರು. ಎಲ್ಲಕ್ಕೂ ಮಿಗಿಲಾಗಿ ಆರ್ಥಿಕ ಅಭಿವೃದ್ಧಿಯು ಸಮಾಜದಲ್ಲಿ ಆರೋಪಿಸುವ ಮೌಲ್ಯ ನಿಜವಾದ ಮೌಲ್ಯ ಹೌದೆ ಎಂಬುದನ್ನು ನಿರ್ಣಯಿಸಬೇಕು. ಆಫ್ರಿಕದ ಗಿರಿಜನ ( tribal ) ಸಮಾಜದಲ್ಲಿರುವ ಸತ್ಯಸಂಧತೆ, ಸಹಕಾರಬುದ್ಧಿ, ಅಕಲಂಕ ಮನೋಭಾವ ಇವನ್ನೆಲ್ಲ ವರ್ಣಿಸಿ 'ನನಗೆ ಆಫ್ರಿಕದ ಆದಿವಾಸಿಯಂತೆ ಬಾಳುವ ಆಸೆ' ಎಂದವರು ನುಡಿದಾಗ ನಮ್ಮ ವರ್ಗದ ಆಫ್ರಿಕನರು ತಮ್ಮ ಅಂತರಂಗ ಶೋಧನೆ ಮಾಡಿಕೊಳ್ಳಬೇಕಾಯಿತು.

### ೦ ೦ ಆಹಾರ-ವಿಹಾರ

ಶಾಖಾಹಾರಿಯಾದ ನನಗೆ ಐರೋಪ್ಯ ದೇಶಗಳಲ್ಲಿ ಆಹಾರದ ವಿಷಯದಲ್ಲಿ ಅಂಥ ಗಂಭೀರ ಸಮಸ್ಯೆ ಉಂಟಾಗಲಿಲ್ಲ. ಅರೆಬೆಂದು ಅಜೀರ್ಣವಾಗುವ ಅನ್ನಕ್ಕಿಂತ ಮೇಲೆಂದು ಸ್ಪಗೆಟ್ಟಿಯನ್ನು ಗಟ್ಟಿಯಾಗಿ ನೆಮ್ಮಿಕೊಂಡ ಕತೆ ಮೊದಲೇ ಹೇಳಿದ್ದೇನೆ. ಹೋಟೆಲಿನಲ್ಲಿ ಇದು ಸರಿ ಹೋಗುತ್ತಿತ್ತು; ಆದರೆ ಸಂಚಾರ ಕಾಲದಲ್ಲಿ ನಮ್ಮ ಗುಂಪಿಗೆ ಸತ್ಕಾರದ ಕೂಟವನ್ನೇರ್ಪಡಿಸಿದಾಗ ಮಾತ್ರ ಹೊಸತಾದ ಸಮಸ್ಯೆ ಉದ್ಭವವಾಗುತ್ತಿತ್ತು. ಸ್ಪಗೆಟ್ಟಿ ನಮ್ಮೂರಿನ ಗಂಜಿಗೆ ಸಮ. ವಿಶೇಷ ಭೋಜನ ಸಮಾರಂಭಗಳಲ್ಲಿ ಗಂಜಿ ಯಾರು ಕೇಳುತ್ತಾನೆ? ಅನೇಕ ತರದ ಮಾಂಸದ ಭಕ್ಷ್ಯ ಭೋಜ್ಯಗಳನ್ನೊಳಗೊಂಡ ಔತಣದಲ್ಲಿ ಮಾಂಸ ರಹಿತವಾದ ಸ್ಪಗೆಟ್ಟಿ ನಮಗೋಸ್ಕರ ಸಿದ್ಧವಾಗಬೇಕಾದರೆ ಒಂದು ತಾಸು ಹಿಡಿಯುತ್ತಿತ್ತು. ಆ ವರೆಗೆ ನಾವು ಬರಿಯ ಪ್ರೇಕ್ಷಕರಾಗಿ ಕೂತಿರ ಬೇಕಾಗುತ್ತಿತ್ತು. ಬ್ರಿಂದಿಸಿಯ ಕಡಲಕರೆಯ ಒಂದು ಹೋಟೆಲಿನಲ್ಲಿ ನಮಗೆ ರಾತ್ರಿ ಭೋಜನ ಸತ್ಕಾರ. ಭಕ್ಷ್ಯಗಳ ಪಟ್ಟಿಯಲ್ಲಿ ಮೊದಲನೆಯದು: ಫ್ರುತ್ತಾದಿಮಾರೆ ಇದೇನೋ ಫ್ರುಟ್ಸ್, ಇಂದು ನಮ್ಮ ಅದೃಷ್ಟದಲ್ಲಿ

ಬರೆದಿದೆ ಎಂದು ಸಂತೋಷಪಡುವಷ್ಟರಲ್ಲಿ ಪಕ್ಕದ ನನ್ನ ಸ್ನೇಹಿತರಿಗೆ 'ಮಳಿ' (Oyster)ಯ ಸಾರು ಬಡಿಸಿದರು—ಅದರಲ್ಲಿ ಕಡಲಿನ ಹಣ್ಣು—ಪ್ರುತ್ತಾದಿಮಾರೆ—ತೇಲುತ್ತಿತ್ತು. ಲೇಪ್ರೊಂತಾನೆಯಲ್ಲಿ ನೀರಿನಲ್ಲಿಯೇ ನನ್ನ ಕುಡಿತವನ್ನು ಮುಗಿಸುತ್ತಿದ್ದೆನೆಂದು ಹೇಳಿದೆನಷ್ಟೆ? ಔತಣ ಕೂಟದಲ್ಲಿ—ಅತಿಥೇಯರು ಉದಾರಿಗಳಾಗಿರುವಾಗ—ಹಣ್ಣಿನ ರಸವನ್ನು ಯಾಕೆ ಬೇಡಬಾರದೆಂದು ಒಂದು ಕಡೆ ಬೇಡಿದೆ. ಪ್ರಥಮ ಪ್ರಯೋಗ ಯಶಸ್ವಿಯಾದ ಬಳಿಕ ಹೋದಲ್ಲೆಲ್ಲಾ 'ಸೂಗೋದಿ ಪ್ರುತ್ತಾ' ಬಡಿಸಲು ಹೇಳುತ್ತಿದ್ದೆ. ಎರಡು ಮೂರು ಲೋಟ ಹಣ್ಣಿನ ರಸದಿಂದ ಮಾತ್ರವೇ ಹೊಟ್ಟೆ ತುಂಬಿಸಿಕೊಂಡ ದಿನಗಳುಂಟು. ಕೊಸೆಂಜಾದಲ್ಲಿ ಅದೂ ಸಿಗಲಿಲ್ಲ, ಸ್ಪಗೆಟ್ಟಿಯೂ ಇರಲಿಲ್ಲ. ನನ್ನ ಗುಂಪೆಲ್ಲ ಉತ್ತಮ ಇತಾಲಿಯನ್ ಅಡಿಗೆಯ ರುಚಿಗೆ ಬಾಯಿ ಚಪ್ಪರಿಸುವುದನ್ನು ಕಂಡು ರೋಸಿ, ಸಿಟ್ಟಿನಿಂದ ಒಂದು ಮೈಲು ವಾಕಿಂಗ್ ಮಾಡಿ ಕಡಲಗಾಳಿಯಿಂದ ಹೊಟ್ಟೆ ತುಂಬಿಸಿಕೊಂಡೆ.

ಹೌದು, ಇಂಥ ಪರಿಸರದಲ್ಲಿ ಶಾಖಾಹಾರಿಗಳ ಮುಂದೆ ಇರುವ ಮುಖ್ಯ ಸಮಸ್ಯೆ—ಹೊಟ್ಟೆ ತುಂಬಿಸಿಕೊಳ್ಳುವುದು. ಸಾಮಾನ್ಯವಾಗಿ ಯುರೋಪಿನಲ್ಲಿ ಬೆಳಗಿನ ಉಪಾಹಾರ ಲಘುವಾಗಿರುವುದು ಪದ್ಧತಿ. ಬ್ರೆಡ್-ಜಾಮ್+ಬೆಣ್ಣೆ ಮತ್ತು ಕಾಫಿ. ಲೇಪ್ರೊಂತಾನೆಯಂಥ ನಾಲ್ಕನೆ ದರ್ಜೆ ವಸತಿಗೃಹದಲ್ಲಿ ಇದಕ್ಕೆ ಉತ್ತಮ ಮಟ್ಟ ನಿರೀಕ್ಷಿಸುವುದು ತಪ್ಪಾದೀತು. ಆದರೆ ಒಂದು ವಾರ ಕಳೆದ ಮೇಲೆ, ಮಧ್ಯಾಹ್ನದ ವೇಳೆ ಮೋಸ್ತ್ರಾದಲ್ಲಿ ನಮಗೆ ನೀಡುತ್ತಿದ್ದ ಹಸಿಯೂಟ (Cold lunch)ದ ಪ್ರಮಾಣವನ್ನು (ಸ್ಯಾಂಡ್‌ವಿಚ್—ಬೀರ್ ಅಥವಾ ಕಾಫಿ) ಗಮನಿಸಿದರೆ, ಸತ್ಯಾಗ್ರಹ ಹೂಡದೆ, ಉಪಾಯವಿರಲಿಲ್ಲ. ಏಶಿಯಾದ ಹಸು ಜನಗಳಾದ ನಾವು ಘಟನಾತ್ಮಕವಾಗಿ ಈ ವಿಷಯವನ್ನು ಸರಿಪಡಿಸಿಕೊಳ್ಳೋಣ ಎಂದರೆ ಲ್ಯಾಟಿನ್ ಅಮೇರಿಕನ್ ತರುಣರು ಬಿಡಬೇಕಲ್ಲವೇ? ಎಲ್ಲರೂ ಸೇರಿ ಮನವಿಯೊಂದನ್ನು ಸಲ್ಲಿಸಿದ ಮೇಲೆ ಪ್ರಾತಃಕಾಲದ ಉಪಾಹಾರಕ್ಕೆ ಓಮಲೆಟ್ ಸೇರಿಕೊಂಡಿತು, ಮಧ್ಯಾಹ್ನದ ಹಸಿಯೂಟ ಮೋಸ್ತ್ರದ ಕ್ಯಾಂಟೀನಿನ ಬಿಸಿಯೂಟವಾಗಿ ಪರಿಣತವಾಯಿತು. ಇದರಿಂದಲೂ ನನಗೆ ವೈಯಕ್ತಿಕ ಉಪಶಮನ ಆಗುವಂತಿರಲಿಲ್ಲ. ಹಡಗಿನಲ್ಲಿ, ಪೆಲಿದೇಶದಲ್ಲಿ

ಆರು ತಿಂಗಳ ಕಾಲ ಬದುಕಿ. ಪಾರಾಗುವ ನನ್ನ ಮಹಾ ಪ್ರಯತ್ನದ ಒಂದಂಗವಾಗಿ ನಾಲ್ಕು ದಿನ ಮೊಟ್ಟೆಯ ಆಮಲೆಟ್ ನುಂಗಲು ಪ್ರಯತ್ನಿಸಿ ವಿಫಲನಾದ ನನಗೆ ಓಮಲೆಟ್ ಬದಲು ಒಂದು ಸೇಬುಹಣ್ಣು ದಯ ಪಾಲಿಸಲು ಅರ್ಜಿ ಸಲ್ಲಿಸಿದೆ. ಆದರೆ ಮಧ್ಯಾಹ್ನ ಮೋಸ್ತಾದ ಊಟ ವಾಗಲೀ ರಾತ್ರಿಯ ಸ್ವಗೆಟ್ಟಿ ಊಟವಾಗಲೀ ಅನ್ನದಿಂದ ಹೊಟ್ಟೆ ಉಬ್ಬರಿಸಿಕೊಳ್ಳುವ ನನ್ನಂಥವರಿಗೆ ಪ್ರಮಾಣದಲ್ಲಿ ತೀರ ಅಲ್ಪವಾದ್ದರಿಂದ ತುತ್ತಿನ ಚೀಲ ಆರು ತಿಂಗಳೂ ಬರಿಮೋ ಬರಿದು, ತೆರವೋ ತೆರವು. ಊಟ ಫಲಾಹಾರವಾಯಿತು; ಉಪವಾಸಕ್ಕೂ, ನನ್ನ ಊಟಕ್ಕೂ ಹೆಚ್ಚು ವ್ಯತ್ಯಾಸವಿರಲಿಲ್ಲವಾಗಿ ನನ್ನ ಆರ್ಥಿಕ ಅಧ್ಯಯನ ತಪಸ್ಸಿನ ಎತ್ತರಕ್ಕೆ ನೆಗೆಯಿತು.

ಆದ್ದರಿಂದ ನಾನು ಬದುಕಿ ಉಳಿದಿದ್ದೇ ಇತಾಲಿಯನ್ ಕಾಫಿಯ ವರಪ್ರಸಾದದಿಂದ ಎನ್ನಲು ಯಾವ ಅಡ್ಡಿಯೂ ಇಲ್ಲ. ಬೆಳಗಿನ ಉಪಾ ಹಾರದಲ್ಲಿ ಎಷ್ಟು ಬೇಕಾದರೂ ಕಾಫಿಯನ್ನು ಬೇಡಿ ಬೇಡಿ ಪಡೆಯು ವುದು ಉಪಾಹಾರದ ಸೂತ್ರವಾಗಿದ್ದುದರಿಂದ ನಾನು ನಾಲ್ಕು ಬಟ್ಟಲು ಕಾಫಿ ಮಿಗಿತೆವೆಚ್ಚವಿಲ್ಲದೆ ಕುಡಿಯಬಹುದಾಗಿತ್ತು. ಅಲ್ಲದೆ ಸಂಜೆಯ ವೇಳೆ ಇಸ್ಸೇಯಿಂದ ಮರಳಿದ ಮೇಲೆ ನಮ್ಮ ಕೋಣೆಯಲ್ಲೇ ಒಂದು ಸ್ವಂತ ಕ್ಯಾಂಟೀನ್ ಸ್ಥಾಪನೆ ಮಾಡಿ, ಇನ್ನಷ್ಟು ಕಾಫಿ ಕುಡಿದು, ಹಸಿ ಬ್ರೆಡ್ ತಿಂದು ಸಾಯಂಕಾಲದ ಉಪಾಹಾರ ಮುಗಿಸಿದರೆ ರಾತ್ರಿಯ ಊಟಕ್ಕೆ ಹೊಟ್ಟೆ ಚುರುಕಾಗಿರುತ್ತಿತ್ತು. ಅಲ್ಲದೆ ವಿಯಾರೋಮದ ಪಸ್ಸಜಾತಾದಲ್ಲಿ (ಧಾರವಾಡ ಭಾಷೆಯಲ್ಲಿ ಸಹಜ್ ಅಡ್ಡಾಡುವುದು) 40 ಲೀರೆಯ ಕಫೆ ಔಷಧದ ರೂಪದಲ್ಲಿ ಬಿದ್ದು ನನ್ನ ಹೊಟ್ಟೆಯ ಸಮತೋಲವನ್ನು ಉಳಿಸಿಕೊಂಡಿತು. ಏನೇ ಆದರೂ ಹೊಟ್ಟೆಯ ತೆರೆ ಜಾಗಗಳು ಊರಿಗೆ ಮರಳಿದ ಮೇಲೆ ತುಂಬಿಕೊಳ್ಳಬೇಕಾಯಿತು: 1963ರ ಜೂನ್ 4ರಿಂದ ವಾಷಿಂಗ್ಟನ್ನಿನಲ್ಲಿ ನಡೆದ ಜಾಗತಿಕ ಆಹಾರ ಸಮ್ಮೇಳನಕ್ಕೆ ಪ್ರತಿನಿಧಿಯಾಗಿ ನನ್ನನ್ನು ಕಳಿಸಲು ಕಾರಣವೂ ಇದೇ ಇರಬೇಕು. ಆಹಾರ ಸಮಸ್ಯೆ ನಮಗಿದ್ದಷ್ಟು ಬೇರಾರಿಗೂ ಇದ್ದಿರಲಾರದು. ಭಕ್ಷ್ಯ, ಭೋಜ್ಯಗಳಿಗೆ ಹೆಸರಾಂತ ಇತಾಲಿಯಾದಲ್ಲಿಯೂ ಉಪವಾಸ ವಿರಬೇಕಾದರೆ ಇವನೊಬ್ಬ ಯೋಗಿಯೆಂದು, ಯೋಗದಿಂದಲೆ ಆಹಾರ

ಸಮಸ್ಯೆಯನ್ನು ಪರಿಹರಿಸುವ ವಿಧಾನವನ್ನು ಸಾರುವಂತೆ ನನ್ನನ್ನೇ ಕಳಿಸಿದರು ಎಂದು ನಾನೆಂದುಕೊಂಡಿದ್ದೇನೆ!

ನೇಪಲ್ಸ್ ನಗರ ಪ್ರಪಂಚದ ಮುಖ್ಯ ವಿಹಾರ ಕೇಂದ್ರಗಳಲ್ಲಿ ಒಂದಷ್ಟೆ. ಇಲ್ಲಿ ನಗರದೊಳಗಡೆ ಮಾತ್ರವಲ್ಲದೆ ನಗರದ ಹೊರವಲಯದಲ್ಲಿ 30 ಮೈಲುಗಳ ಸುತ್ತಳತೆಯಲ್ಲಿ ಅತಿ ಮೋಹಕವಾದ ಕಾಪ್ರಿ. ಇಸ್ಕಿಯದಂಥ ದ್ವೀಪಗಳು, ಸೊರ್‍ರೆಂತೊ, ಅಮಾಲ್ಫಿಯಂತಹ ಜಾಗಗಳು, ಪೊಂಪೈ, ಪೇಸ್ಟುಮ್ ಅಂಥ ಐತಿಹಾಸಿಕ ಅವಶೇಷಗಳು, ವೆಸುವಿಯಸ್‌ನಂಥ ಬೆಟ್ಟಗಳು ಯಾತ್ರಿಕರನ್ನು ಆಕರ್ಷಿಸುತ್ತವೆ. ಇಂಥ ಒಟ್ಟು ಆಕರ್ಷಣೆಯ ಕೇಂದ್ರಬಿಂದು ನೇಪಲ್ಸ್–ಇತಾಲಿಯದ ಎರಡನೆ ರೇವು ಪಟ್ಟಣ. ಕಡಲ ಕರೆಯಿಂದಲೇ ಎದ್ದು ನಿಂತಿರುವ ಗುಡ್ಡ ಬೆಟ್ಟಗಳ ಅಂಚೆಲ್ಲ ಮನೆಗಳಿಂದ ತುಂಬಿ ಜನ ಮತ್ತು ವಾಹನ ಸಂಚಾರದಿಂದ ಸದಾ ಜೀವಂತವೆನಿಸುವ ಈ ನಗರದಲ್ಲಿ ಯಾವ ಹೊತ್ತಿಗೆ ತಿರುಗಾಟಕ್ಕೆ ಹೋದರೂ ಬೇಸರವೆಂಬುದಿಲ್ಲ. ನಮ್ಮ ದೈನಂದಿನ ಓಡಾಟಕ್ಕೆ ಲೇಪೊಂತಾನೆಯಿಂದ ಒಂದು ಮೈಲು ದೂರದಲ್ಲಿರುವ ವಿಯಾರೋಮ ಎಂಬ ಬೀದಿ ನಿರ್ದಿಷ್ಟವಾಗಿತ್ತು. ಚೆನ್ನಾಗಿ ಅಲಂಕರಿಸಿಕೊಂಡ ಸ್ತ್ರೀ ಪುರುಷರಿಂದ ತುಂಬಿತುಳುಕುತ್ತಿದ್ದ ವಿಯಾರೋಮದ ಸಾಯಂಕಾಲದ ನೋಟ ಕಣ್ಣಿಗೊಂದು ಹಬ್ಬ. ಪಕ್ಕದ ಅಂಗಡಿಗಳ ಗಾಜಿನ ಕಿಟಿಕಿ ಮುಖಾಂತರ ವಿವಿಧ ವಸ್ತು ವಿನ್ಯಾಸವನ್ನು ಧರ್ಮಾರ್ಥವಾಗಿ ನಿಂತು ನೋಡಿ ಮುಂದುವರಿಯುವುದು ನಮಗೆ ರೂಢಿಯಾಯಿತು. ಹೋಟಲಿಂದ ನಲ್ವತ್ತು ಲೀರೆ ಕೊಟ್ಟು ಅಷ್ಟು ದೂರ ತೆರಳಿದರೆ ಅರಮನೆಯಂಥ ಒಂದು ಕಟ್ಟಡ ಬರುತ್ತದೆ. ಅದೇ ಉಂಬರ್ತೊ ಗೆಲರಿ: ನಮ್ಮ ಮೊದಲ ನಿಲುಮನೆ. ನೇಪಲ್ಸಿನ ದೊರೆ ಹದಿನೆಂಟನೆ ಶತಕದಲ್ಲಿ ಕಟ್ಟಿಸಿದ ಈ ಗೆಲರಿಯ ಗಾಜಿನ ಬೃಹತ್ ಮಾಡಿನ ಆಶ್ರಯದಲ್ಲಿ ಅಂಗಡಿಗಳು, ಕೆಫೆಗಳು, ಬಾರ್‌ಗಳು, ಸಿನಿಮಾ ಮಂದಿರಗಳೂ, ನರ್ತನಶಾಲೆಗಳೂ, ಪುಸ್ತಕ ಭಂಡಾರಗಳೂ ಏಕತ್ರಿತವಾಗಿದ್ದವು. ಐದಾರು ತಾಸು ಇದರೊಳಗೆನೆ ಕಳೆಯಬಹುದಿತ್ತು. ಗ್ರಂಥ ಭಂಡಾರಗಳಲ್ಲಿ ಇತಾಲಿಯನ್ ಹೊರತು ಇತರ ಭಾಷೆಯ ಗ್ರಂಥಗಳೇ ಇರುತ್ತಿದ್ದಿಲ್ಲ. ಇತಾಲಿಯನ್ ಗ್ರಂಥಗಳ ಅಚ್ಚುಕಟ್ಟಾದ ಮುದ್ರಣವನ್ನು ಕಣ್ಣಾರೆ ನೋಡುವುದು, ಗ್ರಂಥಗಳ

ಪುಟ ತಿರುಗಿಸುವುದು ನನಗೆ ಬಲು ಪ್ರಿಯವಾಗಿತ್ತು. ಆದರೆ ಇತಾಲಿಯಾ ದಲ್ಲಿ ಅಗ್ಗದರದ ಪುಸ್ತಕಗಳ ಹಾವಳಿ ಕಡಿಮೆ. ಗ್ರಂಥಗಳ ಬೆಲೆ ಇಂಗ್ಲಿಷ್ ಪ್ರಕಟನೆಗಳಿಗಿಂತ ದುಬಾರಿ ಎಂದೇ ಹೇಳಬೇಕು. ಇದಕ್ಕೆ ಕಾರಣ ಇತಾಲಿ ಯನ್ ಗ್ರಂಥಗಳಿಗಿರುವ ಮಾರುಕಟ್ಟೆಯ ಮಿತಿ. ಅಲ್ಲದೆ ವಿಶ್ವವಿದ್ಯಾ ನಿಲಯ ಮಟ್ಟದ ಶಿಕ್ಷಣ ನಮ್ಮಲ್ಲಿಯಂತೆ ಸರ್ವತ್ರ ಪ್ರಚಾರಕ್ಕೆ ಇನ್ನೂ ಬಂದಿಲ್ಲ. ಬೌದ್ಧಿಕವಾಗಿ ಶಿಕ್ಷಣಕ್ಕೆ ಯೋಗ್ಯನಾದವನಿಗೆ ಮಾತ್ರ ವಿಶ್ವ ವಿದ್ಯಾನಿಲಯದಲ್ಲಿ ಸ್ಥಳಾವಕಾಶ ನೀಡಬೇಕು, ಶಿಕ್ಷಣವನ್ನು ಅಗ್ಗದ ಸಂತೆಯ ಸರಕಾಗಿ ಮಾಡಬಾರದು ಎಂಬ ಸಾಂಪ್ರದಾಯಿಕ ನೀತಿಯನ್ನು ಅಲ್ಲಿಯ ಕಮ್ಯುನಿಸ್ಟ್ ರಾಜಕೀಯಸ್ಥರೂ ಪುರಸ್ಕರಿಸಿದ್ದಾರೆ. ಹೀಗಾಗಿ ಆಂಗ್ಲ ಭಾಷೆಯ ದೇಶಗಳಿಗಿಂತ ಇತಾಲಿಯದಲ್ಲಿ ಗ್ರಂಥಗಳಿಗೆ ಬೇಡಿಕೆ ಕಡಮೆ ಇರಬೇಕು. ಆದರೆ ಇತಾಲಿಯದಲ್ಲಿ ಈಚೆಗೆ ಶ್ರೀಸಾಮಾನ್ಯನಿಗೆ ಶಿಕ್ಷಣವನ್ನು ನೀಡುವ ವಾರಪತ್ರಿಕೆ, ಮಾಸ ಪತ್ರಿಕೆಗಳಿಗೆ ಭಾರಿ ಉಚ್ಛ್ರಾಯ ಕಾಲ ಪ್ರಾಪ್ತಿಯಾಗಿದೆ. ಇಲಸ್ಟ್ರೇಟೆಡ್ ವೀಕ್ಲಿಯಂಥ ಹತ್ತಾರು ಚಿತ್ರ ಮಯ ಸಾಪ್ತಾಹಿಕಗಳನ್ನು ಬೀದಿಯಲ್ಲಿ ಮಾರಾಟಕ್ಕಿಡುತ್ತಿದ್ದರು. ಇವು ಗಳಲ್ಲಿ ಕೆಲವು ಮೊಸಲಾಗಿ ಇತಿಹಾಸಕ್ಕೊ, ಕೆಲವು ಭೂಗೋಲಕ್ಕೋ ಸಂಬಂಧಪಟ್ಟವು. ಪ್ರತ್ಯೇಕ ವಿಷಯಗಳನ್ನು ವಾರವಾರವೂ ಮುಂದು ವರಿಸಿಕೊಂಡು ಹೋಗುವ ವಿಶಿಷ್ಟ ಅಭಿರುಚಿಯ ಪತ್ರಿಕೆಗಳು ಇವು. ಆದರೆ ಇತಾಲಿಯನ್ ಸರಿಯಾಗಿ ಬಾರದ ನಮಗೆ ಇದರಿಂದ ಉಪ ಯೋಗವಿರಲಿಲ್ಲ. ಸಾಯಂಕಾಲ ವಿಮಾನದಲ್ಲಿ ಬರುವ ಲಂಡನ್ ಟೈಮ್ಸ್ ನಿಂದಲೇ ನಮಗೆ ಪ್ರಪಂಚದ ಸಂಬಂಧ ಕಲ್ಪಿತವಾಗುವುದು.

ಉಂಬರ್ತೊ ಗೆಲರಿ ಬಂದರಿಗೆ ತೀರ ಸಮೀಪವಿದ್ದುದರಿಂದ ಹಡಗಿ ನಿಂದಿಳಿದ ವಿದೇಶೀಯರಿಗೆ ಅದನ್ನು ತಪ್ಪಿಸಿಕೊಳ್ಳಲು ಸಾಧ್ಯವಿರಲಿಲ್ಲ. ಹೀಗಾಗಿ ಅಲ್ಲಿ ಜೇಡರಂತೆ ಬಲೆಬೀಸಿ ಕಾಯುತ್ತಿರುವ ಅಂಗಡಿಕಾರರ ಮೋಸ ದಿಂದ ತಪ್ಪಿಸಿಕೊಳ್ಳುವುದು ಕಷ್ಟ. ಕಫೆ ಅಥವಾ ಬಾರಿನ ಮುಂದುಗಡೆ ಕುರ್ಚಿ ಹಾಕಿರುತ್ತಾರೆ. ಬನ್ನಿ ಬನ್ನಿ ಎಂದು ಉಪಚರಿಸುತ್ತಾರೆ. ಕೂತರೆ ಬರೇ ಕೂತದ್ದಕ್ಕೆ ಚಾರ್ಜು ನೂರು ಲಿರೆ ಎಂದು ಬಿಡುತ್ತಾರೆ. ಒಮ್ಮೆ ಕಾಲು ಸೋತ ನಾನು ಕೂತು ಕಾಫಿಕುಡಿದ ತಪ್ಪಿಗೆ ಒಂದಕ್ಕೆ ನಾಲ್ಕು ತೆರಬೇಕಾಯಿತು. ಸೊವನೀರ ಅಂಗಡಿಗಳ ಬೆಲೆಪಟ್ಟಿಯಲ್ಲೂ ಅಷ್ಟೇ.

ಅಮೆರಿಕನ್ ಪ್ರವಾಸಿಗಳ ಕಿಸೆ ಬರಿದು ಮಾಡುವ ದರ. ವಿಯಾರೋಮದ ಅಂಗಡಿಗಳಲ್ಲಿ ವ್ಯಾಪಾರಕ್ಕೆ ತೊಡಗುವವನು ಒಂದೊ ಇತಾಲಿಯದ ಶ್ರೀಮಂತ ಅಥವಾ ಮೋಸಹೋದ ವಿದೇಶಿ ಪ್ರವಾಸಿ. ಮಧ್ಯಮ ವರ್ಗದ ಜನಕ್ಕೆ ಉಪಿಮ್, ಸ್ಟಾಂಡಾ, ರಿನಶೆಂತೆ ಎಂಬ ಮೂರು ಡಿಪಾರ್ಟಮೆಂಟ್ ಸ್ಟೋರ್‌ಗಳಿವೆ. ಇಷ್ಟೇ ವಿದ್ಯಾರ್ಥಿಗಳಾದ ನಾವು ನಿಮ್ನ ಮಧ್ಯಮ ವರ್ಗಕ್ಕೆ ಸೇರಿದವರಾಗಿ ನಮ್ಮ ಷಾಪಿಂಗ್ ಡಿಪಾರ್ಟ್ ಮೆಂಟ ಸ್ಟೋರಿಗೇ ಸಂದುದು. ನೋಟ್ ಬುಕ್ಕು, ಎಣ್ಣೆ, ಬ್ಲೇಡು, ಕೊಡೆ, ಅಂಗಿ ಸಾಬೂನು ಮುಂತಾದ ದಿನಬಳಕೆಯ ಸಾಮಾನು ನಮ್ಮ ದೇಶಕ್ಕಿಂತಲೂ ಅಗ್ಗ ದರದಲ್ಲಿ ಅಲ್ಲಿ ದೊರೆಯುತ್ತದೆ. ಗುಣದಲ್ಲಿ ಶ್ರೇಷ್ಠವಾಗಿರುತ್ತದೆ. ಬಡ ಮಧ್ಯಮ ವರ್ಗದವರ ಹೊಟ್ಟೆಗೆ ಬರೆ ಎಳೆಯುವ ವ್ಯಾಪಾರಿ ವರ್ಗವಾಗಲಿ, ಬರೆಯ ಮೇಲೆ ಉಪ್ಪನ್ನೆರಚುವ ಸರ್ಕಾರಿ ಸುಂಕ-ತೆರಿಗೆಯ ಹೊರೆಯಾಗಲಿ ಇಲ್ಲದೆ ಇತಲಿಯ ಶ್ರೀ ಸಾಮಾನ್ಯನ ಬದುಕು ಹನ್ನೆರಡು ವರ್ಷಗಳಲ್ಲಿ ಎಷ್ಟೋ ಸುಧಾರಿಸಿದೆ.

| ಉದಾ:– | | | ರೂ. ಪೈಸೆ |
|---|---|---|---|
| ತಲೆ ಎಣ್ಣೆ | ... | ... | 0—75 |
| 5 ಬ್ಲೇಡು | ... | ... | 1—00 |
| ಸ್ನಾನದ ಸಾಬೂನು (ದೊಡ್ಡದು) | | ... | 0—75 |
| ಟೂತ್ ಪೇಸ್ಟ್ (ದೊಡ್ಡದು) | | ... | 1—25 |
| ಟೆರಿಲಿನ್ ಶರ್ಟು | ... | ... | 16—00 |
| ಉಣ್ಣೆಯ ಸೂಟು | ... | ... | 65—00 |
| ಹಣ್ಣಿನ ರಸ | ... | ... | 0—30 |

ಅರ್ಥಶಾಸ್ತ್ರದಲ್ಲಿ ಯಾವುದಾದರೂ ಸರಕನ್ನು ಬಹುಲ ಪ್ರಮಾಣ ದಲ್ಲಿ ( Mass production ) ತಯಾರು ಮಾಡಿದರೆ ದರ ಇಳಿಯು ತ್ತದೆನ್ನುವುದು ಸಾಮಾನ್ಯ ಸೂತ್ರವಾಗಿದ್ದರೂ, ಇದನ್ನು ಪಾಲಿಸಲಾಗದ ದೇಶ ನಮ್ಮ ಭಾರತ. ನಮ್ಮಲ್ಲಿ ವ್ಯಾಪಾರಿಗಳೆಷ್ಟು ತೃಷ್ಣೆಯವರೊ ಅವರಿಗೂ ಮಿಗಿಲಾಗಿ ಸರಕಾರಕ್ಕೆ ನೀರಡಿಕೆ. ಶ್ರೀಸಾಮಾನ್ಯನ ಬದುಕಿನಲ್ಲಿ – ಅದರಲ್ಲಿಯೂ ವಿಶೇಷ ಅಭಿರುಚಿಗಳುಳ್ಳ ಮಧ್ಯಮ ವರ್ಗದ ಬದುಕಿ ನಲ್ಲಿ – ಸಂತೋಷ ಮತ್ತು ಉಲ್ಲಾಸವನ್ನೂಡುವ ಯಾವ ಉತ್ಪಾದನಾ

ಕಾರ್ಯಕ್ರಮಕ್ಕೂ ಸರಕಾರದ ಕರಭಾರ. ಇತಲಿಯಲ್ಲಿ ಇವೆರಡೂ ಇಲ್ಲ. ಕಚ್ಚಾ ಮಾಲುಗಳಿಗೆ ಸುಂಕವೂ ಕಡಿಮೆ, ತಯಾರಾದ ಸರಕುಗಳಿಗೆ ಸರ್ಕಾರದ ಹೊರೆಯೂ ಕಡಿಮೆ. ಅಲ್ಲಿನ ದರಗಳ ಬಗ್ಗೆ ಇನ್ನೊಂದು ಮಾತು ಹೇಳಬೇಕು. ವಿದೇಶೀಯ ಹಣವನ್ನು ರುಪಾಯಿಗೆ ಪರಿವರ್ತಿಸುವಾಗ ಆದೇಶದ ವೇತನ ದರವನ್ನು ನಾವು ಲೆಕ್ಕಕ್ಕೆ ತೆಗೆದುಕೊಳ್ಳಬೇಕಾಗುತ್ತದೆ. ಸಾಮಾನ್ಯ ಕೂಲಿಯ ದರ ಇತಾಲಿಯದಲ್ಲಿ ದಿನಕ್ಕೆ 12 ರುಪಾಯಿ. (ನಮ್ಮಲ್ಲಿ 4 ರೂಪಾಯಿ ಎಂದಿರಿಸಿಕೊಳ್ಳೋಣ) ನಮ್ಮ ಇನ್‌ಸ್ಟಿಟ್ಯೂಟಿನ ಪ್ರತಿಯೊಬ್ಬ ಅಧಿಕಾರಿಗೂ ಸ್ವಂತ ಕಾರಿನ ಬಳಕೆ ಸಾಧ್ಯ. ಫಿಯಟ್ 500ರ ಬೆಲೆ ರೂ. 3,500/- 600ರ ಬೆಲೆ 4,500/-. ನಮ್ಮ ದೇಶದಲ್ಲಿ ತಯಾರಾಗುವ 1,100ರ ಮಾದರಿಯ ಬೆಲೆ 6,500/- ಪ್ರತಿಯೊಬ್ಬ ಇತಾಲಿಯನ್ ಕಾರ್ಮಿಕನ ಮನೆಯಲ್ಲಿ ಟೆಲಿವಿಶನ್ ಪ್ರವೇಶ ಮಾಡಬಹುದಾಗಿತ್ತು. ಸತ್ಯಮೇವ ಜಯತೇ ಎನ್ನುವ ಈ ಭಾರತದಲ್ಲಿ ಅನ್ಯಾಯವಾಗಿ ಧನಾರ್ಜನೆ ಮಾಡಿದ ಜನವರ್ಗಕ್ಕೆ ಮಾತ್ರವೇ ಪ್ರಪಂಚದ ಸುಖ ಸೌಕರ್ಯಗಳ ಮೊಸಲು ಅನುಭವ. ಉಳಿದ ಬುದ್ಧಿಜೀವಿಗಳಿಗೂ. ಶ್ರಮ ಜೀವಿಗಳಿಗೂ ಎರಡು ದಶಕದ ಕತ್ತೆ ಚಾಕರಿಯೇ ಪರಮ ಲಾಭ.

ಅಗ್ಗದ ಸರಕುಗಳನ್ನು ಮಾರುವ ಡಿಪಾರ್ಟಮೆಂಟ್ ಸ್ಟೋರುಗಳು ಪ್ರತಿ ವಠಾರಕ್ಕೆ ಎರಡು ಮೂರರಂತೆ ಊರೆಲ್ಲ ಹರಡಿಕೊಂಡಿವೆ. ಅಲ್ಲಿ ಹಗಲೆಲ್ಲ ಜನಸಂದಣಿ ಇರುತ್ತಿದ್ದುದರಿಂದ ಬೇಸರವನ್ನು ಕಳೆಯಲು ಸ್ಟೋರುಗಳ ಸಂದರ್ಶನವನ್ನೂ ಇಟ್ಟುಕೊಂಡಿದ್ದೆ. ರಜಾದಿನಗಳಲ್ಲಿ ಮುಂಜಾನೆ ಇಲ್ಲವೆ ಸಾಯಂಕಾಲ ಚೆನ್ನಾಗಿ ಬಟ್ಟೆ ಬರೆ ಧರಿಸಿದ ಮಕ್ಕಳನ್ನೂ ಅವುಗಳ ಕಿರಿಚಾಟವನ್ನೂ ಅಲ್ಲಿ ನೋಡಬಹುದಾಗಿತ್ತು. ಸಾಲಂಕೃತರಾದ ಚೆಲುವೆಯರನ್ನೂ ಗೃಹಿಣಿಯರ ಕೈಹಿಡಿದು ಸಾಗುವ ಹಸುಳೆಗಳನ್ನೂ ಆ ಹೊತ್ತಿಗೆ ಎಲ್ಲೆಲ್ಲೂ ನೋಡಬಹುದು. ಭಾರತೀಯರಂತೆ ಮಕ್ಕಳನ್ನು ಕಟ್ಟಿಕೊಂಡೇ ತಿರುಗುವ ಸಾಂಪ್ರದಾಯಿಕ ಕುಟುಂಬ ಪದ್ಧತಿ ಪ್ರಗತಿಮುಖಿ ಇತಲಿಯಲ್ಲಿ ಇನ್ನೂ ಉಳಿದುಕೊಂಡಿದೆ. ಉತ್ತರ ಯುರೋಪಿನಲ್ಲೂ. ಆಂಗ್ಲ ದೇಶಗಳಲ್ಲೂ ಇದು ಓಂಜರಿದು ಮಕ್ಕಳ ಪ್ರಪಂಚವೇ ಬೇರೆ, ಅವರ ಆರೈಕೆಗೆ ಜನಗಳೇ ಬೇರೆ – ಇದು ಜೀವನಕ್ರಮವಾಗಿದೆ. ಇತಾಲಿಯದ ಜನಕ್ಕೆ ಮಕ್ಕಳೆಂದರೆ ಜೀವ. ಚಳಿಗಾಲದಲ್ಲಿ ಎಂದಾದರೂ

ಬಿಸಿಲು ಬಿದ್ದರೆ ಮಕ್ಕಳನ್ನು ವಿಲಾಮಕಮ್ಯುನಾಲೆ ಉಪವನಕ್ಕೋ, ಕಡಲ ಕರೆಗೋ, ಪಸ್ಸೆಜ್ಯಾತಕ್ಕೋ, ಎಳೆದುಕೊಂಡು ಅವಸರದಿಂದ ತೆರಳುವ ಸ್ತ್ರೀಪುರುಷರ ಗುಂಪನ್ನು ನೋಡಬಹುದು. ಚಳಿ ದೇಶಗಳಲ್ಲಿ ಚಳಿಗಾಲವನ್ನು ಕಳೆಯುವುದು ಸುಲಭವಲ್ಲ; ಸಾಲದ್ದಕ್ಕೆ ಭೂಮಧ್ಯ ಸಾಗರದ ಕರಾವಳಿಯಲ್ಲಿ ಮಳೆ ಬೀಳುವುದು ಚಳಿಗಾಲದಲ್ಲೆ. ಕೊರೆಯುವ 'ತೀರವೆಂತೊ'ಗೆ (ಕೊರೆ ಚಳಿ) ಹೊಯ್ಯುವ ಮಳೆ ಸೇರಿಕೊಂಡರೆ ಎಲ್ಲರೂ ಅವರವರ ಗುಬ್ಬಚ್ಚಿ ಗೂಡಿನಲ್ಲೇ ಹಗಲುರಾತ್ರಿ ಕಾಲಹರಣ ಮಾಡಬೇಕು. ಉಷ್ಣಕಾರಕ ಉಪಕರಣಗಳಿದ್ದ ಮನೆಯಲ್ಲಿ ಹೇಗೂ ಇರಬಹುದು, ಇಲ್ಲದಲ್ಲಿ ಜನ ಸಂಕಟಪಡುತ್ತಿರಬೇಕು. ಇನ್ವೇ ತೊಡಗಿದ ದಿನ ಮೋಸ್ತ್ರದ ಕೇಂದ್ರೀಯ ಉಷ್ಣ ವ್ಯವಸ್ಥೆ ಕೆಟ್ಟು ಹೋಗಿತ್ತು. ಅಂದಿನ ಚಳಿಯ ನೆನಪು ನನಗಿನ್ನೂ ಮರೆತಿಲ್ಲ. ಸ್ವೆಟರು, ಕೋಟು, ಓವರ್ಕೋಟು, ಮಫ್ಲರು ಹೀಗೆ ನಾಲ್ಕು ಕುರಿಗಳನ್ನು ಹೊದ್ದುಕೊಂಡರೂ ಮಳೆಗಾಲದ ಬಾವಿಯ ಕಪ್ಪೆಯಂತೆ ಮೈಯೆಲ್ಲಾ ತಣ್ಣಸಾದ ಏಕಾಗ್ರ ಅನುಭವ. ಚಳಿಗೆ ಬಿಸಿಯಾದ್ದು ಗಂಟಲಿಗೆ ಬೀಳದೆ ಬಾಯಿ ತೆರೆಯುವುದೂ ಬೇಡವಾಗುತ್ತದೆ. ಇನ್ವೇ ಬಸ್ಸು, ಕಾರು, ರೈಲು, ಉಷ್ಣೋಪಕರಣವಿಲ್ಲದೆ ಹೊರಡುತ್ತಿರಲಿಲ್ಲ. ರೈಲಿನ ಎರಡನೆಯ ವರ್ಗಕ್ಕೂ ಹಿತಮಿತವಾದ ಉಷ್ಣ ವ್ಯವಸ್ಥೆ ಮಾಡಿದ್ದಾರೆ. ಬೀಸಿನೀರಿನ ನಾಲ್ಕು ಕೊಳವೆಗಳಿಂದ ನಮ್ಮ ಲೇಪೊಂತಾನೆ ಕೊಠಡಿಗೂ ಉಷ್ಣ ವ್ಯವಸ್ಥೆ ಜೋಡಿಸಿದ್ದರು. ಆದರೆ ಪೂರ್ತಿ ಬಿಸಿಯಾಗುವ ವರೆಗೆ ಕೊಠಡಿಯ ಉಷ್ಣ 32°Fನ ಸಮೀಪವೇ ಹೊಯ್ದಾಡುತ್ತಿರಬೇಕು. ಟೂರಿಸ್ಟ್ ಬಸ್ಸುಗಳಿಗೆ ಉಷ್ಣ ವ್ಯವಸ್ಥೆ ಇದ್ದೇ ಇರುತ್ತಿತ್ತಾದರೂ ನೇಪಲ್ಸಿನಲ್ಲಿ ನಿತ್ಯವೂ ಓಡುವ ಸಿಟಿ ಬಸ್ಸುಗಳಿಗೆ ಈ ಪುಣ್ಯವಿಲ್ಲ. ಜನರ ದೇಹದಾರ್ಢ್ಯವನ್ನು ಪರೀಕ್ಷೆ ಮಾಡಲೆಂದೇ ಇವು ನಿರ್ಮಿತವಾಗಿದ್ದುವು. ಆದರೆ ನೇಪಲ್ಸಿನಲ್ಲಿ – ಅಖಿಲ ಇತಾಲಿಯದಲ್ಲೂ – ಬಸ್ಸಿನ ಜನಸಂದಣಿಯೇ ಸಾಕಷ್ಟು ಶಾಖವನ್ನು ತಯಾರಿಸುತ್ತಿದ್ದಿತಾದ್ದರಿಂದ ಒಮ್ಮೆ ಒಳ ಹೊಕ್ಕರೆ ಚಳಿ ನಶಿಸುವುದು. ಒಳ ಹೋಗುವುದೇ ಒಂದು ದೊಡ್ಡ ಸಮಸ್ಯೆ. ಇತಾಲಿಯನ್ ಜನರಿಗೆ ಕ್ಯೂ ಎಂದರೇನೆಂದೇ ತಿಳಿಯದು. ಬಸ್ ನಿಂತ ತಕ್ಷಣ ಸ್ತ್ರೀ ಪುರುಷ ಭೇದವಿಲ್ಲದೆ ಎಲ್ಲರೂ ನುಗ್ಗಬೇಕು. ಇದನ್ನೇ ಮಹಾನಂದವೆಂದು ಅತಿ ಹೆಚ್ಚು ನುಗ್ಗಾಟವಿರುವ ಸಮಯ.

ಬಸ್ಸು, ದಾರಿಯನ್ನು ಕಾದುಕೊಂಡಿರುವ ಮಹಾನುಭಾವರೂ ನಮ್ಮಲ್ಲಿ ದ್ದರು. ನಾನು 'ಅನ್‌ರೊಮ್ಯಾಂಟಿಕ್' ಎಂಬುದು ಅವರ ನಿಶ್ಚಿತ ತೀರ್ಮಾನ. ಏನೇ ಆಗಲಿ ಈ ಗೊಂದಲದ ಬದಲು ನಡೆದುಕೊಂಡೇ ನಾನು ಹೋಟಲಿಗೆ ಮರಳುತ್ತಿದ್ದೆ. ಮಳೆಯೋ ಚಳಿಯೋ ವಿಪರೀತ ಕ್ಕಿಟ್ಟುಕೊಂಡ ಒಂದೇ ಎರಡು ಸಲ ನಾನೂ ನುಗ್ಗಿದ್ದುಂಟು. ಆಗ ಒಳಗಡೆ ಆಚಂಚಲನಾಗಿ ನಿಂತುಕೊಳ್ಳುವುದು ಯಾವ ವಿಶ್ವಾಮಿತ್ರನಿಗೂ ಸಾಧ್ಯವಾಗಲಾರದು. ಇಟಾಲಿಯನ್ ಬಸ್‌ಗಳಲ್ಲಿ ಕೇವಲ 20–25 ಕೂರುವ ಸೀಟುಗಳು. ನಿಲ್ಲುವ ಸೀಟುಗಳಿಗೆ ಮಿತಿಯೆ ಇಲ್ಲ. ಟಿಕೇಟು ಕೊಡುವ ಕಂಡಕ್ಟರ ಸ್ಥಾಣುವಿನಂತೆ ಒಂದೆಡೆ ಕೂತು ದರ ವಸೂಲಿ ಮಾಡುತ್ತಾನೆ. ನೀವು ಟಿಕೇಟ ಹಿಡಿದುಕೊಂಡು ಕೂಡಲೆ ಜನಸಂದಣಿಯ ನಡುವೆ ಭಾಣದಂತೆ ತೂರಿ ಹೊರಗೆ ಹೊರಡುವ ಬಾಗಿಲನ್ನು ತಲಪ ಬೇಕು. ಇಲ್ಲವಾದರೆ ನಿಮಗೆ ವಿಮೋಚನೆ ಇಲ್ಲ. ಬಸ್ಸಿನಲ್ಲಿ ಪಯಣಿಸ ಬೇಕಾದರೆ ನುಗ್ಗುವ ಕಲೆಯಲ್ಲಿ ನೀವು ಮೊದಲು ಪರಿಣತರಾಗಲೇಬೇಕು.

ಇಟಾಲಿಯನ್ ಭಾಷೆ ಬರದಿದ್ದರೆ ಇಟಾಲಿಯದಲ್ಲಿ ಟ್ಯಾಕ್ಸಿಗಳನ್ನು ಏರಬಾರದು. ಯಾಕೆಂದರೆ ಅಲ್ಲಿ ಮೀಟರು ಕೇವಲ ಅಲಂಕಾರಕ್ಕಾಗಿ ಮಾತ್ರ ಇಟ್ಟಿರುತ್ತಾರೆ. ಕೆಳಗಿಳಿದಾಗ ಕೇಳಿದಷ್ಟು ಹಣ ಕೊಡಲು ಶಕ್ತ ರಾದವರು ಮಾತ್ರ ಟ್ಯಾಕ್ಸಿಗಳನ್ನು ಬಳಸಬಹುದು. ನೀವು ಚರ್ಚೆಗಿಳಿ ದಿರೊ, ಉತ್ತಮವಾದ ಇಟಾಲಿಯನ್ ಭಾಷಾ ಶೈಲಿಯಲ್ಲಿ ಸಮೀಪ ದವರಿಗೆಲ್ಲ ಕೇಳುವಂತೆ ಡ್ರೈವರ್‌ನ ಮಂಗಳಾರತಿ ತೊಡಗೀತು. ಕಸ್ಟಮಿ ನಿಂದ ನನ್ನ ಬೃಹತ್ ಟ್ರಂಕನ್ನು ಹೇರಿಸಿಕೊಂಡು ಬರಲು ಒಂದೂವರೆ ಮೈಲಿ ದೂರಕ್ಕೆ ನಾನು 12 ರೂಪಾಯಿ ತೆತ್ತೆ. ರೋಮ್‌ನಲ್ಲಿ ಎರಡು ಮೈಲು ದೂರದ ನಮ್ಮ ಪ್ರೊಫೆಸರ್ ಮನೆಗೆ ತಲಪಲು 16 ರುಪಾಯಿ ತೆತ್ತೆ. ಈ ಎರಡು ಸಂದರ್ಭಗಳನ್ನು ಬಿಟ್ಟು ಬೇರೆಂದೂ ನಾನು ಇಟಾಲಿ ಯನ್ ಟ್ಯಾಕ್ಸಿಯ ನೆರವು ಪಡೆದದ್ದಿಲ್ಲ. ಟ್ಯಾಕ್ಸಿಗಳನ್ನು ನೀವು ನಡುದಾರಿ ಯಲ್ಲಿ ಹಿಡಿಯುವಂತಿಲ್ಲ – ಅವು ನಿಲ್ಲುವ ಸ್ಥಳಕ್ಕೆ ಹೋಗಬೇಕು, ಅಥವಾ ಅಲ್ಲಿಗೆ ಫೋನ್ ಮಾಡಿ ತರಿಸಿಕೊಳ್ಳಬೇಕು. ಅವು ಖಾಲಿ ಮರಳುತ್ತಿದ್ದರೂ ಅಮೆರಿಕದಂತೆ ಬೇಕಾದಲ್ಲಿ ನಿಲ್ಲಿಸುವ ಸ್ವಾತಂತ್ರ್ಯ ಗಿರಾಕಿಗೆ ಇಲ್ಲ.

ಇಟಾಲಿಯನ್ ರೈಲುಗಳ ಬಗ್ಗೆ ಎರಡು ಮಾತು: ಯುರೋಪಿನಲ್ಲಿ

ಸ್ವಿಝರ್ಲೆಂಡ್, ಇತಲಿ ಈ ಎರಡು ದೇಶಗಳ ಹೊರತು, ಉಳಿದ ದೇಶ ಗಳಲ್ಲಿ ರೈಲ್ವೆಗೆ ಗಿರಾಕಿ ಇಳಿದು ಹೋಗಿ, ರೈಲ್ವೇ ಒಂದು ನಷ್ಟದ ಇಲಾಖೆ ಯಾಗಿದೆ. ಆದರೆ ಇತಲಿಯಲ್ಲಿ ಅಗ್ಗ ಬೆಲೆಯ ಕಾರಿನ ಯುಗ ಆರಂಭ ವಾದರೂ ಇತಲಿಯ ಭೌಗೋಲಿಕ ವೈಶಿಷ್ಟ್ಯದ ದೆಶೆಯಿಂದಲೂ, ನಿತ್ಯವೂ ಉತ್ತರ ಯುರೋಪಿನ ಇತರ ದೇಶಗಳಿಗೆ ತೆರಳುವ ವಲಸೆಗಾರರು ರೈಲನ್ನು ಬಳಸುತ್ತಿರುವುದರಿಂದಲೂ, ಅಸಂಖ್ಯಾತ ವಿದೇಶೀಯ ಪ್ರವಾಸಿಗಳ ದೆಸೆಯಿಂದಲೂ ಇತಾಲಿಯನ್ ರೈಲಿನ ಆರ್ಥಿಕ ಪರಿಸ್ಥಿತಿ ಉತ್ತಮ ಮಟ್ಟದಲ್ಲಿದೆ. ಮುಖ್ಯಲೈನುಗಳೆಲ್ಲ ವಿದ್ಯುತ್ಕರಣಕ್ಕೆ ಒಳಪಟ್ಟಿವೆ. ನೇಪಲ್ಸಿನಿಂದ ರೋಮಿಗೂ, ರೋಮಿನಿಂದ ಮಿಲಾನೋ, ತೊರಿನೋ ಗಳಿಗೂ ಹೋಗುವ ರೈಲುದಾರಿ ಇತಾಲಿಯನ್ ರೈಲ್ವೆಯ ಜೀವನಾಡಿ. ನೇಪಲ್ಸಿನಿಂದ ರೋಮಿಗೆ ೧೨೦ ಮೈಲು; ಎರಡನೇ ವರ್ಗದದರ ೧೫೦೦ ಲೀರೆ (=೧೨ ರೂಪಾಯಿ) ಭಾರತೀಯ ರೈಲ್ವೆಗಿಂತ ಏನೂ ಹೆಚ್ಚಲ್ಲ; ಆದರೆ ಮೂರನೆ ವರ್ಗ ಮಾತ್ರ ಇತಲಿಯಲ್ಲಿಲ್ಲ. ಯುರೋಪಿನಲ್ಲಿ ಬ್ರಾಡ್ ಗೇಜಿಲ್ಲ. ಸ್ಟ್ಯಾಂಡರ್ಡ್ ಗೇಜ್ – ಇದು ನಮ್ಮ ಮೊಟರ್ ಗೇಜಿನಿಂದ ತುಸು ದೊಡ್ಡದು. ಬ್ರಾಡ್‌ಗೇಜಿಗಿಂತ ಚಿಕ್ಕದು. ಎರಡನೇ ವರ್ಗವಾದರೂ ನಮ್ಮಲ್ಲಿನ ಪ್ರಥಮ ವರ್ಗವನ್ನು ನಾಚಿಸೀತು. ಮಿದುವಾದ ಆಸನ, ವಿಶಾಲವಾದಗಾಜಿನ ಕಿಟಕಿ, ಉಷ್ಣ ವ್ಯವಸ್ಥೆ, ಹುಡುಕಿದರೂ ಧೂಳು – ಮಸಿ ಸಿಗಲಾರದು. ನೀವು ಕೂತಿದ್ದರೆ ಸರ್ಕೊಳ್ಳಿಪ್ಪೋ ಎಂದು ಬಲಾತ್ಕಾರ ದಿಂದ ನೂಕಿ ನುಗ್ಗುವ ಜನಸ್ತೋಮವಿಲ್ಲ. ಪ್ಲಾಟಫಾರಮ್‌ನಲ್ಲಿ ತಿಂಡಿ ತೀರ್ಥ ಮಾರುವವರ ಒದರಾಟ, ಚೀರಾಟಗಳಿಲ್ಲ. ನಡು ನಿಲ್ದಾಣಗಳಲ್ಲಿ ಹತ್ತುವ ಇಳಿಯುವ ಜನಸಂದಣಿಯೂ ಕಾಣಿಸದು. ಇತಾಲಿಯನ ಕಾಫಿ ಯಂತೆ ರೈಲಿನಲ್ಲಿಯೂ ಹಲವಾರು ತರ: ಎಚ್ಚಲರಾತೊ, ದಿರೆತ್ತೊ, ದಿರೆತ್ತಿಸ್ಸಿಮೋ, ರಾಪಿದೋ, ಲುಸ್ಸೋ, ಹೀಗೆ ಐದು. ಎಚ್ಚಲರಾತೊ ವಿಪರ್ಯಾಸ ನಾಮಕರಣಕ್ಕೆ ಉದಾಹರಣೆ, ನಿಜವಾಗಿಯೂ ಇದು ನಮ್ಮ ನೀರು ಕಂಡಲ್ಲಿ ನಿಲ್ಲುವ ಕುದುರೆ – ಪಾಸಿಂಜರ. ದಿರೆತ್ತೊಗೆ ಕೆಲವೇ ನಿಲು ಡೆಗ. ದಿರೆತ್ತಿಸ್ಸಿಮೋ ನಮ್ಮ ಎಕ್ಸ್‌ಪ್ರೆಸ್ ಬಂಡಿ; ರಾಪಿದೋ ನಿಲ್ಲದೆ ಒಂದೇ ಗುರಿಯನ್ನು ತಲಪುತ್ತದೆ. ಲುಸ್ಸೋ – ಲಕ್ಸುರಿ ಬಂಡಿ – ಪ್ರಥಮ ವರ್ಗದ ಅಮೆರಿಕನ್ ಪುಲ್‌ಮ್ಯಾನ್ ಮಾದರಿ. ಇತಲಿಯಲ್ಲಿ ರೈಲಿನಲ್ಲಿ ನಿಗ್ರೈಗೆ

ಭಾರಿ ಬೆಲೆ. ಪ್ರಥಮ ವರ್ಗದ ಟಿಕೇಟಿನ ಎರಡು ಪಾಲಷ್ಟು ಇದ್ದರೂ ಸರಿಯೆ. ಆದರೆ ೬೦ ಮೈಲು ವೇಗದಲ್ಲಿ ಹೋಗುವ ರೈಲಿನಲ್ಲಿ ಸಾಮಾನ್ಯ ವಾಗಿ ನಿದ್ದೆಯ ವೇಳೆಗೆ ನೀವು ಮನೆ ಮುಟ್ಟುವುದರಿಂದ ಕೂಪೆತ್ತೆಗೆ (ನಿದ್ದೆಯ ಸುಪ್ಪತ್ತಿಗೆ) ಗಿರಾಕಿ ಕಡಮೆ. ವಿದೇಶಿ ಪ್ರವಾಸಿಗಳೇ ಇದರ ಗಿರಾಕಿ ಯಾಗಿರುವುದರಿಂದ ರೈಲು ನಿಲ್ದಾಣದಲ್ಲಿ ನಿದ್ದೆಯ ಟಿಕೇಟು ಸಿಗುವುದಿಲ್ಲ. ಪ್ರವಾಸಿ ಸಂಸ್ಥೆಗಳು, ಹೋಟೆಲುಗಳಲ್ಲಿ ಮೊದಲಾಗಿ ತಿಳಿಸಿ ಇದರ ವ್ಯವಸ್ಥೆ ಮಾಡಿಕೊಳ್ಳಬೇಕು. ರೈಲು ಹೊರಡುವ ಮೊದಲು ಕ್ಯಾಂಟೀನಿನಲ್ಲಿ 'ಪಿಜ್ಜಾ' (ಚಪಾತಿ) ತಿಂದು ಹೊರಟರೆ ನಡುದಾರಿಯಲ್ಲಿ ಎಲ್ಲಿಯೂ ಊಟ ತಿಂಡಿಗೆ ಜನ ಕಾತರಿಸರು. ಪ್ರಯಾಣವು ದೀರ್ಘವಾಗಿದ್ದರೆ ಕೈಯಲ್ಲಿ ತಂದ ತೀನಿಯಿಂದಲೇ ತೃಪ್ತರಾಗುವರು. ಪ್ರಯಾಣದ ಕಾಲದಲ್ಲಿಯೂ ಅಚ್ಚು ಕಟ್ಟಾಗಿ ಪೊಗದಸ್ತಾಗಿ ಭೋಜನ ಮಾಡಬೇಕೆಂಬ ಆಸೆ ಭಾರತೀಯರ ಜನ್ಮ ಸಿದ್ಧ ಹಕ್ಕುಗಳಲ್ಲಿ ಒಂದಾಗಿರಬಹುದೇ? (ಕಂಡಲ್ಲಿ ಹೋದಲ್ಲಿ ಮನೆ ಯಂತೆ ಉಣಬೇಕೆಂಬ ಈ ಹಕ್ಕನ್ನು ನಮ್ಮ ಘಟನೆಯಲ್ಲಿ ಸೇರಿಸದೆ ಆದೇಕೆ ಮರೆತುಬಿಟ್ಟರೋ ತಿಳಿಯದು) ಇಷ್ಟು ಮುಖ್ಯ ಮಾರ್ಗದ ಸರ್ಕಾರಿ ರೈಲುಗಳ ಕುರಿತು ಹೇಳಿದೆ. ಇನ್ನು ಅಪ್ರಧಾನ ಲೈನುಗಳಲ್ಲಿ ಖಾಸಗೀ ರೈಲು ಓಡಿಸುವುದುಂಟು. ನೇಪಲ್ಸಿನ ವೊಮೆರೋ ಗುಡ್ಡದ ತುದಿಯಿಂದ ಪೊಸಿಲ್ಲಿಪೋ ಕರಾವಳಿಗೆ (೧೦೦೦ ಅಡಿ ಇರಬಹುದು) ೪೫° ಯಲ್ಲಿ ಇಳಿ ಯಲು ಫನಿಕುಲಾರೆ ಎಂಬ ಜಾರು ರೈಲಿದೆ. ವೆಸುವಿಯಸ್ ನೋಡಲು ಸರ್ಕಮ್ ವೆಸುವಿಯಾನಾ ಎಂಬ ಪುಟ್ಟ ರೈಲಿದೆ. ಇವು ಖಾಸಗೀ ಕಂಪೆನಿ ಗಳು. ಇವುಗಳ ಸಂಘಟನೆಯಲ್ಲಿ ದಕ್ಷತೆ ಇದ್ದಹಾಗೆ ನನಗನಿಸಲಿಲ್ಲ.

## ೧೦ ಕಲೆಯ ನೆಲೆ

ನಾಪೊಲಿ. ದಕ್ಷಿಣ ಇತಲಿಯ ರಾಜಕೀಯ ಕೇಂದ್ರ ಹೇಗೋ ಹಾಗೆ ಸಂಸ್ಕೃತಿಯ ರಾಜಧಾನಿಯೂ ಆಗಿರುವುದು ಇತಿಹಾಸಿಕ ಸತ್ಯ. ನೇಪಲ್ಸಿ ನಲ್ಲಿ ರಾಜ್ಯವಾಳಿದ ಡ್ಯೂಕರೂ, ಬೂರ್ಬನ ರಾಜಕುಮಾರರೂ ನಗರ ದೊಳಗೂ ಅದರ ಸುತ್ತುಮುತ್ತಲೂ ಪ್ರಖ್ಯಾತವಾದ ಅರಮನೆಗಳನ್ನು ನಿರ್ಮಿಸಿ ಆವಂದಿನ ಕಲಾಕಾರರ ಕೈಯಿಂದ ಚಿತ್ರಗಳನ್ನು ಬರೆಯಿಸಿ

ಶಿಲ್ಪವನ್ನು ಕೊರೆಯಿಸಿ ವಾಸ್ತುವನ್ನು ವಿರಚಿಸಿ ಈ ಪ್ರದೇಶ ಪ್ರವಾಸಿಗಳ ಸ್ವರ್ಗವಾಗುವಂತೆ ಮಾಡಿದ್ದಾರೆ. ೧೮೬೮ರಲ್ಲಿ ಈ ಅರಸರ ಉತ್ಕರ್ಷಿಣಿಯ ಕಾಲದ ಕಟ್ಟಕೊನೆ. ಕಾವೂರ್, ಗರಿಬಾಲ್ಡಿ, ಮೆಝಿನಿ ಮುಂತಾದ ರಾಷ್ಟ್ರೀಯ ನಾಯಕರು ಇತಾಲಿಯದ ಪಾಳೆಗಾರಿಕೆಯ ವಿರುದ್ಧ ಬಂಡಾಯ ಹೂಡಿ ಇತಾಲಿಯಾದ ಒಕ್ಕೂಟ ಗಣರಾಜ್ಯವನ್ನು ನಿರ್ಮಿಸಿದ ಮೇಲೆ ಕಾಲಕ್ರಮೇಣ ಅರಮನೆಗಳ ಉಸ್ತುವಾರಿ ಸ್ಥಾನೀಯ ಸರ್ಕಾರದ ಕೈಸೇರಿತು. ಅರಮನೆಗಳು ವಸ್ತುಸಂಗ್ರಹಾಲಯಕ್ಕೆ ಸೇರಿದ ಪದಾರ್ಥಗಳಾದ್ದು ಮಾತ್ರವಲ್ಲ ಗಾತ್ರದ ದೃಷ್ಟಿಯಿಂದ ಅವು ಸಾರ್ವಜನಿಕ ಸೊತ್ತಾಗದೆ ಉಪಾಯವಿರಲಿಲ್ಲ. ಕಸೆರ್ತದ ಬೃಹತ್ ಅರಮನೆಯಲ್ಲಿ ಈಗ ಇತಾಲಿಯನ್ ಸರ್ಕಾರ ಕೇಂದ್ರೀಯ ಆಡಳಿತಗಾರರ ತರಬೇತಿ ಶಾಲೆಯನ್ನು ನಡೆಸುತ್ತಿದೆ. ಕಾಪೊದಿಮೊಂತೆ (ಗಿರಿಶಿಖರ) ಅರಮನೆಯಲ್ಲಿ ೧೨೦ ಕೊಠಡಿಗಳ ವಸ್ತುಸಂಗ್ರಹಾಲಯ ಹುಟ್ಟಿಕೊಂಡಿದೆ. ರಾಷ್ಟ್ರೀಯ ಮ್ಯೂಸಿಯಮ್ ಎಂಬ ಶಿಲ್ಪಕ್ಕೆ ಮೊಸಲಾದ ವಸ್ತುಸಂಗ್ರಹಾಲಯದ ಕಟ್ಟಡವೂ ಹಿಂದೊಮ್ಮೆ ಅರಮನೆಯಾಗಿದ್ದುದೇ. ಇಲ್ಲಿನ ವಸ್ತುಸಂಗ್ರಹಾಲಯದಲ್ಲಿ ಬೂರ್ಬನ ದೊರೆ ಇಮ್ಮಡಿ ಚಾರ್ಲ್ಸ್ ತನ್ನ ರಾಜವಂಶದ ಪಿತ್ರಾರ್ಜಿತ ಸೊತ್ತುಗಳನ್ನು ಶೇಖರಿಸಿದ್ದನಂತೆ ೧೯ನೆಯ ಶತಮಾನದಲ್ಲಿಯೂ ತದನಂತರವೂ ದೊರೆತ ರೋಮನ್ ಮತ್ತು ಗ್ರೀಕ್ ಪ್ರಾಚ್ಯ ವಸ್ತುಗಳನ್ನು ಈ ಮೂಲ ಸಂಗ್ರಹಾಲಯಕ್ಕೆ ಸೇರಿಸಿದ ಮೇಲೆ ಇದು ಇತಾಲಿಯದ ಅತಿ ಪ್ರಧಾನ ಸಂಗ್ರಹಾಲಯಗಳಲ್ಲಿ ಒಂದೆನಿಸಿದೆ. ಇಲ್ಲಿನ ಚಿತ್ರಶಾಲೆಯಲ್ಲಿ, ಬ್ರೂಹೆಲ್, ಮಸಾಚೋ, ತಿತಿಯನ್, ವೆಲಾಸ್ಕೇ. ಎಲ್‌ಗ್ರೆಕೊ, ಮುಂತಾದ ನವೋದಯ ಚಿತ್ರಕಾರರ ಅನುಪಮ ಕೃತಿಗಳ ಸಂಚಯವಿದೆ. ಪೇಸ್ತುಮ್ ಮತ್ತು ಹರ್ಕ್ಯುಲೇನಿಯಮ್ ಎಂಬ ಗ್ರೀಕ್ ವಸತಿಗಳಿಂದ ಕಲೆಹಾಕಿದ ಪ್ರಾಚೀನ ಯಂತ್ರೋಪಕರಣಗಳ ಸಂಗ್ರಹ ಇಲ್ಲಿನ ಒಂದು ವೈಶಿಷ್ಟ್ಯ. ವಿಯಾರೋಮದ ಕೊನೆಯಲ್ಲಿರುವ ಈ ರಾಷ್ಟ್ರೀಯ ಮ್ಯೂಸಿಯಮ್ಮಿನಲ್ಲಿ ನೂರಾರು ಅಮೃತಶಿಲೆಯ ಮೂರ್ತಿಗಳಿವೆ. ಇಲ್ಲಿ ಸಾಕ್ರೆಟೀಸನ ವಿಧವಿಧ ಗಾತ್ರದ ಶಿರಶಿಲ್ಪ ಕಾಣಸಿಗುತ್ತದೆ. ಒಂದೆರಡು ಶಿಲ್ಪಗಳಂತೂ ತೈಲಚಿತ್ರದಲ್ಲಿ ಆಕೃತಿ ಸಮೂಹವನ್ನು ಬಿಡಿಸುವಂತೆ ನೂರಾರು ಮೂರ್ತಿಗಳನ್ನೊಳಗೊಂಡಿವೆ. ಬೆಟ್ಟದ ತುದಿಯಲ್ಲಿ ಸಾಂತೆಲ್ಮೋ ಅರಮನೆಯ

ಬಳಿಯಲ್ಲಿ ಸಾನ್‌ಮಾರ್ತಿನೋ ಕಾನ್ವೆಂಟಿದೆ. ಆದರೊಳಗಡೆ ಇರುವ ಮುಸೆಯೋ ಸಾನ್‌ಮಾರ್ತಿನೋದಲ್ಲಿ ೧೯–೨೦ನೆಯ ಶತಮಾನಗಳ ಕಲಾವಿದರ ವೈಭವವನ್ನು ನೋಡಬಹುದು. ಇಲ್ಲಿನ ಪ್ರಾರ್ಥನಾಮಂದಿರ ದಲ್ಲಿ ಹದಿನಾಲ್ಕನೆ ಶತಮಾನದ ಮರದ ಪೀಠೋಪಕರಣಗಳನ್ನು ನೋಡ ಬಹುದು. ರಾತ್ರಿ ಬೆಳಗಾಗುವುದರೊಳಗೆ ವರ್ಣಚಿತ್ರಗಳನ್ನು ಬರೆಯಬಲ್ಲ ಲುಕಾ ದಿ ಫಾಸ್ಟ್ ಇಲ್ಲಿ ತನ್ನ ಹಲವು ಕೃತಿವೈಶಿಷ್ಟ್ಯದಿಂದ ಮೆರೆಯು ತ್ತಿದ್ದಾನೆ. ನೇಪಲ್ಸಿನ ಬಂದರು ಪ್ರದೇಶದ ಕಡಲ ಕರೆಯಲ್ಲೇ ಗುರುತಿನ ಚಿಹ್ನೆಯಂತೆ ೧೨ನೆಯ ಶತಮಾನದ ಫ್ರೆಂಚ್ ಅರಸರಿಂದ ನಿರ್ಮಿತವಾದ ಕಸ್ತೆಲ್‌ದೊವೊ ಅರಮನೆ ಇದೆ. ಮರದ ಸೇತುವೆಯನ್ನು ದಾಟಿ ಇದನ್ನು ಪ್ರವೇಶಿಸಿದರೆ ಇದರ ಗೂಢ ಅರಿವಾಗುವುದು: ಇದು ರಾಜಕೀಯ ಕೈದಿ ಗಳ ಜೈಲಾಗಿ ಶತಮಾನಗಳ ಕಾಲದಿಂದಲೂ ಬಳಕೆಗೆ ಬಂದಿತ್ತು. ಪ್ಯಾಜಾ ಪ್ಲೆಬಿಚಿತ್ತೊ ಇದಿರು ಕಾಣುವ ಪಲಾಜೋ ರಿಯಾಲೆಯನ್ನು (ಹೊಸ ಅರ ಮನೆ) ೧೩ನೆಯ ಶತಮಾನದಲ್ಲಿ ಇನ್ನೊಬ್ಬ ಫ್ರೆಂಚ್ ದೊರೆ ನಿರ್ಮಿಸಿದನು. ಇದರಲ್ಲೀಗ ನೇಪಲ್ಸಿನ ಪ್ರಾಂತಾಧಿಕಾರಿ (ಗವರ್ನರ್)ಗೆ ಬಿಡಾರ. ನಾಪೊಲಿಗೆ ಬಂದ ಅಂತಾರಾಷ್ಟ್ರೀಯ ಅತಿಥಿಗಳಾದ ನಮಗೆ ಈ ಅರಮನೆ ಯಲ್ಲಿ ಒಂದು ದಿನ ಸ್ಥಾನೀಯ ಸರಕಾರದ ವತಿಯಿಂದ ಸತ್ಕಾರ ಸಮಾ ರಂಭ ಏರ್ಪಟ್ಟಿತು. ಅದು ನನಗೆ ಕಾಕ್‌ಟೇಲಿನ ಪ್ರಥಮ ಅನುಭವ (ಇದರ ಕಥೆ ಆಮೇಲೆ.) ೬೦ ಅಡಿ ಉದ್ದ, ೬೦ ಅಡಿ ಅಗಲ, ೬೩ ಅಡಿ ಎತ್ತರದ ಸಿಂಹಾಸನ ಭವನವು ಈ ಅರಮನೆಯ ವಿಶೇಷತೆಯಂತೆ. ಕಸೆರ್ತದ ಅರ ಮನೆ ಅನೇಕ ಶಿಲ್ಪ ಚಿತ್ರಗಳನ್ನೊಳಗೊಂಡು ನೇಪಲ್ಸಿಗೆ ೨೦ ಮೈಲು ದೂರ ದಲ್ಲಿದ್ದೂ ಪ್ರವಾಸಿಗಳನ್ನಾಕರ್ಷಿಸಬಲ್ಲ ಕೇಂದ್ರವಾಗಿದೆ. ಅಮೃತಶಿಲೆಯ ಹಾಸುಗಲ್ಲುಗಳ ನೆಲ, ಗೋಡೆ, ಸೋಪಾನ, ಸ್ತಂಭ ಮತ್ತು ದ್ವಾರಗಳ ನಿರ್ಮಾಣಕ್ಕೆ ಅದೆಷ್ಟು ವರ್ಷ ಹಿಡಿಯಿತೋ ವೆಚ್ಚ ತಗಲಿತೋ ದೇವರೇ ಬಲ್ಲ. ನಡೆದಷ್ಟು ದೂರ ದೊಡ್ಡಹಾಲುಗಳ ಸಾಲು ಸಾಲು. ನಾವು ಕಸೆರ್ತ ನೋಡಲು ಹೋದ ಮುಹೂರ್ತದಲ್ಲಿ ಅರಮನೆ ಸಜೀವವಾಗಿತ್ತು. ೨೦ ನೆಯ ಶತಮಾನದ ಪ್ರಜಾಪ್ರಭುತ್ವದ ಯುಗದಲ್ಲಿಯೂ ಇತಾಲಿಯನ್ ಶಾಸನ ಸಭೆಯ ಅಧ್ಯಕ್ಷ ಮತ್ತು ಸಾರ್ವಜನಿಕ ಆಡಳಿತ ಖಾತೆಯ ಸಚಿವ ರಿಗೆ ರಾಜವೈಭವದಿಂದ ಕೆಂಪು ರತ್ನಕಂಬಳಿಯ ಸ್ವಾಗತವನ್ನು ನೀಡಿದರು.

ಒಂದು ತಾಸಿನ ಕಾರ್ಯಕ್ರಮ ಅರಮನೆಯ ಮುಖ್ಯ ಮಂಟಪದಲ್ಲಿ ನಡೆಯಿತು. ಪತ್ರಿಕೋದ್ಯಮಿಗಳು ಆಹ್ವಾನಿತರು ನೂರಾರು ಜನ ನೆರೆದಿದ್ದರು. ಫೋಟೋಗ್ರಾಫರರು ರೇಡಿಯೋ ಟೆಲಿವಿಷನಿನವರು ಸೇರಿ ಸಭೆಯಲ್ಲಿ ಸಂಭ್ರಮ ಮತ್ತು ಸಡಗರದ ಸನ್ನಿವೇಶವನ್ನು ನಿರ್ಮಿಸಿದರು. ನೂರೈವತ್ತು ಮಂದಿ ಕಮ್ಯುನಿಸ್ಟ್ ಸದಸ್ಯರನ್ನುಳ್ಳ ಇತಾಲಿಯನ್ ಗಣರಾಜ್ಯದಲ್ಲಿ ಅಧಿಕಾರ ಸಂಪನ್ನರಿಗೆ ನೀಡುವ ಗೌರವ, ಮತ್ತು ಸಂಪ್ರದಾಯದ ಭಕ್ತಿಯನ್ನು ಕಂಡು ನಾನು ವಿಸ್ಮಿತನಾದೆ. ಎಲ್ಲ ಅಧಿಕಾರಿಗಳನ್ನೂ ತುಚ್ಛವಾಗಿ ಕಾಣುವುದು, ಎಲ್ಲ ಸಮಾರಂಭಗಳಿಗೂ ತಾತ್ಸಾರವನ್ನು ಮುಂದೊಡ್ಡುವುದು, ಸ್ಥಾನಕ್ಕೆ ತಕ್ಕಂತೆ ಗೌರವವನ್ನು ಸಲ್ಲಿಸದೆ ಅಂತರಂಗ ಬಹಿರಂಗಗಳಲ್ಲಿ ಅವಮಾನಿಸುವುದು ಭಾರತೀಯ ಪ್ರಜಾಸತ್ತೆಯ ವಿಕೃತ ಪ್ರಗತಿಯ ಲಕ್ಷಣವೆಂದು ತಾರತಮ್ಯ ಭಾವದಿಂದ ನನಗೆ ಜ್ಞಾತವಾಯಿತು. ಯಾವ ವಾದವಾದರೇನು, ಪಂಥವಾದರೇನು ಸರ್ವಜನಹಿತಾರ್ಥ ಬಹುಜನ ಸುಖಾಯ ಸಮಾಜವೇ ಕಟ್ಟಿದ ಸಂವಿಧಾನ, ಕೊಟ್ಟ ಸ್ಥಾನಗಳಿಗೆ ಸರಿಯಾದ ಗೌರವ ನೀಡುವುದು ಪ್ರಜಾಪ್ರಭುತ್ವ ಪದ್ಧತಿಯಲ್ಲಿಯೂ, ಸಾಮ್ಯವಾದದಲ್ಲಿಯೂ ಪ್ರಜೆಯ ಕರ್ತವ್ಯವಾಗದೆ? ವ್ಯಕ್ತಿಯ ಆತ್ಮಗೌರವದ ಕುರುಹಾಗದೆ?

### ೦ ೦ ಇತಾಲಿಯನ್ ಆಪೆರಾ

ಇತಾಲಿಯ ಸಂಗೀತಕ್ಕೂ, ಒಪೇರಾ ಎಂಬ ಗೀತಮಯ ನಾಟಕಕ್ಕೂ ಪ್ರಸಿದ್ಧವಾದ ದೇಶ. ಇತಲಿಯ ಹೊರಗಿನ ದೇಶಗಳ ಆಪೆರಗಳಲ್ಲಿಯೂ ಇತಾಲಿಯನ್‌ವಾದಕರು ಗಾಯಕರು ವಿಪುಲ ಪ್ರಮಾಣದಲ್ಲಿ ಸಿಗುತ್ತಾರೆ. ಪರಂಪರೆಯಿಂದ ಬಂದ ಈ ಸಂಗೀತಕಲೆ ಇತಾಲಿಯದ ವಿಶಿಷ್ಟವಾದ ನಿರ್ಯಾತ ಪದಾರ್ಥವಾಗಿದೆ. (ಇತ್ತೀಚೆಗೆ ಸಿನೆಮಾ ನಟರನ್ನೂ ಇತಲಿ ಹಾಲಿವುಡ್ಡಿಗೆ ರವಾನಿಸಿಲ್ಲವೆ?) ಸ್ವದೇಶದಲ್ಲಿಯೂ ನೂರಾರು ಜನಕ್ಕೆ ಉದ್ಯೋಗ ದೊರಕಿಸುವ ಇತಾಲಿಯನ್ ಆಪೆರಾ ಪ್ರಪಂಚದ ರಸಿಕರ ಮುಂದೆ ಒಂದು ನೂತನ ಸೌಂದರ್ಯಲೋಕವನ್ನು ತೆರೆದಿಡಬಲ್ಲುದು. ನಾಪೂಲಿಯ ಉಂಬರ್ತೊ ಗೆಲರಿಯ ಮುಂದುಗಡೆಯ ಜಗತ್ಪ್ರಸಿದ್ಧಿಯ "ತಿಯಾತ್ರೊ ಸಾನ್‌ಕಾರ್ಲೊ" ಆಪೆರಾ ಗೃಹ. ಇಷ್ಟೇಯ ವಿದ್ಯಾರ್ಥಿ

ಗಳನ್ನು ಸರದಿಯಂತೆ ಆಪೆರಾ ಅನುಭವಿಸಲು ಧರ್ಮಾರ್ಥ ಟಿಕೇಟು ಗಳನ್ನು ನಮ್ಮ ಸಂಸ್ಥೆ ದಯಪಾಲಿಸಿತು. ೫೦೦ರಿಂದ ಮೂರು ಸಹಸ್ರ ಲೀರೆ ವರೆಗಿನ ಅಂದರೆ ೪ ರೂಪಾಯಿನಿಂದ ೨೪ ರೂಪಾಯಿ ವರೆಗಿನ ಸೀಟುಗಳಿವೆ. ಆದರಲ್ಲಿ ನಮಗೆ ಯಾವುದೋ ನಡುವಿನ–ಪ್ರಾಯಃ ೮ ರೂಪಾಯಿನ ಟಿಕೇಟು ಪ್ರಾಪ್ತಿಯಾಗುತ್ತಿತ್ತು. ಮುಖ್ಯಸಭಾಮಂದಿರದ ೩೦ ಅಡಿ ಎತ್ತರದ ಗೋಡೆಯಲ್ಲಿ ಕೊರೆದು ಮಾಡಿದ ಬಾಕ್ಸಿನಲ್ಲಿ ನಮಗೆ ಸ್ಥಳ. ಅಲ್ಲಿ ನಿಂತುಕೊಂಡೇ ನೋಡುವ ಸೌಭಾಗ್ಯ. ಟಿಕೇಟು ಹಿಡಿದು ಕೊಂಡು ಒಳಗೆ ಹೋದಕೂಡಲೆ ದ್ವಾರಪಾಲಕ ಅತಿ ವಿನಯದಿಂದ ನಿಮಗೆ ದಾರಿ ತೋರಿಸುತ್ತಾನೆ. ನಿಮ್ಮ ಬಾಕ್ಸಿಗೆ ನಿಯಮಿತನಾದ ಇನ್ನೊಬ್ಬ ದರ್ಶಕ ನಿಮ್ಮ ಬಾಕ್ಸಿನ ಬಾಗಿಲನ್ನು ತೆರೆದು ನಿಮ್ಮನ್ನು ಒಳಗೆ ಸೇರಿಸಿ ವಿನಯದ ಮೂರ್ತಿಯಾಗಿ ನಿಮ್ಮ ಮುಂದೆ ನಿಂತರೆ ೧೦೦ ಲೀರೆ ನಿಮ್ಮ ಕೈ ಬಿಟ್ಟಂತೆ. ಮಧ್ಯಂತರ ವಿರಾಮ ಕಾಲದಲ್ಲಿ ಶೌಚಕ್ಕೆ ಹೋದರೆ ಅಲ್ಲಿ ಟವಲು ಹಿಡಿದು ನಿಂತ ವೃದ್ಧನಿಗೋ, ವೃದ್ಧೆಗೋ ೫೦ ಲಿರೆ ತೆರಬೇಕು– ಇದು ಸಂಪ್ರದಾಯ. ಎರಡನೆಯ ಮೂರನೆಯ ಉಪ್ಪರಿಗೆಯ ಕಾರಿ ಡಾರುಗಳಿಗೋ ಮೆಟ್ಟಲುಗಳಿಗೋ ಹೊದಿಸಿದ ಕೆಂಬಣ್ಣದ ರತ್ನಗಂಬ ಳಿಯ ಮೇಲೆ ಒಲವಾಗಿ ಕಾಲೂರುವುದಕ್ಕೂ ಮೊದಮೊದಲು ಸಂಕೋಚ ವಾದೀತು.

ಆಪೆರಾಕ್ಕೆ ಬರುವ ಜನಸ್ತೋಮದ ದೃಶ್ಯವೋ – ಇತಾಲಿಯನ್ ರಮಣಿಯರ ರಮಣೀಯತೆಯ ಪರಾಕಾಷ್ಠೆಯನ್ನು ಆಪೆರಾ ಪ್ರೇಕ್ಷಕ ವೃಂದದಲ್ಲಿ ಕಾಣುತ್ತೇವೆ. ಇತಾಲಿಯನರು, ಆದರಲ್ಲಿಯೂ ದಕ್ಷಿಣ ಇತಾಲಿ ಯನ್ ತರುಣಿಯರು ಸ್ಫುರದ್ರೂಪಿಗಳೆಂದು ಬೇರೆ ಹೇಳುವುದು ಬೇಡ. ಬಿಳಿ ತೊಗಲೆಲ್ಲ ಸುಂದರವೆಂದು ನಿರ್ಣಯಿಸುವ ಪಂಥಕ್ಕೆ ನಾನು ಸೇರಿಲ್ಲ. ದಕ್ಷಿಣ ಭಾರತದ ಸ್ತ್ರೀ ಪುರುಷರಂತೆ ದಕ್ಷಿಣ ಇತಲಿಯ ಸ್ತ್ರೀಯರು ಕುಳ್ಳಗೆ. ಆದರೆ ಉತ್ತರ ಐರೋಪ್ಯರ ಗಾಜುಗಣ್ಣು ಇಲ್ಲಿಲ್ಲ. ಕರಿ ಕಣ್ ಗೊಂಬೆ, ಕರಿಕೂದಲಿನ ಚೆಲುವೆಯರು ಆಪೆರಾಕ್ಕೆ ಸಿಂಗರಿಸಿಕೊಂಡು ಬಂದಾಗ ಯಕ್ಷಲೋಕದ ಬಾಗಿಲೇ ತೆರೆದಂತೆ, ವರ್ಣಚಿತ್ರಗಳು ಜೀವ ತಳೆದಂತೆ ರೂಪಸಾಗರವೇ ಸೀಮೋಲ್ಲಂಘನವನ್ನು ಮಾಡಿ ನಮ್ಮ ಮನೋ ಮಂದಿರವನ್ನು ಆಕ್ರಮಿಸಿದಂತೆ ಭಾಸವಾಗುವುದು. ಇದಕ್ಕೆ ಸರಿಸಾಟಿ

ಯಾಗಿ ಪುರುಷರೂ ಅಲಂಕರಿಸಿಕೊಂಡು ಬರುವುದು, ಆಪೆರಾ ನೋಡುವ ನಿಯಮಗಳಲ್ಲೊಂದು. ಸಾಮಾನ್ಯವಾಗಿ ಇತಾಲಿಯದಲ್ಲಿ ಸ್ತ್ರೀಯರಂತೆ ಪುರುಷರೂ ಉಡುಪಿನ ಸಿಂಗಾರಕ್ಕೆ ಮಾರುಹೋದವರೆ, ನಮ್ಮ ಕಾಲೇಜು ಹುಡುಗರಂತೆ ಅಂಗಸೌಂದರ್ಯದ ಚಿಂತೆಯುಳ್ಳಿರುವವರೇ. ಕೂದಲನ್ನು ಉದ್ದವಾಗಿ ಇಳಿಬಿಟ್ಟೋ, ಬಾಚಿಕೊಂಡೋ, ಸುಂದರರಾವಣರಂತೆ ಸಂಜೆ ಹೊತ್ತಿನ ಪಸ್ಸೆಜ್ಜಾತಕ್ಕೆ ಹೊರಟರೆಂದರೆ ಸುತ್ತಲಿನ ಜನರೆಲ್ಲ ತಮ್ಮನ್ನು ನೋಡಲೆಂದೇ ನಡೆಯುವ ತ್ರಿಭಂಗಿ ಅವರದು. ಇನ್ನು, ಆಪೆರಾಕ್ಕೆ ಹೆಂಡತಿಯೊಡನೆಯೋ – ಇತಾಲಿಯದಲ್ಲಿ ಗಂಡಿನ ಪಕ್ಕದಲ್ಲಿ ಬಹಿರಂಗ ವಾಗಿ ಅಲೆವ ಹೆಣ್ಣು ಹೆಂಡತಿಯೇ ಆಗಬೇಕಾಗಿರಲಿಲ್ಲ – ಪ್ರೇಯಸಿಯೊಡ ನೆಯೊ ಹೊರಡುವ ಸಡಗರವನ್ನು ನೋಡುವುದೂ ಒಂದು ಅನುಭವ. ಒಂದು ಕೈಯಿಂದ ಆಕೆಯ ಎಡದ ತೋಳನ್ನು ಮಿದುವಾಗಿ ಹಿಡಿದು ಕೊಂಡು ಇಕ್ಕೆಲದ ಜನ ನೋಡುತ್ತಿರುವಂತೆ ಕಾರಿನಿಂದಿಳಿದು ದ್ವಾರ ಪಾಲಕನಿಗೆ ಐದುನೂರು ಲಿರೆ ಎಸೆದು ರತ್ನಗಂಬಳಿಯ ಮೇಲೆ ಕೋಮಲ ಪಾದಗಳನ್ನು ಬೆಳೆಸಿ ಕಾರಿಡಾರಿನಲ್ಲಿ ಕ್ಲಪ್ತ ಪದಾಘಾತದಿಂದ ಸಂಚರಿ ಸುವ ಅಥವಾ ಮಧ್ಯಂತರ ವಿರಾಮದ ಕಾಲದಲ್ಲಿ ಲೌಂಜಿನಲ್ಲಿ ದ್ರಾಕ್ಷಾರಸ ವನ್ನು ಸವಿಯುತ್ತ ಮಂದಸ್ಮಿತದಿಂದ ಪ್ರೇಯಸಿಯೊಡನೆ ಸಲ್ಲಪಿಸುವ, ದಂಪತಿಗಳ ಗಡಣ ನನ್ನ ಮನಃಪಟಲದಲ್ಲಿ ಒತ್ತಿದ ಚಿರಮುದ್ರೆ ಎಷ್ಟು ವರ್ಷ ಸಂದರೂ ಮಾಸಿ ಹೋಗದು. ಆಪೆರಾಕ್ಕೆ ಹೋಗುವುದು ನಮ್ಮಲ್ಲಿ ದೇವಸ್ಥಾನಕ್ಕೆ ಹೋಗುವಷ್ಟೆ ಕ್ರಮಪ್ರಾಪ್ತ, ಸಂಪ್ರದಾಯ ನಿಯಮಿತ, ಅನಿವಾರ್ಯ ಕರ್ತವ್ಯವೆಂಬುದು ಇತಾಲಿಯದ ಸಂಸ್ಕಾರವಂತ ಜನಗಳ ಅಭಿಪ್ರಾಯ. ಕಲೆಯ ದರ್ಶನ – ಶ್ರವಣ ಮನುಷ್ಯನ ಸಾಮಾಜಿಕ ಜೀವನಕ್ಕೆ ಒದಗಿಸುವ ಪರಿಷ್ಕಾರ, ಶುಚಿ, ರುಚಿ, ಓರಣಕ್ಕೆ ಆಪೆರಾ ಪ್ರೇಕ್ಷಕರು ನಿದರ್ಶನ.

ಲಾ ಬೊಹೆಮೆ (ವಿಲಾಸಿಗಳು) ಎಂಬುದು ನಾನು ನೋಡಿದ ಪ್ರಥಮ ಆಪೆರಾ. ಇದರಲ್ಲಿ ಅಡಕವಾದ ಸಂಗೀತವನ್ನು ವರ್ದಿ ಎಂಬ ಕೃತಿಕಾರ ರಚಿಸಿದ್ದ. ಆಪೆರಾ ನಡೆಯುವ ರಂಗಭೂಮಿ ೬೦ ಅಡಿಗಳಷ್ಟು ವಿಶಾಲವಾದ ಹರವು. ಅದರೊಳಗಡೆ ಎಷ್ಟು ದೊಡ್ಡ ಸಿನೆರಿಯನ್ನಾದರೂ ನಿರ್ಮಿಸುವಷ್ಟು ಅವಕಾಶವಿದೆ. ರಂಗಭೂಮಿಯ ಮುಂದುಗಡೆಯಲ್ಲಿ

ಕನಿಷ್ಟ ಪಕ್ಷ ೫೦-೬೦ ಮಂದಿ ವಾದಕರೂ ಗಾಯಕರೂ ಕೂತಿರುತ್ತಾರೆ. ವಯೋಲಿನಿನಲ್ಲಿ ನಿಂತು ಬಾರಿಸುವಷ್ಟು ದೊಡ್ಡ ವಯೊಲಿನೂ ಇದೆ. ಹಾಡುವವರು ಸಾಲಾಗಿ ಕೂತಿರುತ್ತಾರೆ. ನಾನಾ ಸ್ವರದಲ್ಲಿ, ಲಯದಲ್ಲಿ ತಾನದಲ್ಲಿ ವೃಂದರೂಪದಲ್ಲಿ ಇವರು ಹಾಡಬೇಕು, ಬಾರಿಸಬೇಕು. ರಂಗ ಭೂಮಿಯ ಮೇಲೆ ನಟಿಸುವ ನಟರೂ ಹಾಡಬೇಕು. ಆಪೆರಾದಲ್ಲಿ ಸಂಗೀತ ದಲ್ಲಿ ಪಾತ್ರಗಳ ಪರಸ್ಪರ ಸಂವಾದ ಜರಗುತ್ತದೆ. ಆದರೆ ಆ ಸಂಗೀತವು ನಟನೆಗೆ ಯಾವ ಆತಂಕವನ್ನೂ ಉಂಟುಮಾಡದು. ಗಂಡಸರು ಗಟ್ಟಿಯಾಗಿ ಹಾಡುವಂತೆ ಹೆಂಗಸರು ಕೀರಲು ದನಿಯಲ್ಲಿ ಹಾಡುತ್ತಾರೆ. ನಾನು ನೋಡಿದ 'ಲಾಮ್ಮರಮೂರಿನ ವಧು ಎಂಬ ಇನ್ನೊಂದು ಆಪೆರದಲ್ಲಿ ನಾಯಕಿ ವಧುವಿಗೆ ಆಶಾಭಂಗವಾದ ಮೇಲೆ ಹುಚ್ಚು ಹಿಡಿಯುತ್ತದೆ. ಹುಚ್ಚಳಂತೆ ನಟಿಸುವುದಕ್ಕಿಂತ ಹೆಚ್ಚಾಗಿ ಸುಮಾರು ಅರ್ಧ ತಾಸು ಆಕೆ ಹಾಡಿದ ಹಾಡಿನ ಸ್ಪಂದನ, ಕ್ರಂದನ, ಏರಿಳಿತ, ವಕ್ರತೆ, ವಿಕಾರಗಳಿಂದಲೇ ಮನೋವಿಕಾರ ಅಭಿವ್ಯಕ್ತವಾಗುವಂತೆ ಆಕೆ ಹಾಡಿದಳು. ಪ್ರೇಕ್ಷಕರು ಹಾಡಿ ನಿಂದಲೇ ಆ ಪಾತ್ರದ ದಯನೀಯ ಅವಸ್ಥೆಗೆ ಕನಿಕರಿಸಿ ಕಣ್ಣೀರು ಸುರಿಸು ವಂತೆ ಗೀತ ರಚಿಸಿದ ಮಹಾ ಕೃತಿಕಾರನಿಗೆ ವಂದನೆ ಸಲ್ಲಬೇಕು. ಪಾಶ್ಚಾತ್ಯ ಸಂಗೀತಜ್ಞಾನವಿಲ್ಲದ ನನ್ನಂಥ ದಡ್ಡನಿಗೂ ಆ ಪಾತ್ರದ ದುಸ್ಥಿತಿಯ ಬಗ್ಗೆ ಕರುಣೆ ಹುಟ್ಟಬೇಕಾದರೆ, ಪಂಡಿತರಿಗೆ ಅದರ ಸ್ವಾರಸ್ಯ ಇನ್ನೂ ಅಧಿಕ ವಾಗಿರಬೇಕಲ್ಲವೆ?

ಸಭಾಮಂದಿರದಲ್ಲಿಯೂ, ಬಾಕ್ಸುಗಳಲ್ಲಿಯೂ ಸುಮಾರು ೧೦೦೦ ಜನ ಕೂತಿದ್ದರೂ ನಾಟಕ ನಡೆಯುವ ವೇಳೆ ಉಸಿರಾಡುವ ಸದ್ದೂ ಕೇಳಿ ಸದು. ರಂಗಭೂಮಿಯ ನಟರ ನಿಕಟ ದರ್ಶನ ಸಾಧ್ಯವಾಗಲೆಂದು ಮಹಿಳೆ ಯರಲ್ಲಿ ಹೆಚ್ಚಿನವರು ಪುಟ್ಟ ಬೈನಾಕ್ಯುಲರ್ ಇಟ್ಟುಕೊಂಡಿರುತ್ತಾರೆ. ರಂಗಭೂಮಿಯ ದೃಶ್ಯಾವಳಿಗಳ ಕಲಾತ್ಮಕವಾದ ಜೋಡಣೆ, ಪರಿಪೂರ್ಣತೆ ವಾಸ್ತವತೆ ಮನಮೋಹಕವಾಗಿರುತ್ತದೆ. ಬೀದಿಯ ದೃಶ್ಯವೆಂದರೆ ನೂರಾರು ಜನರ ಒಂದು ಬೀದಿ ಸೃಷ್ಟಿಯಾಗುತ್ತದೆ. ಕಣ್ಣಿಗೂ ಕಿವಿಗೂ ರಸದೌತಣವನ್ನು ಬಡಿಸುವ ಆಪೆರಾ ಜಗತ್ತಿಗೆ ಇತಾಲಿಯದ ಅಪೂರ್ವ ಕೊಡುಗೆಯೇ ಸರಿ.

ಒಂದೇ ಆಪೆರಾ ತಿಂಗಳೆರಡು ತಿಂಗಳು ಪ್ರತಿದಿನವೂ ಪ್ರದರ್ಶಿತ

ವಾಗುವುದುಂಟು. ಪ್ರಸಿದ್ಧ ಆಪೆರಗಳು ಮೇಲಿಂದ ಮೇಲೆ ಪ್ರದರ್ಶಿತ ವಾದರೂ ಪ್ರೇಕ್ಷಕ ವರ್ಗದ ಕೊರತೆಯಿರುವುದಿಲ್ಲ. ನೇಪಲ್ಸಿನ ಸಾನ್ ಕಾರ್ಲೋ ಚಳಿಗಾಲದ ಆಪೆರಾ; ಅದನ್ನು ನೋಡಲು ಉತ್ತರ ಇತಾಲಿ ಯದ ನಗರಗಳಿಂದಲೂ ರಸಿಕರು ಆಗಮಿಸುತ್ತಾರೆ. ರೋಮಿನಲ್ಲಿ ಕರ ಕಲ್ಲಾದ ಬಯಲು ರಂಗಮಂಟಪದಲ್ಲಿ ಗ್ರೀಷ್ಮಋತುವಿನ ಆಪೆರಾ ಆರಂಭ ವಾಗುತ್ತದೆ. ವಿದೇಶೀಯರಿಗೆ ಇದು ದೊಡ್ಡ ಆಕರ್ಷಣೆ. ನೇಪಲ್ಸಿನಲ್ಲಿ ಗದ್ಯನಾಟಕವನ್ನಾಡುವ ಒಂದೆರಡು ನಾಟಕಗೃಹಗಳಿಗೆ ನಮಗೆ ಪುಕ್ಕಟೆ ಪ್ರವೇಶ ಇಲ್ಲದ್ದರಿಂದ ನಾವು ಅವನ್ನು ಬಹಿಷ್ಕರಿಸಬೇಕಾಯಿತು. ಸಾಯಂ ಕಾಲದ ಮನರಂಜನೆಗೆ ನಮ್ಮ ದೇಶದಲ್ಲಿ ಸಿನೆಮಾ ಒಂದೇ ಸಾಧನವಷ್ಟೇ. ಪಾಶ್ಚಾತ್ಯ ದೇಶಗಳಲ್ಲಿ ಹಾಗಲ್ಲ. ಋತುವನ್ನು ಹೊಂದಿ ನಾಟಕವೋ ಆಪೆ ರವೋ ಕಡಲ ಸ್ನಾನವೋ, ರಾತ್ರಿ ಕ್ಲಬ್ಬುಗಳೋ ನಗ್ನನೃತ್ಯ ಶಾಲೆಗಳೋ ಗಿರಾಕಿಗಳ ಅಭಿರುಚಿಗೆ ತಕ್ಕಂತೆ ಅವರ ದುಡ್ಡಿನ ಚೀಲದ ಗಾತ್ರಕ್ಕೆ ಸಮ ನಾಗಿ ಸಿದ್ಧವಾಗಿರುತ್ತವೆ. ಇತಾಲಿಯ ಸಿನಿಮಾ ತಯಾರಿಯಲ್ಲಿ ಹಾಲಿ ವುಡ್ಡಿಗೆ ಪ್ರತಿಸ್ಪರ್ಧಿಯಾದ ಒಂದು ವಿಶ್ವಕೇಂದ್ರ. ರೋಮಿನ ಒಂದು ಭಾಗಕ್ಕೆ 'ಚಿನೆ ಚಿತ್ತ' (ಸಿನೆಮಾ ನಗರ) ಎಂದು ಹೆಸರು ಬಿದ್ದಿದೆ: ಇತಾಲಿ ಯದ ಫೆಲ್ಲನಿ ಮುಂತಾದ ದಿಗ್ದರ್ಶಕರೂ, ಗಾಸ್‌ಮೆನ್, ಸೋಫಿಯಾ ಲೊರೆನ್, ಬಡೋಟ್ ಮುಂತಾದ ನಟನಟಿಯರೂ ವಿಶ್ವವಿಖ್ಯಾತರಷ್ಟೆ. ತಯಾರಿಸುವುದು ಮಾತ್ರವಲ್ಲದೆ ಸಿನೆಮ ನೋಡುವುದೂ ಇತಾಲಿಯ ದಲ್ಲಿ ಹವ್ಯಾಸವಾಗಿದೆ. ಯುರೋಪಿನ ಕೆಲವು ದೇಶಗಳಲ್ಲಿ ಸಿನೆಮಾಕ್ಕೆ ಈಗ ಗಿರಾಕಿ ಇಲ್ಲ. ಲಂಡನಿನಲ್ಲಿ ಸಿನೆಮಾ ಗೃಹದ ಮುಂದೆ ಬಟ್ಟೆ ಬರೆ ತೊಳೆಯುವ ಯಂತ್ರವನ್ನಿರಿಸಿ, ಬಟ್ಟೆ ಶುದ್ಧವಾಗಿ ಬರುವ ತನಕವಾದರೂ ಸಿನೆಮಾ ನೋಡಲಿ ಎಂದು ಇತರ ಪ್ರಯೋಜಕ ಆಕರ್ಷಣೆಗಳನ್ನು ಒದಗಿಸುವ ಪರಿಸ್ಥಿತಿ ಒದಗಿದೆ. ಸಿನೆಮಾಕ್ಕೆ ಹೋಗುವುದರ ಬಗ್ಗೆ ಸಾಮಾ ಜಿಕ ಗೌರವವೇ ಕಡಮೆಯಾಗಿ ನಾಟಕ ಆಪೆರಾ, ಬಲೆಗಳ ಮುಂದೆ ಸಿನೆಮ ಸೋಲೊಪ್ಪಿಕೊಂಡಿದೆ. ನೇಪಲ್ಸಿನಲ್ಲಿ ಹಲವಾರು ಸಿನೆಮಾ ಗೃಹ ಗಳು: ನಗರದ ಮುಖ್ಯ ಬೀದಿಗಳಲ್ಲಿರುವಂಥವು ಚೆನ್ನಾದುವು, ಅಡ್ಡ ಬೀದಿ ಗಳಲ್ಲಿ ಕೆಟ್ಟ ಸಿನಿಮಾ ಮಂದಿರಗಳಿವೆ. ಉಂಬರ್ತೊ ಗೆಲರಿಯಲ್ಲಿ ನಾಲ್ಕು ಪುಟ್ಕೊಸಿ ಮಂದಿರಗಳಿವೆ. ಒಟ್ಟು ೫೦ ಸೀಟಿನ ಈ ಸಿನಿಮಾ ಗೃಹಗಳಲ್ಲಿ

ಹಗಲು ರಾತ್ರಿ ಸಿನೆಮಾ ನಡೆಯುತ್ತದೆ. ದರವೂ ಕಡಿಮೆ. ದೊಡ್ಡ ಸಿನಿಮಾ ಗೃಹಗಳಲ್ಲಿ ಕೊಡುವ ಟಿಕೇಟು ನಮ್ಮಲ್ಲಿರುವಂತೆ ಒಂದೇ ದೇಖಾವೆಗಲ್ಲ. ಆ ಒಂದು ಟಿಕೇಟಿಗೆ ಒಂದು ದಿನ ಎಷ್ಟು ದೇಖಾವೆಗಳು ನಡೆಯುತ್ತವೋ ಅಷ್ಟಕ್ಕೂ ನಿಮಗೆ ಅಧಿಕಾರವುಂಟು. ಆದರೆ ನಡುವೆ ಹೊರಗೆ ಮಾತ್ರ ಹೋಗಬಾರದಂತೆ.

ಇತಾಲಿಯದ ಒಳಗೂ ಹೊರಗೂ ಅತ್ಯಂತ ವಿವಾದಾಸ್ಪದವಾದ ಚಿತ್ರ 'ಲಾದೊಲ್ಚೆವೀತ' (ಮಧುರ ಜೀವನ) ೧೯೬೩ಕ್ಕೆ ಹಳೆಯ ಚಿತ್ರ ವಾಗಿದ್ದುದರಿಂದ ಪ್ಯಾಜಾ ಅಮದೆಯೊದ ಸಮೀಪ ಯಾವುದೋ ಅಡ್ಡ ಬೀದಿಯ ಕೆಟ್ಟ ಸಿನಿಮಾ ಮಂದಿರದಲ್ಲಿ ನಡೆಯುತ್ತಿತ್ತು. ಇದರ ವಿಶಿಷ್ಟ ಕೀರ್ತಿಯನ್ನು ನಾನು ಮೊದಲೇ ಓದಿಕೊಂಡಿದ್ದರಿಂದ ಬಹಳ ಔತ್ಸುಕ್ಯದಿಂದ ಹೋಗಿ ನೋಡಿದೆ. ಇತಾಲಿಯದ ಶ್ರೀಮಂತ ವರ್ಗದ ಅವನತ ಸ್ವೈರ ಜೀವನ ಮತ್ತು ಚರ್ಚಿನ ಅತಿಶ್ರದ್ಧೆ ವ್ಯಾಮೋಹಗಳ ವಿಮರ್ಶೆಯೇ ಕಥಾವಸ್ತುವಾಗಿ ಉಳ್ಳ 'ದೊಲ್ಚೆ ವೀತ' ಸಿನಿಮಾ ತಂತ್ರದ ದೃಷ್ಟಿಯಿಂದ ಇತಾಲಿಯನ್ ಸಿನಿಮಾಕ್ಕೆ ಹೊಸ ದಾರಿ ತೋರಿಸಿತಂತೆ. ಮಹಾತ್ಮಾ ಗಾಂಧಿಯವರ ಮರಣವೇ ಕಥಾವಸ್ತುವಾಗಿ ಉಳ್ಳ ಒಂದು ಅಮೆರಿಕನ್ ಚಿತ್ರದ ಇತಾಲಿಯನ್ ಡಬ್ಬು ಭಾರತದಲ್ಲಿ ನಿಷೇಧಾಜ್ಞೆಗೆ ಒಳಪಟ್ಟ 'ನ್ನೋವೆ ಓರೆಪರ್ ರಾಮಾ' (ರಾಮನಿಗೆ ಒಂಭತ್ತು ತಾಸು), ಗಾಂಧೀಜಿಯವರ ಕೊಲೆಗೆ ಹಿಂದಿನ ಒಂಭತ್ತು ತಾಸುಗಳಲ್ಲಿ ನಡೆದ ಘಟನೆಗಳ ಸ್ವಾರಸ್ಯವಾದ ಚಿತ್ರಣವನ್ನು ಇಲ್ಲೇ ನೋಡಿದೆ.

ತೀರ ಕೆಳಗಿನ ವರ್ಗದ ಜನರ ಪೋಷಣೆಯಿಂದ ಬದುಕುವ 'ಫ್ಲೋರ್ ಷೋ' ಉಂಬರ್ತೊ ಗೆಲರಿಯ ನೆಲಮಾಳಿಗೆ ನಾಟಕ ಗೃಹದಲ್ಲಿ ನಿತ್ಯವೂ ನಡೆಯುವುದು. ನಗ್ನ ನೃತ್ಯದ ನಡುವೆ ನಾಪೋಲಿ ಖಾಸಾ ವಿನೋದಾವಳಿ ಗಳೂ ನಾಪೊಲಿತಾನಾ ಎನ್ನುವ ವಿಶಿಷ್ಟ ಪ್ರಾದೇಶಿಕ ಸಂಗೀತವೂ ಇಲ್ಲಿನ ವಿಶೇಷ ಆಕರ್ಷಣೆ. ಮಧ್ಯಮ ಮತ್ತು ಶ್ರೀಮಂತ ಜನವರ್ಗ ನೈಟ್ ಕ್ಲಬ್ಬುಗಳ ಪೋಷಕರು. ಅಲ್ಲಿನ ನರ್ತಕಿಯರನ್ನು ರಂಗಭೂಮಿಯ ಮೇಲೆ ನೋಡುವುದೊಂದೇ ಅಲ್ಲ ಅವರ ಕೂಡೆ ಸರಸವಾಡಬಹುದು, ನರ್ತಿಸ ಬಹುದು. ತದನಂತರ ಬಯಸಿದರೆ ಬೆನ್ನುಹತ್ತಿ ಹೋಗಲೂಬಹುದು. ಆದರೆ ಪ್ರವೇಶಪಾಸಲು ವಿಪರೀತ—ಕೆಲವು ಕಡೆ ೨೦೦೦ ಲಿರೆ(—೧೬

ರೂಪಾಯಿ) ಕೊಟ್ಟು ನಿಮ್ಮ ಜೇಬು ಬರಿದು ಮಾಡಲೆಂದೇನಿಯುಕ್ತ ವಾದ ಕ್ಲಬ್ಬಿನ ಶಿಷ್ಟ ಸಂಪ್ರದಾಯಗಳಿಗೆ ನೀವು ತಲೆ ತಗ್ಗಿಸಿ ನಡೆಯಬೇಕು. ಗಿರಾಕಿಗಳ ಜೇಬು ಕತ್ತರಿಸಲು ಸಿದ್ಧರಾದ ಮಹಿಳಾಮಣಿಗಳನ್ನು ಸಂಬಳ ಕೊಟ್ಟು ನೇಮಕ ಮಾಡಿರುತ್ತಾರಾಗಿ ಅವರ ಕರ್ತವ್ಯ ಪರಾಯಣತೆ ನಿಮಗೆ ಕೇಡು. 'ತೇಲಿಬರುವ ಜಾಸ್ (ಈಗ ರೋಕ್ ಎಂಡ್ ರೋಲ್) ಗಾನ' ಹರಿಯುತ್ತಿರುವ ಮದಿರಾ ಪ್ರವಾಹ ಮತ್ತು ಮದಿರಾಕ್ಷಿಯರ ಕಟಾಕ್ಷದ ವಿದ್ಯುತ್ಸಂಚಾರದ ಆ ನಿಶಾಲೋಕದಲ್ಲಿ ಮತ್ತನಾಗದ ಮನುಷ್ಯ ನಾರು? ಸ್ತ್ರೀ ಪುರುಷ ಸಾತಂತ್ರ್ಯದ ಪರಮಾವಧಿ ಮಟ್ಟವನ್ನು ಸೂಚಿ ಸುವ ಇಂಥ ವಿಲಾಸ ಮಂದಿರಗಳಿಲ್ಲದೆ ಪಾಶ್ಚಾತ್ಯ ಜೀವನ ಕ್ರಮ ಅಸಂಪೂರ್ಣ. ಕೌಟುಂಬಿಕ ಜೀವನದ ಶೈಥಿಲ್ಯದಿಂದಾಗಿ ವಿವಾಹ ವಿಚ್ಛೇ ದದ ಹಾವಳಿಯಿಂದಾಗಿ ವ್ಯಕ್ತಿ ಜೀವನದ ಸಮತೋಲವನ್ನು ರಕ್ಷಿಸುವುದು ಇಂಥ ವಿಲಾಸ ಗೃಹಗಳ ಸಾಮಾಜಿಕ ಹೊಣೆ ಎಂಬುದಾಗಿ ನಾವು ಯೋಚಿ ಸುವುದಾದರೆ ಕೌಟುಂಬಿಕ ಜೀವನ ಇನ್ನೂ ಭದ್ರವಾಗಿರುವ ದಕ್ಷಿಣ ಇತಾಲಿಯದಲ್ಲಿಯೂ ಇವು ಏಕೆ ಜನಪ್ರಿಯವಾಗಿವೆಯೋ? ದಕ್ಷಿಣ ಇತಲಿ ಸಂಪ್ರದಾಯದ ಭದ್ರ ಕೋಟೆ, ಕುಟುಂಬ ಜೀವನದ ಪಾವಿತ್ರ್ಯ ವನ್ನು ಇನ್ನೂ ಉಳಿಸಿಕೊಂಡಿರುವ ಒಂದು ಭಾಗವೆಂದು ಪ್ರಸಿದ್ಧಿ. ಆದರೆ ಪ್ರಾಯಃ ಯುದ್ಧಾನಂತರ ಕಾಲದಲ್ಲಿ ಅಮೆರಿಕದ ಪ್ರಗತಿಯ ಅನುಕರಣ ಪಥದಲ್ಲಿ ಸಾಗಿರುವ ಇತಾಲಿಯ ಅಮೆರಿಕನ್ ಸಂಸ್ಕೃತಿಯ ಕೊಳೆ ಕಸ ರನ್ನೂ ಮೈಗಂಟಿಸಿಕೊಂಡಿರುವುದಕ್ಕೆ ಇದು ನಿದರ್ಶನವೇನೋ.

## ೦ ೦ ಇತಾಲಿಯದ ಕುಟುಂಬ ಜೀವನ: ಸಿನ್ಯಾರ್ ಆಪಾ

ಇತಾಲಿಯನ್ ಕುಟುಂಬವೊಂದರಲ್ಲಿ ತೀರ ಆತ್ಮೀಯವಾಗಿ ಬೆರೆತು ಅಲ್ಲಿನ ಗೃಹಸ್ಥ ಜೀವನದ ಸಮೀಪಾನುಭವವನ್ನು ಮಾಡಿಕೊಳ್ಳುವ ಸುಪ್ರಸಂಗವನ್ನು ಗೆಳೆಯ ಶ್ರೀ ಕೆ. ಕೆ. ಪೈ ಒದಗಿಸಿಕೊಟ್ಟರು. ಅವರು ಅಂತಾರಾಷ್ಟ್ರೀಯ ಬ್ಯಾಂಕಿಂಗ್ ವ್ಯವಸಾಯದ ಬೇಸಗೆ ಶಿಬಿರದಲ್ಲಿ ಭಾಗ ವಹಿಸಲು ಎಡಿನ್‌ಬರೋಗೆ ತೆರಳಿದಾಗ ಬಾಂಕೋದಿನಾಪೊಲಿಯ

ವಿದೇಶ ಖಾತೆಯ ಸಬ್ ಮೆನೇಜರ್ ಸಿನ್ಯಾರ್ ಲೂಯಿಜಿ ಆಪಾ ಅವರಿಗೆ ನಿಕಟ ಪರಿಚಿತರಾದರು. ೪೦೦ ಶಾಖೆಗಳಿಂದ ನೇಪಲ್ಸಿನಲ್ಲೆ ಮುಖ್ಯ ಕಚೇರಿ ಇರುವ ದಕ್ಷಿಣ ಇತಾಲಿಯದ ಈ ದೊಡ್ಡ ಬ್ಯಾಂಕು ಇಸ್ವೇಯ ಪೋಷಕ ಸಂಸ್ಥೆ. ಲೂಯಿಜಿ ಆಪಾ ಸ್ವಸಾಮರ್ಥ್ಯದಿಂದ ಈ ಸಂಸ್ಥೆಯಲ್ಲಿ ಉನ್ನತ ಹುದ್ದೆಯಲ್ಲಿದ್ದರು. ಅವರ ಸ್ನೇಹ, ವಿಶ್ವಾಸ, ವಿನೋದಪರ ಪ್ರಕೃತಿ ನನಗೆ ಮಾತ್ರವಲ್ಲದೆ ನನ್ನ ಇತರ ಸ್ನೇಹಿತರಿಗೂ ಬಹಳ ಹಿಡಿಸಿತು. ಯಾರನ್ನು ಯಾವ ಕಾಲದಲ್ಲಿಯೂ ಪರಿಚಯ ಮಾಡಿಕೊಂಡು ಅವರ ಸುಖ ಕಷ್ಟ ಗಳನ್ನು ವಿಚಾರಿಸಿ ತನ್ನಿಂದೇನಾದರೂ ಆಗಬೇಕೇ ಎಂದು ಕೇಳಿ ಸ್ನೇಹ ಹಸ್ತವನ್ನು ಒಡ್ಡುವುದು ಆಪಾ ಅವರ ಸಹಜ ಸ್ವಭಾವ. 'ಭಟ್ಟರ ಸ್ನೇಹಿತ ರೆಲ್ಲ ನನ್ನ ಸ್ನೇಹಿತರು' ಎಂದು ಎದೆ ಮುಟ್ಟಿ ಭಾವಪೂರಿತವಾಗಿ ಆತ ನುಡಿದರೆಂದರೆ ಮೈ ನವಿರೇಳಬೇಕು. ನನ್ನನ್ನು ಇಸ್ವೇ ಗುಂಪಿನಲ್ಲಿ ಕಂಡರೂ ಎಲ್ಲರನ್ನೂ ಒಯ್ದು ಕಾಫಿಯೋ ಬೀರೋ ಕುಡಿಸಬೇಕು. ಪ್ರತಿ ಶುಕ್ರವಾರ ನನಗೆ ಅವರಿಂದ ಫೋನು 'ಈ ಭಾನುವಾರ ಏನೂ ಕೆಲಸವಿಲ್ಲದಿದ್ದರೆ ಸಿನ್ಯಾರ್ ಆಪಾನ ಜತೆ ತಿರುಗಾಟಕ್ಕೆ ಬರಬಹುದೇ? ನಾನು ಈ ಸಲ ಆಗುವುದಿಲ್ಲ ಎಂದೆನೋ ಅವನ ನಿರಾಶೆ ಫೋನಿನ ಆತಂಕದ ನಡುವೆಯೂ ವ್ಯಕ್ತವಾಗುವುದು. ಆರು ತಿಂಗಳ ಕಾಲ ಅನೇಕ ಕಡೆ ಆಪಾ ಅವರ ಜತೆಗೆ ನಾನು ಅಡ್ಡಾಡಿದೆ. 'ನೀನು ಕರೆದಾಗ ಬರುತ್ತೇನೆ', ಹೇಳಿದ್ದು ಮಾಡಬಲ್ಲೆ' ಎಂದು ಅವನು ನಿಷ್ಕಲ್ಮಶ ಮನಸ್ಸಿನಿಂದ ಅಂದಾಗ ಯಾರಿವನು, ನನ್ನ ಪೂರ್ವಜನ್ಮದ ಬಂಧು ಎನಿಸಿತು. 'ನೀನು ಏನನ್ನೂ ಯಾಚಿಸಲಿಲ್ಲ, ಯಾವ ಮಹದುಪಕಾರವನ್ನೂ ಬಯಸಲಿಲ್ಲ ಎಂಬುದೇ ನನ್ನ ಕೊರಗು' ಎಂದು ನುಡಿಯುತ್ತಿದ್ದ ಸಿನ್ಯಾರ್ ಆಪಾ ನೇಪಲ್ಸಿನ ಪುನರ್ನಿರ್ಮಿತ ನೂತನ ನಗರ ಮಧ್ಯೆ ಅಮೆರಿಕನ ಮಾದರಿಯ ಎಪಾರ್ಟಮೆಂಟಿನಲ್ಲಿ ವಾಸಮಾಡು ತ್ತಿದ್ದರು. ಅವರ ಮನೆಯಲ್ಲಿ ಹೆಂಡತಿ, ನಾಲ್ಕು ಮಕ್ಕಳು ಮತ್ತು ಅವರ ಅತ್ತೆ ವಾಸವಾಗಿದ್ದರು. ಶ್ರೀಮತಿ ಆಪಾಗೆ ಇಂಗ್ಲಿಷ್ ಬರುತ್ತಿರಲಿಲ್ಲ ವಾದ್ದರಿಂದ ನಾನು ಹೇಳಿದ್ದನ್ನು ಆಪಾ ಉಳಿದವರಿಗೆ ಭಾಷಾಂತರಿಸಿ ಹೇಳು ತ್ತಿದ್ದರು. ಹಿರಿಯ ಮಗ ಆಲ್ಫ್ರೆದೋ ೧೭ ವರ್ಷದ ಹುಡುಗ ಲೈಸಿಯಾ ಮಿನ ಕೊನೆಯ ವರ್ಷದಲ್ಲಿ ಪರೀಕ್ಷೆಗೆ ಕಟ್ಟಿದ್ದ. ಕಿರಿಯವನು ಹನ್ನೊಂದು ವರ್ಷದ ವೆಲೆಂತಿನೋ, ಆಪಾ ಅವರ ತದ್‌ಪ್ರತಿಬಾಲಕ – ರೂಪ

ದಲ್ಲಿಯೂ, ಗಾತ್ರದಲ್ಲಿಯೂ. ಹಿರಿಯ ಹುಡುಗಿ ಪಿನೊತ್ತಾಗೆ ಮದುವೆಗೆ ವರ ನಿಶ್ಚಯವಾಗಿತ್ತು. ಕಿರಿಯಾಕೆ ಆನಾಗೆ ೧೫ ವರ್ಷ ಇರಬಹುದು. ಹೆಂಡತಿಯ ತಾಯಿ ಅಳಿಯನ ಮನೆಯಲ್ಲಿ ವಾಸ ಮಾಡುವುದು. ಅಂದರೆ ತಾಯಿ ಮಗಳ ಕುಟುಂಬದೊಡನೆ ಸೇರಿ ವಾಸ ಮಾಡುವುದು ದಕ್ಷಿಣ ಇತಾಲಿಯದ ಸಂಪ್ರದಾಯ (ನಮ್ಮಲ್ಲಿ ತಾಯಿ ಮಗನ ಜತೆ ಇರುವುದಕ್ಕೆ ವಿರುದ್ಧವಾಗಿ) ಆಪನ ತಾಯಿಯನ್ನು ನಾವು ಅವರ ತಂಗಿಯ ಮನೆಯಲ್ಲಿ ನೋಡಿದೆ. ಆತನ ಈ ತಂಗಿಯೂ ಆಕೆಯ ಗಂಡನೂ ಇತಲಿಯ ಇನ್ನೊಂದು ಬ್ಯಾಂಕಿನಲ್ಲಿ ಕೆಲಸಕ್ಕಿದ್ದರು 'ನನ್ನ ತಾಯನ್ನು ನೋಡದೆ ಹೋಗಬಾರದು' ಎಂದು ಒಂದು ರಾತ್ರಿ ಆಪಾ ತನ್ನ ತಂಗಿಯ ಮನೆಗೆ ನನ್ನನ್ನು ಸಕುಟುಂಬ ಸಪರಿವಾರ ಒಯ್ದಿದ್ದ.

ಆಪಾ ಮನೆಗೆ ಮೂರು ನಾಲ್ಕು ಸಲ ಊಟಕ್ಕೆ ಹೋಗಿದ್ದೆ: ಕೆಲವೊಮ್ಮೆ ಮಧ್ಯಾಹ್ನದ ಭೋಜನ, ಉಳಿದವು ರಾತ್ರಿ ಭೋಜನ. ನನ್ನ ಆಹಾರಾಭ್ಯಾಸಗಳನ್ನು ಪೂರ್ವಭಾವಿಯಾಗಿ ಅರಿತುಕೊಂಡು ನನ್ನ ಸಲುವಾಗಿ ಶಾಕಾಹಾರ ತಯಾರಿಸಿ ಬಡಿಸುತ್ತಿದ್ದರು. ತರಕಾರಿ, ಸ್ಪಗೆಟ್ಟಿ, ಫಲಾಮೃತ – ಹೀಗೆ ಜಾತಿ ಕೆಡಿಸದ ತಿನಸುಗಳನ್ನು ತಯಾರಿಸಿ ವಿಶ್ವಾಸದಿಂದ ನನ್ನ ಸಲುವಾಗಿ ತಾವೂ ಅಂದು ಶಾಕಾಹಾರಿಗಳಾಗಿ ಸಂತೋಷಪಡುತ್ತಿದ್ದರು. ಬೀರು, ವೈನ್, ಮಾಂಸ, ಮೊಟ್ಟೆ ಮುಟ್ಟದ ನಾನೊಬ್ಬ ಭಾರತದ ಮಹರ್ಷಿ ಎಂದು ಅವರ ಮಕ್ಕಳು ಭಾವಿಸಿರಬೇಕು. ನನ್ನ ಹೆಸರಿನ ಅರ್ಥ ಮಕ್ಕಳಿಗೆ ವಿವರಿಸಿ 'ಇವರು ಯಾರು ಗೊತ್ತೆ? ಹರಿದಾಸಾ-ಸೆರ್ವೊ ದಿ ದೆಯೊ – ದೇವರ ಸೇವಕ – ಬರೇ ನನ್ನಂತೆ ಅರ್ಥಹೀನ ಆ-ಪಾ – ಅಲ್ಲ' ಎಂದು ತಮಾಷೆ ಮಾಡುವರು. ಇವರ ವಯಸ್ಸು ಸರಿಯಾಗಿ ಹೇಳಿದವರಿಗೆ ಬಹುಮಾನವುಂಟೆಂದು ಮಕ್ಕಳಿಗೆ ಸವಾಲು ಹಾಕುವರು. ೨೭–೩೮–೩೫ – ಹೀಗೆ ಒಬ್ಬೊಬ್ಬರಾಗಿ ಅವರು ನುಡಿದಾಗ ಆವರು ಕಣ್ಸನ್ನೆ ಮಾಡಿ 'ನೋಡಿ, ನೀವೆ ಹೇಳಿ ನಾನು ಹೇಳಿದರೆ ಇವರು ನಂಬುವುದಿಲ್ಲ' ಎಂದು ನನ್ನನ್ನು ಚುಚ್ಚುವರು. ನಾನು ೪೫ ಎಂದಾಗ ವೀ... ವೀ... ಎಂದು ಮಕ್ಕಳು ಆಶ್ಚರ್ಯದಿಂದ ಕೆಲೆಯುವುವು. ಮಕ್ಕಳಿಗೂ ಭಾರತದ ಬಗ್ಗೆ ತಿಳಿವು ಅಷ್ಟಕಷ್ಟೆ – ದಂತಕಥೆಗಳಲ್ಲಿ ಓದಿದ ಹುಲಿ-ಆನೆ-ಬೈರಾಗಿ-ಹಾವಾಡಿಗರ ಭಾರತದ ಪರಿಚಯವಷ್ಟೇ ಇರುತ್ತಿತ್ತು. ಮಕ್ಕಳೇ ಏನು

ಹಿರಿಯರೂ ಅಜ್ಞಾನಕ್ಕೆ ಅಪವಾದವಾಗಿರುತ್ತಿರಲಿಲ್ಲ. ಬೃಹತ್ ಪ್ರಮಾಣದ ನಾನಾ ಬಗೆಯ ಕ್ಷಿಪ್ರ ವೇಗದ ಸಂಪರ್ಕ ಸಾಧನಗಳಿದ್ದೂ ದೇಶ ದೇಶಗಳ ನಡುವಣ ಅಜ್ಞಾನ ರಾಶಿ ವಿಸ್ತಾರವಾಗುತ್ತಲೇ ಇದೆ. ಭಾರತೀಯ ರಾಯಭಾರಿ ಕಚೇರಿಗಳಂತೂ ಈ ವಿಷಯದಲ್ಲಿ – ಸಾರ್ವಜನಿಕ ಸಂಪರ್ಕ ವಿಧಾನದಲ್ಲಿ ವಿಶೇಷ ಕೆಲಸ ಮಾಡಿದ ಹಾಗೆ ತೋರಲಿಲ್ಲ. ನಮ್ಮ ದೇಶದ ಸರಿಯಾದ ಪರಿಜ್ಞಾನವನ್ನು ಒದಗಿಸುವ ಸಾಹಿತ್ಯವೂ ಕಡಿಮೆ, ಈ ಸಾಹಿತ್ಯವನ್ನು ಪಶ್ಚಿಮಕ್ಕೆ ಒಗ್ಗುವ ನೂತನ ವಿಧಾನಗಳಲ್ಲಿ ತಯಾರಿಸದೆ ಅವರು ಅದನ್ನು ಮುಟ್ಟಲಾರರು. ನಮ್ಮ ದೇಶದ ಪ್ರವಾಸಿ ಸಾಹಿತ್ಯವನ್ನೇ ತೆಗೆದುಕೊಳ್ಳೋಣ. ಯಾವ ಪ್ರಸಾರ ಕಚೇರಿಗೆ ಹೋದರೂ ಸರಿಯಾದ ನಕಾಶೆಗಳಿಲ್ಲ, ಹೊಟೆಲಿನ ಬಗ್ಗೆ ಮಾಹಿತಿ ಇಲ್ಲ, ಐತಿಹಾಸಿಕ ಪುರವಣಿಗಳಿಲ್ಲ, ಇವನ್ನೆಲ್ಲ ಸರಿಯಾಗಿ ವಿವರಿಸಬಲ್ಲ ಅಧಿಕಾರಿವರ್ಗವೂ ಇಲ್ಲ. ದೇಶದೊಳಗಡೆಯ ಪರಿಸ್ಥಿತಿ ಹೀಗಿದ್ದರೆ, ಹೊರದೇಶಗಳಲ್ಲಿ ಬರಗಾಲದ ಬಜೆಟಿಗೆ ಹೊಂದಿಸಿಕೊಂಡು ಹೋಗಬೇಕಾದ ಪ್ರಚಾರಕಾರ್ಯ ಸೊರಗಿಹೋಗಿದೆ. ಜಾಹೀರಾತು ಇಲ್ಲದೆ ಪ್ರವಾಸೋದ್ಯಮ ಬೆಳೆಯಲಾರದು, ಇದರ ಬಗ್ಗೆ ಪಾಶ್ಚಾತ್ಯ ದೇಶಗಳು ವೆಚ್ಚ ಮಾಡುವಷ್ಟು ನಮಗೆ ತಾಕತ್ತಿಲ್ಲ.

ಆಪಾ ಮನೆಯಲ್ಲಿ ಒಂದು ಸಾಯಂಕಾಲ ಊಟವಿಲ್ಲದ ಬರೇ ವಿನೋದವಾಗಿ ಕಳೆಯಲೆಂದೇ ಕರೆದಿದ್ದರು. ಊಟದ ಹೊತ್ತಿಗೆ ಟೆಲಿವಿಷನ್ ಚಲಾವಣೆ ಮಾಡಿದಾಗಲೇ ನನಗೆ ಇಂದು ಭೋಜನದ ಆಮಂತ್ರಣ ಅಲ್ಲವೆಂದು ತಿಳಿದದ್ದು. ಇದರಿಂದಲೂ ನಿರಾಶೆಗೆ ಕಾರಣವಿಲ್ಲ. ಊಟ ಹಾಗ ಫಲಾರ ಮುಪ್ಪಾಗ – ಬೇಕಷ್ಟು ಫಲಾಹಾರ, ತೀರ್ಥ ಇದ್ದೇ ಇತ್ತು. ಟೆಲಿವಿಷನ್ ನೋಡಲು ಆಮಂತ್ರಿಸುವುದೂ ಒಂದು ಪ್ರಕಾರದ ಅತಿಥಿ ಸತ್ಕಾರವೆಂದು ನನಗೆ ಜ್ಞಾತವಾದದ್ದು ಆಗಲೇ.

ಆಪನ ತಂಗಿಯ ಮನೆಗೆ ರಾತ್ರಿಯ ಊಟಕ್ಕೆ ಹೋಗಿದ್ದೆವಲ್ಲ. ಅಂದು ನನ್ನ ನೆಪದಿಂದ ಕುಟುಂಬದ ಎಲ್ಲ ಸದಸ್ಯರೂ ಸೇರುವಂತಾಯಿತೆಂದು ಅವರೆಲ್ಲ ಬಹಳ ಉಲ್ಲಾಸದಿಂದಿದ್ದರು. ಸ್ವಭಾಷೆಯಲ್ಲಿ ಒಬ್ಬರನ್ನೊಬ್ಬರು ಗೇಲಿಮಾಡುತ್ತ, ನಡುನಡುವೆ ವೈನ್ ಕುಡಿಯುತ್ತ, ಮೂರು ತಾಸು ಕಳೆದೆವು. ಎಲ್ಲರು ನಗುತ್ತಿರುವ ವೇಳೆ ಆಪಾ ಅಷ್ಟು ಹೊತ್ತಿನ ಸಂಭಾಷ

ಣೆಯ ಸಾರವತ್ತಾದ ಅಂಶಗಳನ್ನೂ ನನಗೆ ತಿಳಿಸಿ ನನ್ನನ್ನೂ ಅವರ ನಗೆ ಕಂಪೆನಿಯ ಪಾಲುಗಾರನಾಗುವಂತೆ ಮಾಡುವರು. ವಧುವಾಗಲಿರುವ ಪಿನ್ನೊತ್ತಾ ತನ್ನ ಪತಿಯಾಗಲಿರುವ ವರಮಹಾಶಯನೊಡನೆ ಪ್ರೇಮದ ಗುಂಗಿನಲ್ಲಿ ಪ್ರತ್ಯೇಕವಾಗಿ ಪಕ್ಷಿಸಲ್ಲಾಪ ನಡೆಸುತ್ತಿದ್ದಳು. ಅನಾ ಅವಳ ಅತ್ತಿಗೆಯ ಜತೆ ಮಾತಿನಲ್ಲಿ ತಲ್ಲೀನಳು. ಶ್ರೀಮತಿ ಆಪಾ ತನ್ನ ಅತ್ತೆ ಆಪನ ತಾಯಿ ಜತೆ ಸಂಭಾಷಣೆ ಮಾಡುವಳು. ಟೇಬಲಿನ ಮೇಲಿಟ್ಟಿದ್ದ ವೈನು ಖರ್ಚಾದ ಮೇಲೆ ಅಪಾ ಬರಿದಾದ ಗ್ಲಾಸನ್ನು ಮೇಲಕ್ಕೆತ್ತಿ 'ಇತಾಲಿಯದಲ್ಲಿ ಇವತ್ತಿನಿಂದ ವೈನಿಗೆ ಕ್ಷಾಮ ಬಂದಿದೆ'.ಎಂದು ಘಂಟಾಘೋಷವಾಗಿ ಜಾಹೀರು ಮಾಡಿದರು. ಇದನ್ನು ಕೇಳಿದ ಆತನ ಭಾವನೆಂಟ ಬಾಣದಂತೆ ಒಳಗೆ ಹೋಗಿ ವೈನಿನ ಒಂದು ದೊಡ್ಡ ಪ್ಲಾಸ್ಟಿಕ್ ಕೊಡವನ್ನು ಏದುತ್ತ ಏದುತ್ತ ಹೊತ್ತು ತಂದು ಆಪಾ ಮುಂದೆ ಪ್ರತಿಷ್ಠೆಮಾಡಿ 'ಭಯವಿಲ್ಲ, ಇದನ್ನು ಮುಗಿಸಿದರೆ ಇನ್ನೂ ಒಂದಿದೆ. ದಯಮಾಡಿ ಸ್ವೀಕರಿಸಿ ಉಪಕರಿಸಬೇಕು' ಎಂದು ಅಂಗಲಾಚುವ ನಟನೆ ಮಾಡಿದ.

ಒಂದು ಭಾನುವಾರ ವೆಲೆಂತಿನೋ, ನಾನು, ಆಪಾ ನೇಪಲ್ಸ್‌ಗೆ 30 ಮೈಲು ದೂರದ ಆಪಾನ ವಿಲ್ಲಾಕ್ಕೆ ಭೇಟಿಕೊಟ್ಟೆವು. ಗ್ರೀಷ್ಮದ ರಜಾದಿನಗಳಲ್ಲಿ ವಿಲ್ಲಾಕ್ಕೆ ಆಪಾನ ಕುಟುಂಬ ವಲಸೆ ಹೋಗುವುದುಂಟು. ಚಳಿಗಾಲದಲ್ಲಿ ಅಲ್ಲಿ ಯಾರೂ ಇರುವುದಿಲ್ಲ. ಆಪಾನೇ ಬೀಗ ತೆಗೆದು ತಿಂಗಳಿಗೊಮ್ಮೆ ಅದರ ಉಸ್ತುವಾರಿ ಮಾಡಬೇಕು. ಕಡಲಿಗೆ ಸಮೀಪದ ಈ ವಿಲ್ಲಾ ತಕ್ಕಮಟ್ಟಿಗೆ ದೊಡ್ಡದಾಗಿಯೇ ಇತ್ತು. ಮೇಲಿನ ಮಹಡಿಯಲ್ಲಿ ಹಳೆ ವೈನು ಸಂಗ್ರಹದ ರುಚಿಯನ್ನುಂಡ ಆಪಾ 'ನಾನೊಬ್ಬನೇ ಕುಡಿಯಬೇಕಲ್ಲಾ ಎಂದು ವ್ಯಥೆ ನನಗೆ' ಎಂದು ವ್ಯಥೆಯನ್ನು ಅಭಿನಯಿಸಿದ. ಅಲ್ಲಿಯೇ ಆಪಾನ ಬ್ಯಾಂಕಿನ ವರಿಷ್ಠಾಧಿಕಾರಿ ಕ್ರಾಸ್ತನೋವರ ಪರಿಚಯ ನನಗಾದ್ದು. ಪಂಡಿತ ನೆಹರೂ ಅವರ ವಿದೇಶಾಂಗ ನೀತಿಯ ಬಗ್ಗೆ ಕ್ರಾಸ್ತನೋವರಿಗೆ ಅಭಿಮಾನವಿದ್ದಂತೆ ತೋರಲಿಲ್ಲ. ನಾನು ಶಕ್ತಿಮೀರಿ ಭಾರತೀಯ ತಾಟಸ್ಥ್ಯವನ್ನು ಸಮರ್ಥನೆ ಮಾಡಿದೆ. ಇವರನ್ನು ಬ್ಯಾಂಕಿಗೆ ಕರೆದುಕೊಂಡು ಬಾ ಎಂದು ಕ್ರಾಸ್ತನೋವ ಬೀಳ್ಕೊಡುವಾಗ ಆಪಾನಿಗೆ ಅಪ್ಪಣೆ ಮಾಡಿದರು. ಆದರೆ ನಾನು ಅವರನ್ನು ಮರಳಿ ಕಂಡದ್ದು ಏಳು ತಿಂಗಳ ತರುವಾಯ, ನನ್ನ ಇಷ್ಟೇ ವಾಸದ ಕೊನೆಯ ವಾರ. ಅವರ ಕೊಠಡಿ

ಯಲ್ಲಿ ಆಪಾ ವಿಧೇಯತೆಯ ಮುದ್ದೆಯಾಗಿಬಿಟ್ಟು, ಗಾಂಭೀರ್ಯದ ಮೂರ್ತಿಯಾದ. ಕ್ರಾಸ್ತನೋವ ಇತಾಲಿಯನ್ ಭಾಷೆ ಮಾತ್ರ ಬಲ್ಲರು. ಆದ್ದರಿಂದ ನಮ್ಮ ಸಂವಾದ ಇತಾಲಿಯನ್‌ನಲ್ಲೇ ಜರಗಬೇಕು. ಅನುವಾದಕ ಆಪಾನ ನೆರವಿಲ್ಲದೇನೇ ಭರ್ಜರಿಯಾಗಿ ಅರ್ಧ ಗಂಟೆ ಆರ್ಥಿಕ ಸ್ಥಿತಿಗತಿಗಳಿಂದ ತೊಡಗಿ ಭಾರತೀಯ ವೇದಾಂತದ ವರೆಗೆ ನನ್ನ ಇತಾಲಿಯನ್ ಶಬ್ದ ಭಂಡಾರದಮುದ್ರೆಯನ್ನೊಡೆದು, ಅವರ ವ್ಯಾಕರಣ ಮತ್ತು ನುಡಿಗಟ್ಟಿನಲ್ಲಿ ಕ್ರಾಂತಿಕಾರಕ ಬದಲಾವಣೆಗಳನ್ನು ಮಾಡಿ ಸಂಭಾಷಣೆಯನ್ನು ಮುಂದೊತ್ತಿದೆ. ಹೊರಗೆ ಬರುತ್ತಿದ್ದ ಹಾಗೆ ಆಪಾ ಬೆನ್ನು ಚಪ್ಪರಿಸಿ, "ಬ್ರಾವೊ ಬ್ರಾವೊ, ನೀನು ಈಗ ಒಬ್ಬ ಇತಾಲಿಯನ್ ಆಗಿಬಿಟ್ಟೆ" ಎಂದು ಪ್ರಕಟಿಸಿದ.

ಇನ್ನೊಂದು ದಿನ ನನಗೆ ನೇಪಲ್ಸಿನ ರಾತ್ರಿ ಸೌಂದರ್ಯವನ್ನು ತೋರಿಸುತ್ತೇನೆಂದು ಆಪಾ ನನ್ನನ್ನು ವೊಮೇರೋ ಗುಡ್ಡದ ತುತ್ತ ತುದಿಯ ರೆಸ್ಟುರಾಕ್ಕೆ ಕರೆದುಕೊಂಡು ಹೋದ. ಯಾವುದೋ ಭಾನುವಾರ ಪೊಂಪೇ ಸಂದರ್ಶನ ಮುಗಿಸಿ ಬರುವ ದಾರಿಯಲ್ಲಿ ಆಪಾ ನೇಪಲ್ಸಿನ ಹವಳದ ಕೈಗಾರಿಕೆಯ ಷೋ ರೂಮಿಗೆ ಕರೆದುಕೊಂಡು ಹೋದ. ಮಹಡಿಯ ಮೇಲಿನ ಅಂಗಡಿಯ ತೂಗುಹಲಗೆಗೆ ಕೈ ತೋರಿಸಿ, ನೋಡು, ಅದು ಯಾರು? ಎಂದ. ಕತ್ತೆತ್ತಿ ನೋಡಿದರೆ ಆಪಾ ಎಂದು ಬರೆದಿತ್ತು. 'ಅದರ ಕಥೆ ಮತ್ತೆ ಹೇಳುತ್ತೇನೆ' ಎಂದ. ಹವಳದಂಗಡಿಯಲ್ಲಿ ಸ್ತ್ರೀಯರ ಅಲಂಕರಣದ ಅನೇಕ ಬಗೆಯ ಆಭರಣಗಳನ್ನು ಮಾಡಿಟ್ಟಿದ್ದರು. ಅಲ್ಲಿ ವಿದೇಶೀಯ ಮಹಿಳೆಯರು ಆಭರಣ ಪರೀಕ್ಷೆಗೆ ಬಂದಿದ್ದರು. ಚಿನ್ನದಲ್ಲಿ ಕಟ್ಟಿದ ತರತರದ ಹಾರಗಳು, ಬಳೆಗಳು, ಉಂಗುರಗಳು, ಕಿವಿಓಲೆಗಳು, ಪದಕಗಳು—ನಾನಾ ತರದ ಆಭರಣಗಳನ್ನು ಅಲ್ಲಿ ಚಿತ್ತಾಕರ್ಷವಾಗಿ ಜೋಡಿಸಿಟ್ಟಿದ್ದರು. ಮಿಲಿಯದ ಚೆಕ್ಕು, ಲಿರೇ ನೋಟುಗಳ ಕಂತೆ ಕಂತೆಯೇ ಅದಲುಬದಲಾಗುತ್ತಿದ್ದ ಈ ದೃಶ್ಯವನ್ನು ನೋಡಿ ನನಗೆ ಆಶ್ಚರ್ಯವಾಯಿತು. ನೇಪಲ್ಸಿನಲ್ಲಿ ಹವಳ ಬೆಳೆಯುವುದಿಲ್ಲ. ಆಫ್ರಿಕದ ಟ್ಯುನೀಶಿಯದಿಂದಲೂ ಜಪಾನಿನಿಂದಲೂ ಕಚ್ಚಾ ಹವಳ ತಂದು ಅದರ ಆಭರಣವನ್ನು ತಯಾರಿಸಿ ವಿದೇಶ ವಿನಿಮಯವನ್ನು ಸಂಪಾದಿಸುವ ಕುಶಲ ಕೈಗಾರಿಕೆಯ ಕಿನ್ನಲೆಯಲ್ಲಿರುವ ಇತಾಲಿಯನ್ ಕುಶಲಮತಿಯನ್ನು ಮೆಚ್ಚ

ಬೇಕಲ್ಲವೇ? ಹವಳದ ಆಭರಣಗಳಿಗೆ ನಾಪೊಲಿನಗರ ಪ್ರಖ್ಯಾತವಂತೆ. ಈ ಪ್ರಖ್ಯಾತಿಯನ್ನು ಕಡೆಗಾಣಿಸಬಾರದೆಂದು ನಾನೂ ಹವಳದ ಉಂಗುರ, ಕಿವಿಯ ಲೋಲಕು, ಒಂದು ಅಗ್ಗ ಬೆಲೆಯ ಕಂಠಿ ಖರೀದಿಮಾಡಿ ಇದ್ದ ನನ್ನ ಅಲ್ಪ ಸಂಪತ್ತನ್ನು ಕರಗಿಸಿಕೊಂಡೆ.

ಅಂಗಡಿಯಿಂದ ಹೊರಬರುವಾಗ 'ಇವನೂ ಆಪಾ, ನಾನೂ ಒಬ್ಬ ಆಪಾ' ಎಂದು ಆಪಾ ನಿಡುಸುಯ್ದ. 'ಇದೇನು ಹೀಗೆ ಹೇಳುತ್ತೀರಿ' ಎಂದೆ. 'ಅದೇ ನನ್ನ ಬದುಕಿನ ಕಥೆ, ವ್ಯಥೆ. ಈ ಅಂಗಡಿ ನನ್ನದಾಗ ಬೇಕಿತ್ತು ಗೊತ್ತಾ? ಆದರೆ ನಾನು ಹರಿದಾಸನಲ್ಲವಲ್ಲಾ — ಆದ್ದರಿಂದ ಇನ್ನೊಬ್ಬರಿಗೆ ಹೋಯಿತು' ಎಂದು ತನ್ನನ್ನು ಸಾಕಿದ ಚಿಕ್ಕಪ್ಪನ ತೀರಿ ಕೊಂಡ ಮೇಲೆ ತನ್ನ ಚಿಕ್ಕಮ್ಮ ತನ್ನ ಕಡೆಯವರನ್ನು ಕರೆಯಿಸಿಕೊಂಡು ಆಸ್ತಿಯ ವಿತರಣೆ ಮಾಡಿದ ಕರುಣಕಥೆಯನ್ನು ವಿಸ್ತರಿಸಿ ಹೇಳಿದ. 'ನಿನ ಗೇನು ಕಡಿಮೆಯಾಗಿದೆ, ದೇವರ ದಯವಿಲ್ಲವೇ?' ಎಂದು ನಾನು ಮಾರ್ನುಡಿದೆ. ಭುಜವನ್ನು ಹಿಗ್ಗಿಸಿ ಸ್ನಾಯು ಪ್ರದರ್ಶನ ಮಾಡುವವ ನಂತೆ 'ದುಡಿಯುವವರಿಗೆ ದೇವರ ದಯವಿಲ್ಲದೆ ಎಲ್ಲಿ ಹೋಗುತ್ತದೆ?' ಎಂದು ತನ್ನ ಯುದ್ಧಕಾಲದ ಯುದ್ಧಾನಂತರದ ಬವಣೆಗಳ ವರ್ಣನೆಗೆ ತೊಡಗಿದ.

'ಯುದ್ಧ ಕಾಲದಲ್ಲಿ ಭಾರತೀಯ ಸಿಪಾಯಿಗಳು ಗುಂಡು ಹಾಕಿ ನನ್ನನ್ನು ಕೊಲ್ಲುತ್ತಿದ್ದರು. ಆದರೆ ಇಂಗ್ಲಿಷ್ ಮಾತನಾಡಬಲ್ಲ ನಾನು ಬಚಾವಾದೆ, ಎಂದು ಅವರು ತನ್ನನ್ನು ಕೈದಿಯಾಗಿರಿಸಿದರೂ ಸ್ನೇಹದಿಂದ ನೋಡಿಕೊಂಡ ಕಥೆಯನ್ನು ಹೇಳಿದ. ಮುಸಲೀನಿಯ ರಾಕ್ಷಸೀ ಮಹತ್ವಾ ಕಾಂಕ್ಷೆಗಳಿಂದ ಇತಾಲಿಯವು ದ್ವಿತೀಯ ಮಹಾಯುದ್ಧದಲ್ಲಿ ಅತ್ತ ಜರ್ಮನ ರಿಂದಲೂ, ಇತ್ತ ಮಿತ್ರರಾಷ್ಟ್ರಗಳಿಂದಲೂ ಏಟು ತಿನ್ನಬೇಕಾಯಿತು. ಯುದ್ಧ ಆರಂಭವಾದಾಗ ಜರ್ಮನ್ ಪಕ್ಷವನ್ನು ಒಪ್ಪಿದ ಇತಾಲಿಯವು, ಮಿತ್ರರಾಷ್ಟ್ರಗಳ ದಾಳಿಯನ್ನು ತಡೆಯಲಾರದೆ ಜರ್ಮನ್ ಸೇನೆಗಳೆ ಅಲ್ಲಿ ಯುದ್ಧ ಮಾಡಲು ಬರಬೇಕಾಯಿತು. ಅಲ್ಲಿನ ಸ್ವಾತಂತ್ರ್ಯವಾದಿ ಜನಸಾಮಾನ್ಯರು ಸರ್ವತ್ರ ಜರ್ಮನರ ವಿರುದ್ಧ ಪ್ರತ್ಯಕ್ಷ ಯುದ್ಧ ಹೂಡಿ ಸತ್ತರು. ಸ್ವಾತಂತ್ರ್ಯಕ್ಕಾಗಿ ಹೋರಾಡಿದರೂ ಆಯುಷ್ಯರೇಖೆ ಬಲವಾಗಿದ್ದ ಇಂಥ ಜನಸಾಮಾನ್ಯರಲ್ಲಿ ಆಪಾ ಒಬ್ಬರು. ಅಪಾಯವ

ದವಡೆಯಿಂದ ಪಾರಾಗಿ ಪ್ರಾಣ ಉಳಿಸಿಕೊಳ್ಳಲು ಬ್ರಿಟಿಷ್ ಪಥಕಕ್ಕೆ ಸೇರಿದ ಭಾರತೀಯ ಸೈನಿಕರು ನೆರವಾದರೆಂದು ಆಪಾ ಮೇಲಿಂದ ಮೇಲೆ ಹೇಳುತ್ತಿದ್ದರು. ಯುದ್ಧಕ್ಕಿಂತಲೂ ಹೆಚ್ಚು ಕಷ್ಟದ ಕಾಲ ಅದಕ್ಕೆ ಅನಂತರ ಬರುವ ನಿರುದ್ಯೋಗ ಪರ್ವ. ಸಾರಿಗೆ ಸಂಪರ್ಕ, ಉದ್ದಿಮೆ, ಬೇಸಾಯ, ಆಂತರಿಕ ಮತ್ತು ವಿದೇಶ ವ್ಯಾಪಾರಗಳು ಉಧ್ವಸ್ತವಾಗಿ ಮತ್ತೆ ಚಿಗುರುವುದಕ್ಕೆ ಮುನ್ನಿನ ಈ ಸಂಧಿಕಾಲದಲ್ಲಿ ಜನರು ಬಾಳುವೆ ಮಾಡುವ ಸಂಕಟ ಅನಿರ್ವಚನೀಯ. ಮನೆ-ಮಠ-ಸಂಸಾರ ಎಲ್ಲವನ್ನೂ ಕಳೆದುಕೊಂಡು ಆಕಿಂಚನರಾಗಿ ಅಸಹಾಯರಾಗಿ ಬದುಕನ್ನು ಪುನರಪಿ ನಿರ್ಮಿಸಿಕೊಳ್ಳುವ ಭಗೀರಥ ಪ್ರಯತ್ನದಲ್ಲಿ ವಿಫಲರಾಗಿ ಪ್ರಾಣ ಕಳೆದು ಕೊಂಡವರೆಷ್ಟೋ, ದೇಶಾಂತರಕ್ಕೆ ತೆರಳಿದವರೆಷ್ಟೋ. ಆಪಾ ಗಟ್ಟಿ ಜೀವ. ನಾಪೊಲಿಯ ಬೀದಿಗಳಲ್ಲಿ ಸಾಬೂನು, ಗೊಂಬೆ, ಏನೇನೋ ಸರಕು ಮಾರಿ ಜೀವನವನ್ನು ಸಾಗಿಸಿದರಂತೆ. ಅವರ ಹೆಂಡತಿಯೂ ಮನೆಗೆಲಸದ ಆಳಾಗಿ ದುಡಿದರಂತೆ. ಹೊಟ್ಟೆಯನ್ನು ಕಟ್ಟಿಕೊಂಡು, ಸಿಕ್ಕ ಉದ್ಯೋಗದಲ್ಲಿ ದೊರೆತಷ್ಟರಲ್ಲಿ ತೃಪ್ತಿಪಟ್ಟು ಮೂರು ನಾಲ್ಕು ವರ್ಷ ಕಳೆದ ಮೇಲೆ ಬ್ಯಾಂಕಿನ ಕೆಲಸ ಗಿಟ್ಟಿಸಿಕೊಂಡರು. ರಾಜಕೀಯ ನಾಯಕ ವರ್ಗದ ಮಹತ್ವಾಕಾಂಕ್ಷೆಗೆ ಲಕ್ಷಾಂತರ ಜನರ ಜೀವನವನ್ನು ಬಲಿಕೊಡುವ ಜಾಗತಿಕ ಸಮರ ಯುರೋಪಿನ ಜನರ ಸಾಮೂಹಿಕ ಭೀತಿಗಳಲ್ಲಿ, ರಾತ್ರಿ ಕಾಲದ ದುಃಸ್ವಪ್ನಗಳಲ್ಲಿ ಸೇರಿಕೊಂಡಿದೆ. ರಾಷ್ಟ್ರದ ಗೌರವ, ಆ ವಾದ ಈ ವಾದ ವೆಂದು ಮನುಷ್ಯನ ನಾಗರಿಕತೆಗೆ ಕೊಡಲಿ ಏಟಿಕ್ಕುವ ರಾಜಕಾರಣಿಗಳು ಇತಿಹಾಸದಿಂದ ಯಾವ ಪಾಠವನ್ನೂ ಕಲಿಯಲಾರದ ಬುದ್ಧಿಗೇಡಿಗಳೆಂದು ಆಪಾ ಅವರ ಅಚಂಚಲ ಅಭಿಪ್ರಾಯ.

ಆಪಾ ಅವರ ಕುಟುಂಬ ಜೀವನದ ಅಚ್ಚುಕಟ್ಟು ಬಲುಮೋಹಕ. ಮನೆಯಲ್ಲಿ ಅವಶ್ಯಕತೆಗಿಂತ ಹೆಚ್ಚು ಸರಂಜಾಮುಗಳಿರಲಿಲ್ಲ. ಚೆನ್ನಾಗಿ ಸಂಬಳ ಬರುತ್ತಿದ್ದರೂ ಬೇಸಗೆಗೆ ಎಲ್ಲೂ ಪ್ರವಾಸ ಮಾಡಿಬರುವಷ್ಟು ಶ್ರೀಮಂತಿಕೆ ಇದ್ದರೂ ಮನೆಯಲ್ಲಿ ಆಗಲಿ, ಮನೆಮಂದಿಯಲ್ಲಾಗಲೀ ಆಡಂಬರವಿಲ್ಲ.

ಕಾರೂ ಹಳೆಯ ಫೋರ್ಡ್ ಆಂಗ್ಲಿಯ. 'ಇದೇನು ನಿಮಗೆ ಸ್ವದೇ ಶಾಭಿಮಾನವಿಲ್ಲವೆ? ಹೊಸ ಫಿಯೆಟ್ ಯಾಕೆ ಕೊಳ್ಳಬಾರದು?'

ಎಂದು ನಾನು ಕೇಳಿದರೆ 'ಒಂದನೆಯದಾಗಿ. ಇದರ ಮೇಲೆ ನನಗೆ ಪ್ರೀತಿ ಬಿದ್ದಿದೆ – ಪೆಟ್ರೋಲ್ ಚೆನ್ನಾಗಿ ಕೊಡುತ್ತದೆ. ಅಲ್ಲದೆ ನಾನು ವಿದೇಶಿ ಖಾತೆಯವನಲ್ಲವೆ. ಅದಕ್ಕೆ ವಿದೇಶೀ ಕಾರು' ಎಂದು ಉತ್ತರಿಸಿದರು. ನಿಜವಾಗಿ ನೋಡಿದರೆ ಅವರಿಗೆ ಹೊಸ ಕಾರಿನ ವ್ಯಾಮೋಹವಿಲ್ಲ. ಸಾಮಾನ್ಯ ವಾಗಿ ಕಾರು ಪಾಶ್ಚಾತ್ಯ ಜೀವನದ ಒಂದು ಅನಿವಾರ್ಯ ಆವಶ್ಯಕತೆಯೇ ಹೊರತು ಆಡಂಬರ ಸಾಮಗ್ರಿಯಲ್ಲ. ಮಕ್ಕಳೆಂದರೆ ಆಪಾಗೆ ಜೀವ. ಕಿರಿಯವ ವೆಲೆಂತಿನೊ ಅವರ ಕಾರಿನ ಒಂದು ಬಿಡಿಭಾಗದಂತೆ ಯಾವಾ ಗಲೂ ಅವರ ಜತೆ ಕಾರಿನಲ್ಲಿ ಅಡ್ಡಾಡುವನು. ಹಿರಿಯವನನ್ನು ವಿಶ್ವವಿದ್ಯಾ ನಿಲಯಕ್ಕೆ ಕಳಿಸುವ ಹಂಚಿಕೆಯಲ್ಲಿ ಆಪಾ ಅವನಿಗೆ 'ಓದು ಚೆನ್ನಾಗಿ ಓದು' ಎಂದು ಆಗಾಗ ಎಚ್ಚರಿಸುವರು. ಸ್ವತಃ ವಿಶ್ವವಿದ್ಯಾನಿಲಯದ ಪದವೀಧರ ರಲ್ಲದ ಅವರಿಗೆ ಮಕ್ಕಳು ಓದಿ ವಿದ್ಯಾವಂತರಾಗಬೇಕೆನ್ನುವ ಆಸೆ. ಭಾರತ ದಲ್ಲಿರುವಂತೆ ಹೆತ್ತವರಿಗೆ – ಅದರಲ್ಲೂ ಬಂಡವಾಳದ ಮುಖ ಕಾಣದ ಬಡ ಮಧ್ಯಮ ವರ್ಗದ ಜನಕ್ಕೆ – ವಿದ್ಯೆಯೊಂದೇ ಬದುಕಿನ ಬೆಳಕಾಗಿದೆ. ಹಳ್ಳಿಪಳ್ಳಿಗಳಲ್ಲಿಯೂ ವಿದ್ಯಾತೃಷೆ ಸಾಂಕ್ರಾಮಿಕವಾಗಿ ಇತಾಲಿಯದಲ್ಲಿ ಹರಡಿದೆ. ಆದರೆ ವಿಶ್ವವಿದ್ಯಾಲಯಗಳ ಸಂಖ್ಯೆ ಬಹಳ ಕಡಿಮೆ. ತಾಲೂಕು ಪಂಚಾಯತು ಕೇಂದ್ರಗಳಲ್ಲಿಯೂ, ಕಾಲೇಜುಗಳು ತಲೆ ಎತ್ತುವುದು ಇತಾಲಿಯದಲ್ಲಿ ಸಾಧ್ಯವಿಲ್ಲ. ಕಾಲೇಜು ವಿಶ್ವವಿದ್ಯಾನಿಲಯ ಎರಡೂ ಒಂದೇ ಕಡೆ ಇರುವ, ಕೇಂದ್ರೀಯ ಐರೋಪ್ಯ ಸಂಪ್ರದಾಯದಲ್ಲಿ ನಡೆ ಯುವ ವಿಶ್ವವಿದ್ಯಾನಿಲಯದ ಶಿಕ್ಷಣ ಸಾರ್ವತ್ರಿಕವಾಗಿ ಹರಡಿಲ್ಲ.

ಮೇ ೧ನೇ ತಾರೀಕು ನೇಪಲ್ಸಿನಲ್ಲಿ ನನ್ನ ಕೊನೆಯ ದಿನವೆಂದು ತಿಳಿದ ಆಪಾ ಒಂದು ವಾರದ ಮೊದಲೇ ನನ್ನನ್ನು ಆಮಂತ್ರಿಸಿ ಊಟ ಹಾಕಿದರು, ಉಡುಗೊರೆ ಕೊಟ್ಟರು – ನನಗೊಂದು ಡೈರಿ ನನ್ನ ಹೆಂಡತಿಗೆ ಒಂದು ಮಣಿಹಾರ ಮತ್ತು ಸ್ಕಾರ್ಫ್. ಅವರ ಮನೆಯ ಮಕ್ಕಳನ್ನು ಅಷ್ಟು ಹೊತ್ತಿಗೆ ಸಾಕಷ್ಟು ಬರುತ್ತಿದ್ದ ಇತಾಲಿಯನ್ ಭಾಷೆಯಲ್ಲಿ ನಕ್ಕು ನಗಿಸಿದೆ. ಆ ಮೇಲೆ ನನ್ನನ್ನು ಹೋಟಲಿಗೆ ತಲಪಿಸಿ ಆಪಾ ಗಟ್ಟಿಯಾಗಿ ವಿಶ್ವಾಸದಿಂದ ಕೈ ಕುಲುಕಿದರು, ತಬ್ಬಿಕೊಂಡರು. ಮುಂದೆ ಯಾರು ಬೇಕಾದರೂ ತನ್ನ ಅಥವಾ ತನ್ನ ಬ್ಯಾಂಕಿನ ಸೇವೆಯನ್ನು ಪಡೆಯಬೇಕೆಂದು ಆಹ್ವಾನಿಸಿದರು. ನಾನೂ ಅವರಿಗೆ ಉಡುಪಿಗೆ ಬರಲು ಆಮಂತ್ರಣವನ್ನು ಕೊಟ್ಟೆ. ಆವು

ತಿಂಗಳ ಕಾಲ ಸಂತತವಾಗಿ ಸ್ನೇಹವರ್ಷವನ್ನು ಕರೆದು ಈ ದೂರ ದೇಶ ದಲ್ಲಿಯೂ ನಾನು ಏಕಾಂಗಿಯಲ್ಲವೆಂಬ ಭಾವನೆಯನ್ನು ಮೂಡಿಸಿ ನನ್ನ ಹೃದಯದಲ್ಲಿ ಪ್ರೀತಿ-ವಿಶ್ವಾಸಗಳನ್ನು ತುಂಬಿಸಿದ ಆಪಾ ಮರೆಯಲಾಗದ ಮಹಾ ಜೀವ.

ಒಂದು ಭಾನುವಾರ, ಜರೋ ಎಂದು ಮಳೆ ಹೊಯ್ಯುತ್ತಿದೆ. ಇಂಥ ಮಳೆಯಲ್ಲಿ ಆಪಾ ಬಂದಾರೆ ಎಂದು ಶಂಕಿಸುತ್ತಿದ್ದ ನನಗೆ ಗಾಜಿನ ಕಿಟಿಕಿ ಯಿಂದ ಅವರು ಕಾದು ನಿಲ್ಲಿಸುವ ನೋಟ ತೋರುವುದು. ನಾನು ಲಿಫ್ಟಿ ನಲ್ಲಿಳಿಯುವಷ್ಟಕ್ಕೆ ಲೇಫೋಂತಾನೇ ಮಹಾದ್ವಾರವನ್ನು ನೂಕಿ ಟೊಪ್ಪಿ ಯನ್ನು ತಲೆಯಿಂದಿಳಿಸಿ, ನೀರು ಕೊಡಹಿ, ಜೊಸೆಪ್ಪೆ-ಹತ್ತಿರ ವಿಚಾರಿಸಿ ನನ್ನನ್ನು ಕಂಡಕೂಡಲೆ 'ಎಕ್ಕೊ, ಫ್ರೊಫೆಸೋರೆ ಅರ್ರಿವಾತೋ (ಬಂದರು) ಎನ್ನುವ ಆಪಾ ಅವರ ಉಲ್ಲಸಿತ ಕಂಠಶ್ರೀ, ಮುಖಮುದ್ರೆ ಇತಾಲಿಯನ್ ಸ್ಮರಣ ಸಂಪುಟದಲ್ಲಿ ಸ್ಥಿರವಾಗಿದೆ: ನಾನು ಸ್ನಾತಕನಾದ್ದು ಉತ್ಸಾಹದ ಮೂರ್ತಿ, ಮತ್ತು ವಿನೋದದ ಚಿಲುಮೆಯಾಗಿದ್ದ ಆಪನ ಪ್ರೀತಿಸಾಗರದ ಸುಖೋಷ್ಣದಲ್ಲಿಯೋ ಅಥವಾ ಇಸ್ಮೇ ಅಧ್ಯಯನ ಮಂಡಲದ ಮಹಿಮೆ ಯಲ್ಲಿಯೋ ಹೇಳಲಾರೆ.

## □ □ ದೇವಗ್ರಾಮ

ತ್ರುಪ್ಪೆತೊ – ತೆಂಕ ಇತಾಲಿಯದ ಒಂದು ಅಪ್ರಸಿದ್ಧ ಹಳ್ಳಿ ಸಾಮ್ರಾಜ್ಯಶಾಹಿಯ ತೃಷ್ಣೆಗೂ, ಸಾವಿರಾರು ವರ್ಷಗಳಿಂದ ನಡೆದು ಬಂದ ವೃಕ್ಷಘಾತಕರ ದುಷ್ಕರ್ಮಕ್ಕೂ ತುತ್ತಾದ ಬೋಳು ಬಂಜರು ಪ್ರದೇಶದಲ್ಲಿರುವ ನೂರಾರು ಹಳ್ಳಿಗಳಂತೆ ಇದೂ ಒಂದು. ಬಡತನ, ರೋಗ, ಬವಣೆ, ದುಗುಡ, ದುಮ್ಮಾನಗಳಿಗೆ ಕೊನೆಯಿಲ್ಲದ ಸಂಸಾರಚಕ್ರದಲ್ಲಿ ಸಿಲುಕಿದ ತ್ರುಪ್ಪೆತೊ ಇಪ್ಪತ್ತನೆಯ ಶತಮಾನದ ಉತ್ತರಾರ್ಧದಲ್ಲಿಯೂ ಗರೀಬ ಜನರ ಆಶೋತ್ತರಗಳಿಗೆ ಸಮಾಧಿಸ್ಥಳವಾಗಿತ್ತು. ಇಲ್ಲಿಗೆ ರಾಜಧಾನಿ ರೋಮ್ ನಗರದ ಸ್ನೇಹಹಸ್ತ, ಕೃಪಾಶೀರ್ವಾದ ಮುಟ್ಟದು. ಬಡಗ ಇತಾಲಿಯದ ಸಿರಿವಂತಿಕೆ, ಬಿಗುಮಾನ, ದರ್ಪ, ಪೆಂಪುಗಳು ಇಲ್ಲಿನ ದರಿದ್ರ ಸಮಾಜಕ್ಕೆ ಒಂದು ದಂತಕಥೆಯಂತೆ, ಯಾವುದೋ ದೇಶಾಂತರದ ಐತಿಹ್ಯದಂತೆ ಕಾಣುವುದು ಸಹಜ. ದಾರಿದ್ರ್ಯಮೂಲವಾದ ದ್ವೇಷ, ಅಸಹನೆ, ಅನೈತಿಕ ಜೀವನ, ಹಿಂಸೆ, ಕೊಲೆ ಮುಂತಾದ ಅಸದ್ವರ್ತನೆಗಳಿಗೆ ತೆಂಕದ ನೂರು ಹಳ್ಳಿಗಳಂತೆ ತ್ರುಪ್ಪೆತೋ ಕೂಡ ಒಂದು ಆಡುಂಬೊಲವೇ ಆಗಿತ್ತು – ಹಚ್ಚಹೊಸ ಕ್ರಾಂತಿಧ್ವಜಗಳನ್ನೇರಿಸಿಕೊಂಡ ಇಪ್ಪತ್ತನೆಯ ಶತಮಾನದ ಉತ್ತರಾರ್ಧದಲ್ಲಿ. ಅತ್ಯಂತ ಆಧುನಿಕವೆನಿಸಿಕೊಂಡ ಶತಮಾನದಲ್ಲಿಯೂ ಎಲ್ಲೆಲ್ಲೂ ಪ್ರಾಚೀನ ಕಾಲದ ದಾರಿದ್ರ್ಯ, ರೋಗ, ಹಿಂಸೆ, ಮೃತ್ಯು, ಕೊಲೆ, ಸುಲಿಗೆ. ಇಲ್ಲಿರುವವರು ಮನುಷ್ಯರೋ, ಮೃಗಗಳೋ – ಹೇಳುವವರು ಯಾರು? ಕೇಳುವವರು ಯಾರು?

ತಮಗೆ ಹೇಳುವವರು ಕೇಳುವವರು ಯಾರೂ ಇಲ್ಲ, ದಿಕ್ಕಿಲ್ಲ ದಿಶೆಯಿಲ್ಲ, ದೇವರಿಗೂ ತಮ್ಮ ಮೇಲೆ ಕನಿಕರವಿಲ್ಲ – ಎಂದು ಗೋಳಾಡುವ

ಗರೀಬ ಹಳ್ಳಿ ತ್ರಪ್ಪೆತೊಗೆ ಒಂದು ದಿನ ಒಬ್ಬ ಮನುಷ್ಯ ಅವತರಿಸಿದ. ಜೇಬಲ್ಲಿ 30 ಲೀರೆ (=25 ಪೈಸೆ) ಭದ್ರವಾಗಿರಿಸಿಕೊಂಡು ರೈಲ್ವೆ ಸ್ಟೇಶನ್ನಿನಿಂದ ಊರೊಳಗೆ ಅವನಿಳಿದಾಗ ಯಾರೂ ಅವನನ್ನರಿಯರು. ಕಡಲ್ಕರೆಯ ಐವತ್ತು ಮಂದಿ ಬೆಸ್ತರ ಗುಂಪು ಅವನ ಸುತ್ತಲೂ ಸೇರಿ 'ನಿನಗೆ ಇಲ್ಲೇನು ಕೆಲಸ?' ಎಂದು ಕೇಳಿದಾಗ ಆ ಮನುಷ್ಯ 'ನಿಮ್ಮ ಜತೆಯಲ್ಲಿ ಇರಲು ಬಂದೆ' ಎಂದು ನುಡಿದು ಅವರನ್ನು ಚಕಿತಗೊಳಿಸಿದ. 'ನನ್ನ ಕೆಲಸ ಇಲ್ಲೇ ಎಂದು ದೇವರು ಅಪ್ಪಣೆ ಮಾಡಿದ್ದಾನೆ' ಎಂಬ ಮಾತನ್ನು ತಡೆಹಿಡಿದು, ನನ್ನ ಜತೆ ಯಾರು ಬರುತ್ತೀರಿ?' ಎಂದು ಕೆಲ ಬೆಸ್ತರನ್ನು ಕರೆದುಕೊಂಡು ಊರು ಸುತ್ತಲು ಹೊರಟೇಬಿಟ್ಟ.

ಅಲ್ಲಿ ಇಲ್ಲಿ ಕಣ್ಣು ಹಾಯಿಸಿದಾಗ ಮೊತ್ತಮೊದಲು ಒಂದೆರಡು ಮನೆ ಕಟ್ಟಬೇಕು—ತಂದೆ ತಾಯಿ ಕಳಕೊಂಡ ತಬ್ಬಲಿಗಳಿಗೆ, ಗಂಡನಿಲ್ಲದ ವಿಧವೆಯರಿಗೆ, ಆಶ್ರಯವಿಲ್ಲದ ವೃದ್ಧರಿಗೆ ಅಶನವೀಯಬೇಕು, ವಸನವೀಯಬೇಕು, ಕರುಣೆಯನ್ನು ಸಿಂಪಡಿಸಿ ಅವರ ಮನುಷ್ಯತ್ವವನ್ನು ಜಾಗೃತಗೊಳಿಸಬೇಕು ಎನಿಸಿತು ಅವನಿಗೆ. ಈ ಪಾರ್ತಿನಿಕೊ ಪ್ರದೇಶದಲ್ಲಿ ಜೀವದ ಭೀತಿಯಿಲ್ಲದ ಕಳ್ಳಕಾಕರ, ದರೋಡೆಕೋರರ ಹಾವಳಿ. ಅದರ ಉಪಶಮನಕ್ಕಾಗಿ, ಆ ಪ್ರದೇಶದ ಅಸಹಾಯ, ಅನಾಥ ಜನರಿಗಾಗಿ, ಕೃಪಾಲಯ ಒಂದನ್ನು ಕಟ್ಟಬೇಕು. ಇದು ತನ್ನ ದೈವಪ್ರೇರಣೆ. 'ನನ್ನ ಜತೆ ಯಾರಿದ್ದೀರಿ?' ಎಂದು ಆ ಮನುಷ್ಯ ಮತ್ತೊಮ್ಮೆ ಸುತ್ತಣ ಗರೀಬರನ್ನು ಕೇಳಿದ, ಕೇಳಿದಂತೆ ಮಾಡಿದ. ಅವರು 'ನಾವು' ಎನ್ನುವ ಮೊದಲೇ ಅವನಿಗೆ ಜವಾಬು ಬಂದಿತ್ತು—ಅವನ ಅಂತಶ್ಚೇತನದ ಕುಹರದಿಂದ—ಗುಹಾವಾಣಿ, ಪರ್ವತವಾಣಿ, ಆಕಾಶವಾಣಿ—ದೇವವಾಣಿ: ನಾನಿದ್ದೇನೆ, ನಡೆ ಮುಂದೆ, ನಡೆ ಮುಂದೆ, ನುಗ್ಗಿ ನಡೆ ಮುಂದೆ!

ನುಗ್ಗಿದ. ತಗ್ಗಿ ಬಗ್ಗಿ ನೂರು ವಿಘ್ನಗಳನ್ನಾಚೆಗೆ ನೂಕಿ ನುಗ್ಗಿದ ಧೀರ ದಾನಿಲೊ ದೊಲ್ಚಿಯೇ ಆ ಮನುಷ್ಯ. ಮರುದಿನವೇ ದೊಲ್ಚಿ ಮನೆ ಕಟ್ಟುವ ಸ್ಥಳದ ಆಯ್ಕೆಗೆ ಹೊರಟ. ಇದೇ ಸರಿ ಎಂದು ಒಂದು ಕಡೆ ನಿಂತ. ನಿಂತಲ್ಲೇ ನೀರಿನ ಕೊಳವೆ ನೆಲದಡಿಯಲ್ಲಿ ನೆಟ್ಟದ್ದು ಒಂದು ಆಕಸ್ಮಿಕ, ಸೋಜಿಗ. ಸ್ಥಳದ ಮಾಲಿಕ 370,000 ಲೀರೆ ಬೇಡಿದ. ದನಿಲೋ ತನ್ನ ಜೇಬು ಮುಟ್ಟಿದರೆ ಅಲ್ಲಿದ್ದುದು ಅದೇ 30 ಲೀರೆ. ಆದರೆ ಕೈಗೆ ತಗಲಿದ

ಜೇಬು, ಲೋಹ, ಬಟ್ಟೆ, ತೊಗಲು, ಅಸ್ಥಿ ಮಾಂಸಗಳ ಅಂತರಾಳದಲ್ಲಿ ಹುದುಗಿದ ಯಾವುದೋ ಸತ್ವ ನುಡಿಯಿತು– ನಡೆ ಮುಂದೆ. ಬತ್ತದ ಕರುಣೆಯ ಚಿಲುಮೆಯಲ್ಲಿ ದೇವರ ನೆರಳು ಕಂಡ ದನಿಲೋ ಎಲ್ಲಿಲ್ಲದ ಉತ್ಸಾಹದಿಂದ 'ಅದೇನು ದೊಡ್ಡದು, ದೇವರು ಕೊಟ್ಟೇ ಕೊಡುತ್ತಾನೆ' ಎಂದ. 'ದೇವರು ಕೊಟ್ಟಾನು ಸರಿಯೆ, ನೀನು ಯಾವಾಗ ಕೊಟ್ಟೀಯಾ?' ಎಂದ ಬಣಜಿಗ. 'ಅಯ್ಯೋ, ಮೂರೇ ದಿನದಲ್ಲಿ ನೋಡಿ' ಎಂದುಬಿಟ್ಟ ಮೂವತ್ತು ಲೀರೆ ಭೂಪತಿ ದನಿಲೋ.

ಮಾರನೆದಿನ ದನಿಲೊ ಮತ್ತೆ ರೈಲು ಹತ್ತಿ ಬಡಗಣ ಇತಾಲಿಯಾದ ಯಾವುಯಾವುವೋ ನಗರ ಸುತ್ತಿ 1000,000 ಲೀರೆ ತಂದು ಸ್ಥಳವಂತನ ಕೈಯಲ್ಲಿಟ್ಟು, ಉಳಿದದ್ದನ್ನು ದೇವರು ಕೊಟ್ಟೇ ಕೊಡುತ್ತಾನೆ' ಎಂದ. ಮಾಲಕನ ಮನೆ ಮೆಟ್ಟಲಿಳಿದು ಹಳ್ಳಿಯ ಕೇರಿ ತಿರುಗಾಡುವ ದನಿಲೋಗೆ ಒಬ್ಬ ಮುದುಕನ ಕೆಮ್ಮು ಕೇಳಿಸಿತು, ಆಲಿಸಿದ, ಒಳಗೆ ನಡೆದ. ರುಗ್ಣಶಯ್ಯೆಯಲ್ಲಿದ್ದ ಮುದುಕನ ಕೈ ಹಿಡಿದು 'ಮದ್ದು ತರಲೇ' ಎಂದ. 'ಯಾರು ಮಗೂ?' ಜೋಲ್ದೊಗಲಿನ ಮೊಳಕೈ ದನಿಲೋನ ಮಿದುವಾದ ಹಸ್ತಗಳನ್ನು ಗಟ್ಟಿಯಾಗಿ ಅಮುಕಿತು. ದನಿಲೊ ದಿಡೀರೆದ್ದು ಹತ್ತಿರದ ಬಲೆಸ್ಸಾತೆ ಪಟ್ಟಣದಿಂದ ಔಷಧಿ ತಂದು ಹಾಸಿಗೆಹಿಡಿದ ಅಜ್ಜನನ್ನು ಕೂರಿಸಿದ, ನಿಲ್ಲಿಸಿದ, ಓಡಾಡಿಸಿದ. ಹೀಗೇ ಒಂದು ದಿನ ನಾಲ್ಕು ವರ್ಷದ ಕೆಂಪು ಮೂತಿಯ ಮಗುವನ್ನು ಕೇರಿಯ ತುದಿಯಲ್ಲಿ ಕಂಡ. ಚಳಿಗಾಳಿಯ ಶೈತ್ಯಕ್ಕೆ ಮಗುವಿನ ಮೂಗಿನಿಂದ ಸಿಂಬಳ ಸುರಿಯುತ್ತಿತ್ತು, ದನಿಲೊ ಬೀದಿಯಲ್ಲೇ ಡೊಗ್ಗಾಲಿಸಿದ. ಮಗುವಿನ ಮೂಗನ್ನು ಕರವಸ್ತ್ರದಿಂದ ಉಜ್ಜಿದ, ಕೆನ್ನೆಗೊಂದು ಮುತ್ತು ಕೊಟ್ಟು, ಗಾಳಿಯಲ್ಲಿ ಯಾಕೆ ಅಡ್ಡಾಡುತ್ತೀಯಾ, ಮನೆಗೆ ಹೋಗು' ಎಂದ. ಎಲ್ಲಿ ಮನೆ, ಯ್ಯಾರ ಮನೆ? ತಂದೆ ವರೋಡೆಗಿಳಿದು, ತಾಯಿ ಉಪವಾಸಬಿದ್ದು ಸತ್ತಮೇಲೆ ಮಗುವನ್ನು ಕೇಳುವವರು ಯಾರು, ಅದಕ್ಕೆ ಬುದ್ಧಿ ಹೇಳುವವರು ಯಾರು? – 'ನಾನಿದ್ದೇನೆ' ಎಂದ ದನಿಲೋ, 'ನಾನೂ ಇದ್ದೇನೆ' ಎಂದಿತೊಂದು ಅಂತರ್ವಾಣಿ.

ಕಾಲಕ್ರಮೇಣ ದನಿಲೋ ತ್ರಪ್ಪೆತೊ ಗ್ರಾಮಸ್ಥರ ವಿಶ್ವಾಸ ಗಳಿಸಿದ. ಚಳಿಗೂ ಅಂಜದೆ ತಾನು ಕೊಂಡ ಸ್ಥಳದಲ್ಲಿ ಡೇರೆ ಹೂಡಿದ ಈ ಅತಿಥಿಯನ್ನು ಒತ್ತಾಯಪಡಿಸಿ ಒಂದು ಗುಡಿಸಲಿಗೆ ಸೇರಿಸಬೇಕಾದರೆ ಸಾಕು

ಬೇಕಾಯಿತು. ಒಂದೇ ಕೋಣೆಯುಳ್ಳ ಆ ಗುಡಿಸಲಿನಲ್ಲಿ ಇರುವವರಿಗೆ ಸ್ಥಳವಿಲ್ಲದಿದ್ದರೂ ದನಿಲೋ ಅಂಥ ಮಾನ್ಯ ಅತಿಥಿಗೆ ಸ್ಥಳ ದೊರೆಯಿತು. ನಾವೆಲ್ಲ ಅಣ್ಣತಮ್ಮಂದಿರಂತೆ ಬದುಕಬೇಕು, ನಮ್ಮ ಪ್ರಯತ್ನವಿಲ್ಲದೆನೆ ಬೇಕಾದಷ್ಟು ಹಿಂಸೆ, ಕಷ್ಟ ಪ್ರಪಂಚದಲ್ಲಿರುವಾಗ ನಾವೇಕೆ ಅದನ್ನು ಹೆಚ್ಚಿಸ ಬೇಕು? ನಿಮ್ಮ ಹತ್ತಿರ ಏನೂ ಇಲ್ಲ ನಿಜ, ಆದರೆ ವಿಚಾರ ಮಾಡಿ ನೋಡಿ. ನಿಮ್ಮ ಹತ್ತಿರ ಏನೂ ಇಲ್ಲವೆ?–ಪ್ರೀತಿ, ವಿಶ್ವಾಸ, ನಂಬಿಕೆ? ನಿಮ್ಮ ಹತ್ತಿರ ಇದ್ದಷ್ಟನ್ನು ಇನ್ನೊಬ್ಬರಿಗೆ ಕೊಟ್ಟು ನೋಡಿ, ಕೊಟ್ಟದ್ದಕ್ಕೆ ನೂರು ಪಟ್ಟು ಹಿಂದೆ ಬರುತ್ತದೆ, ಬಡ್ಡಿಸಮೇತ ಬರುತ್ತದೆ, ಬಡ್ಡಿ ಅಂದರೆ ಚಕ್ರಬಡ್ಡಿ – ತಿಳಿಯಿತೆ? ದನಿಲೋ ಮಾತು ಅಂದರೆ ಮಾತಲ್ಲ–ಅದು ಕಥೆ.ಕೂಡಿದ ಹಳ್ಳಿಗರ ವ್ಯಥೆ ಹೋಗಲಾಡಿಸುವ ದನಿಲೊ ಹಸನ್ಮುಖಕ್ಕೆ ಹಳ್ಳಿಗರು ಮರುಳಾದರು, ಅವರ ಬರಡು ಬದುಕಿನಲ್ಲಿ ದನಿಲೋ ಒಂದು ಆಸೆಯ ಹೊಂಗಿರಣ ಮೂಡಿಸಿದ, ಬಾರಿಸದೆ ಬಿಟ್ಟ ಒಂದು ಹಳೆ ತಂತಿಯನ್ನು ಮೀಟಿದ. 'ಮುಂದಿನ ಭಾನುವಾರ ಕಳೆದಕೂಡಲೆ ಮನೆ ಕಟ್ಟಲು ಶುರು ಮಾಡಬೇಕು' ಎಂದ. 'ಕಟ್ಟಲೇಬೇಕು' ಎಂದಿತು ನೆರೆದ ಗರೀಬ ಜನಜಂಗುಳಿ. ನನಗಲ್ಲ, ನನಗಲ್ಲ, ಎಂದರು ಎಲ್ಲರೂ. 'ನಮಗೆ, ನಮ್ಮಲ್ಲಿನ ಅನಾಥರಿಗೆ, ಬಲಹೀನರಿಗೆ ಇದು ಮನೆ' ಎಂದು ದನಿಲೋ ಸಾರಿದ.

'ಮೇಸ್ತ್ರೀ, ಶುರು ಮಾಡಯ್ಯ. ಕೂಲಿಯ ವಿಷಯ ಗೊತ್ತಲ್ಲ ದೇವರು ಕೊಟ್ಟಾಗ?' ಎಂದು ದನಿಲೊ ಒಬ್ಬ ಮೇಸ್ತ್ರಿಯನ್ನು ಕೆಲಸಕ್ಕೆ ಹಚ್ಚಿಯೇಬಿಟ್ಟ. 'ದೇವರು ಕೊಡದೆ ಇರುತ್ತಾನೆಯೆ?' ಎಂದುಕೊಂಡ ಆ ಪುಣ್ಯಾತ್ಮ ಕೆಲಸ ತೊಡಗಿದ್ದೇ ತಡ ಎಲ್ಲೆಲ್ಲಿಂದಲೋ ಕಟ್ಟಡದ ಸಾಮಗ್ರಿ ಜಮಾವಣೆ ಆಯಿತು. ಯಾರೋ ಸುಣ್ಣ ಕಡ ಕೊಟ್ಟರು, ಯಾರೊ ಕಲ್ಲಿಗೆ ಸಾಲ ಕೊಟ್ಟರು. ಕಲ್ಲನ್ನು ಕಟ್ಟಡದ ಕಡಿದಾದ ಸ್ಥಳದಲ್ಲಿ ಗಾಡಿ ಎಳೆಯದಿದ್ದಾಗ, ದನಿಲೋ ತಾನೇ ಸೊಂಟ ಕಟ್ಟಿದ. ಕಲ್ಲುಗಳನ್ನು ಚೀಲ ದಲ್ಲಿ ತುಂಬಿ ಬೆನ್ನ ಮೇಲೇರಿಸಿದ. ಅವನಂತೆ ನೆರೆದ ನಾಲ್ವತ್ತು ಜನರೂ ಸೊಂಟಕಟ್ಟಿದರು, ಬೆನ್ನುಕೊಟ್ಟರು, ಹೆಗಲು ಕೊಟ್ಟರು. ಒಂದು ಒಂದೂ ವರೆ ತಿಂಗಳಲ್ಲಿ ಮನೆಯ ಗೋಡೆ ಮುಗಿಯಿತು, ಮಾಡು ಹೊದೆಯಿತು. ದನಿಲೋ ಗುಡಿಸಲು ಬಿಟ್ಟು ಇಲ್ಲೇ ಬಂದುಬಿಟ್ಟ–ಹಗಲೂ ಇರುಳೂ ಇಲ್ಲೇ ಅವನ ವಾಸ. 'ಮನೆ ಆಯಿತು' ಆದರೊಳಗೆ ಮಂಚ, ಬೆಂಚು

ಕುರ್ಚಿ ಬೇಡವೇ – ಪಾಲೆರ್ಮೊಕ್ಕೆ ಹೋದ ದನಿಲೋ ಅವನ್ನೆಲ್ಲ ಸಾಲ ತಂದು ಮನೆ ತುಂಬಿಸಿಕೊಂಡ. ಸಾಲಕ್ಕೆ ಸರ್ಕಾರದ ನೆರವು ಕೋರಿದ, ಸಿಗ ಲಿಲ್ಲ. ಅಷ್ಟು ಹೊತ್ತಿಗೆ ಸಾಲಿಗರು ಬಂದರು, ಬೈದರು, ಛೀಮಾರಿ ಹಾಕಿ ದರು – ಏನು ಮಾಡಿದರೂ ದನಿಲೊ' 'ದೇವರು ಕೊಡುತ್ತಾನೆ, ಸ್ವಲ್ಪ ಸೈರಿಸಬೇಕು' ಎಂಡು ಅಂಗಲಾಚಿದ. ಆದರೂ ಆ ಕಟುಕರು ಕೇಳಲಿಲ್ಲ; ಅವನ ಮೋಟರ್‌ಬೈಸ್ಕಲ್ಲನ್ನು ಒಯ್ದರು. ನಾಲ್ಕು ತಿಂಗಳ ಮೇಲೆ ದನಿಲೋ ಎಲ್ಲಿಂದಲೋ 'ದೇವರು ಕೊಟ್ಟ' ದುಡ್ಡನ್ನು ಕೊಂಡುಹೋಗಿ ಬೈಸಿಕಲ್ಲು ವಾಪಸು ತಂದ. ಗ್ರಾಮಸ್ಥರು ಅಂದು ಕೇಕೆಹಾಕಿದರು – ಬೈಸ್ಕಲ್ಲು ವಾಪಸು ಬಂದದ್ದೊಂದು ಸಮಾರಂಭವಾಯಿತು. ಬೈಸ್ಕಲ್ ಜತೆಗೆ ದನಿಲೊ ಸ್ನಾನಗೃಹದ ಸಾಮಗ್ರಿಗಳನ್ನು ತಂದು ನೂತನ ಮನೆ ಯಲ್ಲಿ ಅದನ್ನು ಕೂಡಿಸಿದ ಮೇಲೆ ಗ್ರಾಮದ ಸರ್ವ ದರಿದ್ರ ಮಹಿಳೆಯ ರಿಗೂ, ಮಹನೀಯರಿಗೂ ದನಿಲೋ ಕಟ್ಟಿದ ಮನೆ ಯಾತ್ರಾಸ್ಥಳವಾ ಯಿತು. ಇದಕ್ಕೊಂದು ಒಳ್ಳೆಯ ಹೆಸರು ಕೊಡಬೇಕು. ದೇವರು ಕೊಟ್ಟ ಮನೆ ಎಲ್ಲ ಗ್ರಾಮದವರಿಗಾಗಿ – ಆದ್ದರಿಂದ ಇದನ್ನು 'ದೇವಗ್ರಾಮ' **(Borgo Di Dio)** ಎಂದು ಕರೆಯೋಣ ಎಂದು ದನಿಲೋ ನುಡಿ ದಾಗ 'ಅದೇ ಸರಿ' ಎಂದರು ನೆರೆದ ಆಬಾಲವೃದ್ಧರು.

ದೇವಗ್ರಾಮದ ಕಿಬ್ಬದಿಯ ಕಿರುಹಾದಿಯಲ್ಲಿ ಒಂದು ದಿನ ಇಬ್ಬರು ಸಿಪಾಯಿಗಳು ಯಾರೋ ಒಬ್ಬನನ್ನು ಬೆನ್ನ ಹಿಂದೆ ಕೈಕಟ್ಟಿ ಪಟ್ಟಣಕ್ಕೆ ಎಳೆದೊಯ್ಯುತ್ತಿದ್ದರು. ಐದು ಮಕ್ಕಳು, ಹೆಂಡತಿ ಇರುವ ಈ ಗರೀಬ ನೆರೆಯ ಹೊಲದಿಂದ ನಾಲ್ಕು ಕಿಲೋ ದ್ರಾಕ್ಷಿಹಣ್ಣು ಕದ್ದಿದ್ದನಂತೆ, ಮನೆ ಮಂದಿಯ ಉಪವಾಸ ತಾಳಲಾರದೆ ಯಾರೂ ಕಾಣದ ವೇಳೆಯಲ್ಲಿ ಕೈ ಕೊಟ್ಟಿದ್ದನಂತೆ. ಹೊಲದೊಡೆಯನ ಗೃಧ್ರದೃಷ್ಟಿಗೆ ಬಿದ್ದ ಅವನಿಗೆ ಶಿಕ್ಷೆ ಆಗಬೇಡವೆ? ದನಿಲೋ ಸಿಪಾಯಿಗಳನ್ನು ಬೇಡಿಕೊಂಡ, ಅವರು ಕೇಳ ಲಿಲ್ಲ. ಮಾಲಕನಿಗೆ ಪ್ರಾರ್ಥಿಸಿದ; ಆತ ಮನಕರಗಿ ಸಿಪಾಯಿಗಳಿಂದ ಬಿಡಿಸಿ 'ಕದ್ದೆ ಯಾಕೆ?' ಎಂದು ಕೇಳಿದರೆ 'ಕೆಲಸ ಇರಲಿಲ್ಲ, ತಿನ್ನುವುದೇನು? ಮಕ್ಕಳ ಉಪವಾಸ ನೋಡಲಾರದೆ ಕದ್ದೆ' ಎಂದ ಆತ.

ಕೆಲಸ, ಕೆಲಸ, ಕೆಲಸ. ನಿಜ, ದೇವಗ್ರಾಮದ ನೆತ್ತಿಯಲ್ಲಿ ನಿಂತು ಸುತ್ತಲೂ ದಿಟ್ಟಿಸಿದರೆ ಸೋಮಾರಿಗಳೇ, ಅಲೆಮಾರಿಗಳೇ ಕಣ್ಣಿಗೆ ಬೀಳು

ತ್ತಾರೆ. ದನಿಲೊ ಪಲೆರ್ಮೊದ ಆಡಳಿತಗಾರರನ್ನು ಅಂಗಲಾಚಿದ– ಈ ಜನಕ್ಕೆ ಏನಾದರೂ ರಸ್ತೆ, ಸಾರಿಗೆ ಕೆಲಸ ಕೊಡಿಸಿ ಎಂದ– ಅಲ್ಲಿಂದ ಜವಾಬಿಲ್ಲ, ರಸ್ತೆ ನಾವೇ ಮಾಡೋಣ. ಊರಿಗೊಂದು ಹೊಸ ರಸ್ತೆ ಮಾಡುವಾ ಕೂಲಿಗೆ ದೇವರಿದ್ದಾನೆ' ಹತ್ತು ಜನ, ಇಪ್ಪತ್ತು ಜನ. ಮೂವತ್ತು– ಹೀಗೆ ದಿನದಿಂದ ದಿನಕ್ಕೆ ರಸ್ತೆ ಕಾಮಗಾರಿಗೆ ಸ್ವಯಂಸೇವಕರು ಹೆಚ್ಚುತ್ತಲೇ ಹೋದರು. 'ನೋಡಿ, ಇನ್ನು ಬರಬೇಡಿ, ನನ್ನ ಹತ್ತಿರ ಕೆಲಸ ಇಲ್ಲ' ಎಂದ ದನಿಲೊ ಸಂಖ್ಯೆ 60ಕ್ಕೇರಿದಾಗ. ದಿನದ ಕೊನೆಯಲ್ಲಿ ಕಾಳು, ಕಡಿ ಅಂಗಡಿ ಸಾಲ ದನಿಲೋ ದೈನ್ಯಕ್ಕೆ ಸೋತ ಯಾರಾದರೂ ಕರುಣಾಳು ವರ್ತಕನಿಂದ ಸಿಗುತ್ತಿತ್ತು. ಅದೇಕೆ ಒಮ್ಮೆ 10,000 ಲೀರೇ ನಗದು ಸಿಕ್ಕಿತು, ಎಂದು ದಾನಿಲೋ ಹೆಮ್ಮೆಯಿಂದ ಉಬ್ಬಿದ.

ದನಿಲೊಗೆ ಸುದ್ದಿ ಸಿಕ್ಕಿದಾಗ ಆ ಮಗು ಮೃತ್ಯುಮುಖಿವಾಗಿತ್ತು. ಹಸಿವೆ ಹಸಿವೆ ಎಂದು ಬಡಬಡಿಸಿದ ಮಗುವಿಗೆ ತಂದೆ, ತಾಯಿ ಏನನ್ನು ನೀಡದಾದರು. ದನಿಲೋ ಅಲ್ಲಿಗೆ ಹೋಗಿ ರಾತ್ರಿ ಜಾಗರ ಹೂಡಿದರೂ ಅದು ಬದುಕಲಿಲ್ಲ. ಈ ಶಿಶುವಿಹೀನ ಮಾತಾಪಿತರು ದೇವಗ್ರಾಮದ ಪ್ರಥಮ ನಿವಾಸಿಗಳಾದರು. ಮತ್ತೊಂದು ದಿನ ಐದು ಮಕ್ಕಳ ಸಹಿತ ವಿಧವೆಯೊಬ್ಬಳು ದೇವಗ್ರಾಮ ಸೇರಿದಳು. ಆಕೆಯ ಗಂಡನನ್ನು ಮಾಫಿಯಾ ನಿರ್ದಯೆಯಿಂದ ಕೊಂದುಹಾಕಿತಂತೆ. ಸೊಸೆಯ ಹಿಂದೆ ಅತ್ತೆ ಮಾವಂದಿರೂ ಬಂದರು. ಅಸತಿಕಾಲದಲ್ಲಿ ಒಟ್ಟು ಹದಿನೈದು ಮಕ್ಕಳು ಸೇರಿಕೊಂಡವು. ಇನ್ನು ಇನ್ನೂ ಬಂದಾಗ ದನಿಲೊ ನುಡಿದ– ಇಲ್ಲಿ ಸ್ಥಳ ವಿಲ್ಲ, ಆದರೆ ಹಗಲಿಗೆ ನಿಮ್ಮ ಮಕ್ಕಳನ್ನು ಕಳಿಸಿ, ಅವರಿಗೆ ಓದು ಬರಹ ಮಾಡಿಸುವಾ ಎಂದ.

ದೇವಗ್ರಾಮದ ಸ್ಥಳಾಭಾವಕ್ಕಿಂತಲೂ ತ್ರಪ್ಪೆತೋದಲ್ಲಿ ಉದ್ಯೋಗ ಇಲ್ಲದಿರುವುದು ದನಿಲೊ ದೊಲ್ಜಿಯ ಘನಗಂಭೀರ ಸಮಸ್ಯೆಯಾಗಿತ್ತು. ದೇವರಿದ್ದಾನೆ ಸರಿ. ಸಮಸ್ಯೆಗಳೂ ಇದ್ದಾವಲ್ಲಾ? ಸಮಸ್ಯೆಗಳನ್ನು ಮಾಡಿದವನು ಯಾರು? ದೇವರೆ? ಹಾಗಾದರೆ ಅವನೇ ಪರಿಹಾರವನ್ನು ಹುಡುಕಿ ಕೊಡಬೇಕಲ್ಲಾ?

ಹುಡುಕಬೇಕು, ಹುಡುಕಿ ನೋಡಬೇಕು– ದೇವಗ್ರಾಮದ ನೆತ್ತಿಯ ಮೇಲೆ ಸಂಜೆಬಿಸಿಲು ಹಾಯಾಗಿ ಹರಡಿದಾಗ ಬೆಟ್ಟದ ಕಿಬ್ಬದಿಯಲ್ಲಿ ಹರಿವ

ಹೊಳೆಯಲ್ಲಿ ನೀರಿನ ಸೆಳಕೊಂದು ಮಿಂಚಿತು. ಅಯ್ಯೋ, ಎಷ್ಟು ನೀರಿದೆ, ಇದೆಲ್ಲಾ ಕಡಲಿಗೆ ಸೇರಿ ಉಪ್ಪಾಗುವುದರ ಬದಲು ನಮಗೆ ಅನ್ನ ಕೊಡುವಂತಾಗಬಾರದೆ? ದೇವರೇ – ಸರಿ, ಅಣೆಕಟ್ಟು ಹಾಕಿದರೆ ಗ್ರಾಮಸ್ಥರಿಗೆ ಕೆಲಸವೂ ಆಯಿತು, ಹೊಲಕ್ಕೆ ನೀರೂ ಆಯಿತು – ಎಂದು ತನ್ನಲ್ಲೇ ವಟಗುಟ್ಟಿದ ದನಿಲೊ.

## □ □ □ □ ಸತ್ಯಾಗ್ರಹಿ

ಒಪ್ಪೊತ್ತು ಊಟಕ್ಕೆ ಗತಿಯಿಲ್ಲದ ತ್ರಪ್ಪೆತೊ ನಿವಾಸಿಗಳಿಗೆ ಉದ್ಯೋಗ ಮತ್ತು ಆಹಾರ ದೊರಕಿಸುವ ಆಯಾತೊ ನದೀಯೋಜನೆಯನ್ನು ರೋಮ್, ಮಿಲಾನೊ ನಗರಗಳ ಅಧಿಕಾರಸ್ಥರಿಗೆ ದನಿಲೊ ಕಳಿಸಿಕೊಟ್ಟ. ನದಿಗೆ ಒಡ್ಡು ಕಟ್ಟುವ ಕೆಲಸ ಪ್ರಾರಂಭ ಮಾಡಲು ಅನುಮತಿ ಕೊಡಿ. ಅರೆಹೊಟ್ಟೆ ಸಾಯುತ್ತಿರುವ ಮಕ್ಕಳು ಮುದುಕರನ್ನುಳಿಸಿಕೊಳ್ಳಲು ನಮ್ಮ ಹಳ್ಳಿಗೆ ನೆರವು ನೀಡಿ. ಆಯಾತೊ ನದೀಜಲವನ್ನು ನಮ್ಮ ಹೊಲಗಳಿಗೆ ತಿರುಗಿಸಿಕೊಂಡು ಏನಾದರೂ ಬೆಳೆದು ನಿರ್ಬೋಧ ಶಿಶುಗಳನ್ನು ಸಾಕಲು ನೆರವಾಗಿ ಎಂದು ಸರ್ಕಾರದ ಹಲವು ಇಲಾಖೆಗಳಿಗೆ ಅರ್ಜಿ ಸಲ್ಲಿಸಿದರೂ ಉತ್ತರವೇ ಬರದೆ ಹೋದಾಗ ದನಿಲೋ ಕೊನೆಯ ಅಸ್ತ್ರ ಬಿಟ್ಟ. 'ಈ ವಿಷಯದಲ್ಲಿ ನೀವು ಏನನ್ನಾದರೂ ಮಾಡುವವರೆಗೆ ನಾನು ಆಮರಣ ಉಪವಾಸ ಮಾಡುತ್ತೇನೆ' ಎಂದು ಎಚ್ಚರಿಕೆ ನೀಡಿದ. 'ಮೊದಲು ನೀನು. ನಿನ್ನ ಹಿಂದೆ ನಾವೂ ಉಪವಾಸ ಮಾಡುವವರೇ' ಎಂದಿತು ತ್ರಪ್ಪೆತೊ ಜನಸಮುದಾಯ.

ಮಗು ಸತ್ತ ಪುರಕಲು ಮನೆಯಲಿ ಪ್ರಾರ್ಥನೆ ಮಾಡಿ ದನಿಲೊ ಉಪವಾಸ ಪ್ರಾರಂಭಿಸಿಯೇಬಿಟ್ಟ. ಹಸಿವಯಿಂದ ಕಂಗಾಲಾದ ಮಕ್ಕಳ ಸಾವನ್ನು ನೋಡುವುದಕ್ಕಿಂತ ಸಾಯುವುದು ಒಳ್ಳೆಯದು ಎಂಬುದನ್ನು ಜಗತ್ತಿಗೆ ಸಾರುವಂತೆ ದನಿಲೊ ನಿರಶನವ್ರತ ಮುಂದುವರಿಯಿತು. ಅನೇಕ ತ್ರಪ್ಪೆತೊ ನಿವಾಸಿಗಳೂ ಹಾಗೆಯೇ ಪಟ್ಟಣಿಗರೂ ಬಂದಾ 'ನಿನ ಈ ಪ್ರಯತ್ನ ವ್ಯರ್ಥ. ಸುಮ್ಮನೆ ಯಾಕೆ ಸಾಯುತ್ತೀಯಾ?' ಎಂದರು. 'ಏನಾ

ದರೂ ಒಳ್ಳೆಯ ಕೆಲಸ ಆಗಬೇಕಾದರೆ ಯಾರಾದರೂ ಸಾಯಬೇಕಾದದ್ದು ಮನುಷ್ಯರ ಇತಿಹಾಸ ಅಲ್ಲವೆ? ಎಂದು ಅವರಿಗೆ ಸಮಾಧಾನ ನುಡಿದ ದನಿಲೊ. ಆದರೆ ಒಂದು ವಾರದ ನಿರಶನದಿಂದ ದನಿಲೊ ಆರೋಗ್ಯ ಇಳಿಮುಖವಾಯಿತು; ನಾಡಿಯ ವೇಗ ಪತನವಾಯಿತು; ಶ್ವಾಸೋಚ್ಛ್ವಾಸಕ್ಕೆ ತಡೆಯುಂಟಾಯಿತು. ವೈದ್ಯರು ಬಂದು ಪ್ರಾಣ ಅಪಾಯದಲ್ಲಿದೆ ಎಂದರು. ಆದರೂ ದನಿಲೋ ಉಪವಾಸ ಬಿಡಲು ಕೇಳಲಿಲ್ಲ. ಪಲೆರ್ಮೊದಿಂದ ಆಢ್ಯ ಮಹನೀಯರೂ, ಮಹಿಳೆಯರೂ ಆಗಮಿಸಿದರು. ಗಂಭೀರ ಸ್ಥಿತಿಯಲ್ಲಿ ಮಲಗಿದ್ದ ದನಿಲೊ ಹತ್ತಿರ ಅಣೆಕಟ್ಟೆಗೆ ಮತ್ತು ರಸ್ತೆ ಕಾಮಗಾರಿಗೋಸ್ಕರ ಕೂಡಲೇ ಐದು ಮಿಲಿಯ ಲೀರೆ ಕೊಡುವುದಾಗಿಯೂ, ದೇವಗ್ರಾಮದ ಮಕ್ಕಳ ಆರೈಕೆಗೆ ನೆರವು ನೀಡುವುದಾಗಿಯೂ ವಾಗ್ದಾನ ಮಾಡಿದರು. 'ನನ್ನ ಜನ ಕೇಳಿದರೆ ನನ್ನ ಆಕ್ಷೇಪವಿಲ್ಲ' ಎಂದ ದನಿಲೋ. ತ್ರಪೆತೊ ನಿವಾಸಿಗಳು ಸತ್ಯಾಗ್ರಹಿಯ ಸುತ್ತಮುತ್ತ ಸೇರಿ ಸಂತೋಷದಿಂದ ಸಮ್ಮತಿಸಿದರು. ಸ್ವಲ್ಪ ದಿನಗಳಲ್ಲೆ ಒಡ್ಡಿನ ಕೆಲಸ ಆರಂಭವಾಯಿತು. ದನಿಲೋ ಸತ್ಯಾಗ್ರಹ ತೆಂಕ ಇತಾಲಿಯದ ಒಂದು ಕುಗ್ರಾಮವನ್ನು ಉದ್ಧಾರ ಮಾಡಿದ ಈ ಅದ್ಭುತ ಪವಾಡವನ್ನು ನೋಡಲು ಉತ್ತರ ಇತಾಲಿಯದ ಶ್ರೀಮಂತ ನಗರಗಳಿಂದ ಸಂದರ್ಶಕರು ಸಾಲುಸಾಲಾಗಿ ಬರತೊಡಗಿದರು. ಎಲ್ಲರನ್ನೂ ಮಾತನಾಡಿಸಿದ ಮೇಲೆ ಊರಿಗೆ ಒಂದು ಸುತ್ತು ಬನ್ನಿ ಎಂದು ದನಿಲೊ ಅವರನ್ನು ಪ್ರಾರ್ಥಿಸುತ್ತಿದ್ದ. ತೆಂಕ ಇತಾಲಿಯಾದ ಗ್ರಾಮಗಳ ದುರವಸ್ಥೆಯನ್ನು ಪ್ರತಿನಿಧಿಸುತ್ತಿದ್ದ ತ್ರಪ್ಪೆತೋ ಒಬ್ಬ ಮನುಷ್ಯನ ಪ್ರಯತ್ನದಿಂದಾಗಿ ಪ್ರಪಂಚದ ಕಣ್ಸೆಳೆಯಿತು. ರಾಜಕೀಯ ಪುಡಾರಿಗಳಿಗೆ ಅಪಾಯದ ಅರಿವನ್ನುಂಟುಮಾಡಿತು. ಗ್ರಾಮಸ್ಥರಿಗೆ ಸ್ವಾವಲಂಬನೆ ಮತ್ತು ಅನ್ಯೋನ್ಯ ಸಹಕಾರದ ಪಾಠ ಕಲಿಸಿತು.

ಉಂಡುಟ್ಟು ಸುಖವಾಗಿರುವುದನ್ನು ಬಿಟ್ಟು ತೆಂಕ ಇತಾಲಿಯದ (ಸಿಸಿಲಿ ದ್ವೀಪದ) ದರೋಡೆಕೋರ ಪ್ರದೇಶದ ನಟ್ಟನಡುವೆ ಕಡುಬಡವರ ಮಧ್ಯೆ ಜೀವನ ಮಾಡಲೆಳಸಿದ ದನಿಲೊ ದೊಲ್ಚಿ ಮನುಷ್ಯ ಸಮಾಜದ ಅನಾಗರಿಕ ವಿಷಮತೆಗಳಿಗೆ ಒಂದು ಸವಾಲಾಗಿ ನಿಂತಿದ್ದಾನೆ. ಏಸುಕ್ರಿಸ್ತನ ವಿಶ್ವಬಂಧುತ್ವದ ಸಂದೇಶವನ್ನು ಸ್ವಂತ ಜೀವನದಲ್ಲಿ ಅಳವಡಿಸಿಕೊಂಡು ಯುದ್ಧೋತ್ತರ ಇತಾಲಿಯದ ಸಂಕಷ್ಟ ನಿವಾರಣೆಯಲ್ಲಿ ತನ್ನ ಜೀವ

ತೇಯುತ್ತಿದ್ದಾನೆ. ಪಾರ್ತಿನಿಕೋ ಪ್ರದೇಶದ ದಾರಿದ್ರ್ಯ, ಭಯ ಮತ್ತು ಪತನಗಳಿಗೆ ಮನುಷ್ಯನ ಕರುಣೆಯೇ ತಕ್ಕ ಚಿಕಿತ್ಸೆ ಎಂದು ಶೋಧಿಸಿದ್ದಾನೆ. ಆ ಕರುಣೆಯ ಬೆಳಕು ತ್ರಪ್ಪೆತೋ ಅಂಥ ಗ್ರಾಮಗಳ ಮೇಲೆ ಬಿದ್ದರೆ ಪ್ರಾಣ ಜೀವನ ನಡೆಸುವ ವ್ಯಕ್ತಿಗಳು ಮನುಷ್ಯರಾಗಿ ಬಾಳಬಹುದು, ಮಾಫಿಯ (ದರೋಡೆಕೋರರ ಗುಂಪು) ದಂಥ ದುಷ್ಕರ್ಮ ಕಾಂಡದ ಮೂಲವನ್ನೇ ಚಿವುಟಿ ತೆಗೆಯಬಹುದು ಎಂದು ದನಿಲೊ ದೃಢ ನಿರ್ಧಾರ ಮಾಡಿದ್ದಾನೆ. ಸರ್ಕಾರದ ಆಡಳಿತ ಒಡ್ಡಿದ ಎಲ್ಲಾ ಅಡಚಣೆಗಳನ್ನೂ ಧೈರ್ಯದಿಂದ ಇದಿರಿಸಿ, ವಿಫಲನಾದಾಗ ಮೇಲಿಂದ ಮೇಲೆ ಸತ್ಯಾಗ್ರಹವನ್ನು ಹೂಡಿ. ಕೊನೆಗಂತೂ ಹಿಂದುಳಿದ ತೆಂಕ ಇತಾಲಿಯದ ಕಡೆಗೆ ಸರ್ಕಾರಿ ನವರನ್ನು ಹೊರಳಿಸುವುದರಲ್ಲಿ ಯಶಸ್ವಿಯಾಗಿದ್ದಾನೆ. 'ಇಪ್ಪತ್ತನೆಯ ಶತಮಾನದ ಆದರ್ಶ ಸಂತ' ಎಂದು ಆಲ್ಡಸ್ ಹಕ್ಸ್‌ಲಿ ದೊಲ್ಚಿಯನ್ನು ಹೊಗಳಿರುವುದು ತಪ್ಪಲ್ಲ. ಇತಾಲಿಯನ್ ಗಾಂಧಿ ಎಂದೂ ದೊಲ್ಚಿಯನ್ನು ಕರೆಯಬಹುದು.

## □ □ 'ಇಟ್ಟಾರ ಯಾರು ನಿಟ್ಟುಸಿರಿನ ಲೆಕ್ಕಾ?'

ಸರ್ಕಾರ, ವಿಶ್ವಸಂಸ್ಥೆ ಮುಂತಾದವು ಪ್ರತಿ ವರ್ಷ ಹೊರಡಿಸುವ ಅಂಕಿ ಸಂಖ್ಯೆಗಳ ವಿವರದಲ್ಲಿ ಬಡಜನರ ನಿಟ್ಟುಸಿರಿನ ಲೆಕ್ಕಾಚಾರ ಕಂಡುಬರುವುದಿಲ್ಲ. ಆದರೆ ದನಿಲೊ ದೊಲ್ಚಿ ಈ ಲೆಕ್ಕವನ್ನೂ ಹಿಡಿಯಲು ಆರಂಭಿಸಿದ. ದೊಲ್ಚಿಯ ಅಂಕೆಸಂಖ್ಯೆ ನಿರ್ಜೀವ ಸಂಕೇತಗಳಾಗಲಿಲ್ಲ. ಜೀವಂತ ಜನಾಂಗದ ನರಳಿಕೆ, ನಿಟ್ಟುಸಿರಿನ ತುಡಿತವನ್ನು ಅಳೆಯಲು ಅವು ನೆರವಾಗತಕ್ಕದ್ದು. ಪಾರ್ತಿನಿಕೋ ಪ್ರದೇಶದ 161 ದರೋಡೆಕೋರರ ಆರ್ಥಿಕಸ್ಥಿತಿ, ವರಮಾನ, ಶಿಕ್ಷಣಮಟ್ಟ, ಆರೋಗ್ಯ, ಅಪರಾಧ–ದಂಡನೆ–ಮುಂತಾದುವುಗಳ ಚಿತ್ರವನ್ನು ದೊಲ್ಚಿ ತಯಾರಿಸಿದ ಕೋಷ್ಟಕದಲ್ಲಿ ನೋಡಬಹುದು. ಇವರಲ್ಲಿ ಹೆಚ್ಚಿನವರು ಭೂರಹಿತರು. ದಿನಕೂಲಿಯಿಂದ ಉಪಜೀವಿಸುವವರು. ದಿನವೊಂದಕ್ಕೆ 8 ಅಥವಾ ಹನ್ನೆರಡು ಗಂಟೆಯ ದುಡಿತಕ್ಕೆ ಅವರಿಗೆ

ಸಿಗುವುದು 350 ಲೀರೆ. ಇವರಲ್ಲಿ 68 ಜನರು ಶಾಲೆಯ ಮುಖ ನೋಡಿಲ್ಲ, 69 ಜನ ಎರಡು ಮೂರು ಕ್ಲಾಸಿಗೆ ಶಿಕ್ಷಣ ಸಾಕೆಂದವರು. ಸರಿಯಾಗಿ ಓದು ಬರಹ ಲೆಕ್ಕಮಾಡಲು ನಾಲ್ಕೈದು ಜನಕ್ಕೆ ಮಾತ್ರ ಬಂದೀತು; ಇವರಿಗೆಲ್ಲ ಒಟ್ಟುಸೇರಿ 296 ವರ್ಷ ಶಾಲಾ ಶಿಕ್ಷಣ ಒದಗಿಸಿದ ಸಮಾಜ 714 ವರ್ಷದ ಜೈಲು ಶಿಕ್ಷೆ (ಶಿಕ್ಷಣ) ವಿಧಿಸಿದ್ದು ತಪ್ಪಲ್ಲ! ಸಣ್ಣಂದಿನಲ್ಲಿ ಒದಗಿಸದೇಇದ್ದ ಪಾಪಕ್ಕೆ ಇದೀಗ ಪ್ರಾಯಶ್ಚಿತ್ತ. ಆದರೆ ಶಿಕ್ಷಣದ ಬದಲು, ಶಿಕ್ಷೆ – ಜೈಲು, ಗಡೀಪಾರು, ಫಾಶಿ. ಸಮಾಜಕ್ಕೆ ಕಣ್ಣಿಲ್ಲ. ಪಾರ್ತಿನಿಕೋ ಪ್ರದೇಶದಲ್ಲಿ ಕಟ್ಟುತ್ತಿದ್ದ ಆಸ್ಪತ್ರೆಯನ್ನು ದರೋಡೆಕಳ್ಳರ ಹಾವಳಿ ಹೆಚ್ಚಿದಂತೆ ಪೊಲೀಸ್ ಠಾಣೆಯನ್ನಾಗಿ ಮಾರ್ಪಡಿಸಿದ ಸಮಾಜಕ್ಕೆ ಕಣ್ಣಿರಲೇ ಇಲ್ಲ. ಯಾವುದು ಕಾರ್ಯ, ಯಾವುದು ಕಾರಣ ಎಂದು ಸಮಾಜಪುರುಷನ ಕಿಸುಗಣ್ಣಿಗೆ ಕಾಣಿಸದೆಹೋಗಿದೆ.

ದಾರಿದ್ರ್ಯ ಮತ್ತು ಅಜ್ಞಾನ ಮನುಷ್ಯಜನಾಂಗದ ಬೆಂಬಿಡದ ಪರಮ ಶತ್ರುಗಳು. ಒಂದು ಇನ್ನೊಂದಕ್ಕೆ ಪೋಷಕ, ಪ್ರೇರಕ. ಗ್ರಾಮ, ಪ್ರದೇಶ, ಪ್ರಾಂತ, ರಾಜ್ಯ, ವಿಶ್ವ – ಎಲ್ಲಾದರೇನಂತೆ ದಾರಿದ್ರ್ಯ ಮತ್ತು ಅಭಾವಗಳ ಇರವನ್ನು ಮರೆತು ಬಾಳುವ ಯತ್ನ ಸಫಲವಾಗಲಾರದು. ಬಡತನ ಎಲ್ಲಾದರೂ ಇರುವನಕ ಶ್ರೀಮಂತ ನಿಜವಾದ ಶ್ರೀಮಂತನಲ್ಲ; ಅವನ ಶ್ರೀಮಂತಿಕೆಗೆ ಅಪಾಯ ತಪ್ಪಿದ್ದಲ್ಲ. ಇದನ್ನು ಸಿಸಿಲಿಯ 'ಮಾಫಿಯಾ' ದರೋಡೆ ಕಳ್ಳರ ತಂಡ ಜಗತ್ತಿಗೆ ಡಂಗುರ ಸಾರಿತು. ದನಿಲೊ ದೊಲ್ಚಿ ಇಂಥ ಪ್ರದೇಶದಲ್ಲಿಯೂ ಸಾಹಸದಿಂದ ಮುನ್ನುಗ್ಗಿ ಇತಾಲಿಯನ್ ಸರ್ಕಾರದ ಕಣ್ಣಿನ ಪರೆ ಕಳಚಲು ನೆರವಾದ. ಯುದ್ಧೋತ್ತರ ಇತಾಲಿಯದಲ್ಲಿ ತೆಂಕ ಇತಾಲಿಯದ ಆರ್ಥಿಕ ಅಭಿವೃದ್ಧಿಗೆ ಗಮನವನ್ನೂ, ಪ್ರಾಶಸ್ತ್ಯವನ್ನೂ ನೀಡುವಂತೆ, ಈ ಬಗ್ಗೆ ಸಾರ್ವಜನಿಕ ಅಭಿಪ್ರಾಯ ಮೂಡುವಂತೆ, ಸರ್ಕಾರದ ಚಟುವಟಿಕೆ ತೆಂಕದ ತುತ್ತತುದಿಯ ಕುಗ್ರಾಮಕ್ಕೆ ಎಟಕುವಂತೆ ಮಾಡುವಲ್ಲಿ ದನಿಲೊ ದೊಲ್ಚಿಯ 'ಏಕಪಾತ್ರಾಭಿನಯ' ಸಾಕಷ್ಟು ಮಹತ್ತ್ವವನ್ನು ಪಡೆಯಿತು.

ದೊಲ್ಚಿಯ ಮೇಲ್ಪಂಕ್ತಿಯನ್ನೇ ಇನ್ನೊಬ್ಬ ಪಾದ್ರಿ ತುಳಿದಿದ್ದಾನೆ. ಅವನ ಹೆಸರು ಪಾದ್ರಿ ಬೊರೆಲ್ಲಿ. ನಾಪೊಲಿಯಲ್ಲಿ ಯುದ್ಧಾನಂತರದಲ್ಲಿ ತಂದೆಯನ್ನರಿಯದ ಮಕ್ಕಳ ಸಂಖ್ಯೆ ಗಮನೀಯ ಪ್ರಮಾಣದಲ್ಲಿ ಏರಿತಂತೆ.

ಯುದ್ಧಕಾಲದಲ್ಲಿಯೂ, ತತ್‌ಪಶ್ಚಾತ್ ಮೂರು ನಾಲ್ಕು ವರ್ಷಗಳ ಕಾಲವೂ ಅಮೆರಿಕನ್ ಬ್ರಿಟಿಷ್ ಫ್ರೆಂಚ್ ಸೈನಿಕರಿಗೆ ಹುಟ್ಟಿದ ಬೇವಾರಿಸಿ ಮಕ್ಕಳು ದಿಕ್ಕಿಲ್ಲದೆ ಕಿಸೆಗಳ್ಳರಾಗಿಯೋ, ವೇಶ್ಯಾವೃತ್ತಿಯ ದಲ್ಲಾಳಿಗ ಳಾಗಿಯೋ ಕೆಲಸ ಮಾಡುವ ದಾರುಣ ದೃಶ್ಯವನ್ನು ನೋಡಲಾರದೆ ಪಾದ್ರಿ ಬೊರೆಲ್ಲಿ ಅವರ ಸೇವೆಗೆ ಸಿದ್ಧನಾದ. ಮೊದಲು ಅವರಿಗಾಗಿ ಒಂದು ಬಾಂಬುಬಿದ್ದ ಇಗರ್ಜಿಯ ಆಸರೆ ತೋರಿಸಿದ. ಸ್ವಾರಸ್ಯವಾದ ತಮ್ಮ ಪೋಲಿತನವನ್ನು ಬಿಟ್ಟು ಪಾದ್ರಿಯ ಉಪದೇಶದ ಕರೆಗೂ ರಕ್ಷೆಗೂ ಸೇರಿಕೊಳ್ಳಲು ಹುಡುಗರು ಒಪ್ಪಲಿಲ್ಲ. ಸರಿ, ಪಾದ್ರಿ ತನ್ನ ಉಡುಪು ಕಳಚಿ ದರು. ಎಲ್ಲರಂತೆ ಹರಕು ಚಣ್ಣ ಅಂಗಿ ತೊಟ್ಟರು – ತಾನೂ ಪೋಲಿ ಪಂಗ ಡಕ್ಕೆ ಸೇರಿದವನಂತೆ ವೇಷ ಧರಿಸಿ ಅವರ ಜತೆಯಲ್ಲಿ ಲೀನರಾದರು; ನಾಪೊ ಲಿಯ 'ದಾದಾ' 'ಮವಾಳಿ'ಗಳ ನಡುವೆ ಅದೃಶ್ಯರಾದರು. ಎರಡು ತಿಂಗಳ ಕಾಲ ಹದಿವಯಸ್ಸಿನ ಕಿಸೆಗಳ್ಳ ದಳ್ಳಾಳಿ ಯುವಕರ ಸಖ್ಯ ಬೆಳಸಿದರು. ಅವರ ಎಲ್ಲ ತೆರನ ಅನೈತಿಕ ವ್ಯವಹಾರಗಳನ್ನು ನೋಡಿಯೂ ನೋಡದವ ರಂತೆ ನಟಿಸಿದರು. ಒಂದು ರಾತ್ರಿ ಮೂವರು ಪೋಲಿಗಳು ಸೇರಿ ಒಬ್ಬ ಅಮಲೇರಿದ ಅಮೆರಿಕನ್ ನಾವಿಕನ ಕಿಸೆ ಬರಿದು ಮಾಡುವುದನ್ನು ಕಣ್ಣಾರೆ ನೋಡಿದರು. ಕೆಲಸ ಮುಗಿದ ಮೇಲೆ 'ಮಾತೆರ್‌ದೇಯ್ ಇಗರ್ಜಿಗೆ ಯಾರು ಬರುತ್ತೀರಿ? ಈ ಕೊರೆ ಚಳಿಗೆ ಇಲ್ಲಿ ಯಾರು ಇರುತ್ತಾರೆ?' ಎಂದರು. ಆಗ ಆ ಮೂವರು ಪೋಲಿಗಳು ಛದ್ಮವೇಷದ ಪಾದ್ರಿಯ ಬೆನ್ನಲ್ಲಿ ಸಾಗಿದರು. ಎಷ್ಟೊ ವರ್ಷಗಳ ತರುವಾಯ ಹುಡುಗರು ಹಾಸಿಗೆ ಕಂಡರು, ಮುಂಜಾನೆ ಬಿಸಿ ಫಲಹಾರ ಉಂಡರು. ಚಳಿಗಾಲ ಮುಗಿಯುವನಿ ತರಲ್ಲಿ ಮೂವರು ನಾಲ್ವರು ಐವರು ಹೀಗೆ ಗುಂಪುಗುಂಪಾಗಿ ಇಂಥ ಪೋಲಿಗಳು ಮಾತರ್‌ದೇಯ್ ಪ್ರವೇಶ ಮಾಡಿದರು. ಊಟ, ವಸತಿ ಒದಗಿಸುವುದಕ್ಕಿಂತಲೂ ಪಾದ್ರಿ ಬೊರೆಲ್ಲಿಗೆ ತಲೆ ತಿನ್ನುವ ಸಮಸ್ಯೆ ಈ ತರುಣರಲ್ಲಿ ಆತ್ಮ ಗೌರವ ಮತ್ತು ಆತ್ಮವಿಶ್ವಾಸವನ್ನು ಸೃಷ್ಟಿ ಮಾಡುವು ದಾಯಿತು. ಕದಿಯುವುದು ಅಪರಾಧವೇನೂ ಅಲ್ಲ, ಆದರೆ ನಿನ್ನ ಆತ್ಮ ಗೌರವಕ್ಕೇ ಕುಂದು' – ಇದು ಬೊರೆಲ್ಲಿಯ ಮನುಷ್ಯ ಜೀರ್ಣೋದ್ಧಾರ ಕಾರ್ಯಕ್ರಮದ ಮೊದಲ ಪಾಠ. ಸುಮಾರು 10,000 ಸಂಖ್ಯೆಯ ಈ ನತದೃಷ್ಟ ಬಾಲಕರಿಗೆ ಹೊಸ ದಿಗಂತದ ಪರಿಚಯ ಮಾಡಿಕೊಡುವ

ಪ್ರಯತ್ನ ಏಸುಪ್ರಭುಪ್ರಣೀತವಾಗಿ ದನಿಲೊ ದೊಲ್ಚಿ ಸೂಚಿತವಾದ ಮಾರ್ಗದಲ್ಲಿಯೆ ನಡೆಯಿತು.

*   *   *   *

ನಾಪ್ರೊಲಿಯಲ್ಲಿ ಹೊತ್ತೇರುವುದಕ್ಕೆ ಮೊದಲೇ ತಿರುಗಾಟಕ್ಕೆ ಹೊರಟರೂ ಬಂದರುಕಟ್ಟೆ, ವಿಯಾರೋಮ, ವಿಯಾ ಪಾರ್ತೆನೋಪ್ ಮುಂತಾದ ಹಾದಿ ಬೀದಿಗಳಲ್ಲಿ ಇಂಥ ಹುಡುಗರು ನಿಮ್ಮ ಹಿಂದೆಯೆ ನೆಳಲಂತೆ ಬರುತ್ತಾರೆ. 'ಹುಡುಗಿ ಬೇಕೆ, ಹುಡುಗಿ, ಹದಿನೆಂಟೇ ವರ್ಷ!' ಎಂದು ಇತಾಲಿಯನ್ ಭಾಷೆಯಲ್ಲಿ ಗಂಟುಬೀಳುತ್ತಾರೆ. ನೀವು ಮಂಗನ ಹಾಗೆ ಆಚೆ ಈಚೆ ನೋಡಿಕೊಂಡು ಹೋಗುತ್ತಿದ್ದರಂತೂ ಅವರಿಗೆ ನೀವೊಂದು ಕುಳವಾರೆಂದು ಖಚಿತಪಡಿಸಿದಂತೆ. ಆಮೇಲೆ ನಿಮ್ಮನ್ನು ಅಡ್ಡಗಟ್ಟಿ ಮಾತನಾಡಿಸುತ್ತಾರೆ. ರೈಲು ನಿಲ್ದಾಣದ ಆಸುಪಾಸಿನ ಸಂದಿಗಳಲ್ಲಿಯಂತೂ ವೇಶ್ಯಾವೃತ್ತಿ ಹಾಡು ಹಗಲೇ ನಡೆಯುವಂತೆ ತೋರುತ್ತದೆ. ಇಟ್ಟಿಗೆ ಶಿಲೆಕಲ್ಲು ಹಾಸಿದ ಈ ಓಣಿಗಳ ಬಾಗಿಲಲ್ಲಿ ಮಧ್ಯವಯಸ್ಸಿನ ಒಬ್ಬಾಕೆ ನಿಂತು ಬಹಿರಂಗವಾಗಿ ಆಮಂತ್ರಣ ನೀಡುತ್ತಾಳೆ. ಈ ಹುಡುಗರಿಗೆ ಸಿಗರೇಟು ಸೇದಲೂ, ಕುಡಿಯಲೂ ನಾಲ್ಕು ಕಾಸು ಕೊಡುವ ಮಡ್ಡಮ್ಮ ಇವಳೇ. ಚಳಿಗಾಲದಲ್ಲಿ ನಾಪೊಲಿಯ ಬಂದರಕಟ್ಟೆಯಿಂದ ದಿನಂಪ್ರತಿ ಇಳಿಯುವ ತರುಣ ನಾವಿಕರಂತೂ ಇಲ್ಲಿನ ಗಿರಾಕಿಗಳೆಂಬುದು ಸ್ಪಷ್ಟ. ಹಗಲೆಲ್ಲ ವಿಲಾ ಕಮ್ಯೂನಾಲೆ ಉಪವನದಲ್ಲಿ ಸ್ವಾಗತಿಸುವ, ಅಂಗಲಾಚುವ, ಧಾರಣೆ ಬಿಕರಿಯ ಚಟುವಟಿಕೆ ಉಚ್ಛ್ರಾಯದಲ್ಲಿರುತ್ತದೆ. ಸಂಜೆಯಾಗುತ್ತಲೆ ಎಲ್ಲ ಬೀದಿಗಳಲ್ಲಿಯೂ ಮಾರು ಮಾರಿಗೊಬ್ಬಳಂತೆ ಶುಭ್ರಾಲಂಕೃತೆ, ಸುಗಂಧವಾಹಿನಿ ಕೈಯಲ್ಲಿ ವ್ಯಾನಿಟಿ ಬ್ಯಾಗ್ ಹಿಡಿದುಕೊಂಡು ಅನ್ಯಮನಸ್ಕಳಾಗಿ ನಿಮ್ಮ ಪದಾಘಾತಗಳನ್ನು ಆಲಿಸುತ್ತ ನಿಂತು ಕಣ್ಣಾಡಿಸುವ ನೋಟ ನಾಪೊಲಿಯಲ್ಲಿ ಹೇಗೋ ತೆಂಕ ಇತಾಲಿಯದ ಎಲ್ಲ ಪೇಟೆ ಶಹರುಗಳಲ್ಲಿಯೂ ಸಾಮಾನ್ಯ. ವೇಶ್ಯಾವೃತ್ತಿ ಅಲ್ಲಿನ ಗುಡಿಕೈಗಾರಿಕೆಯೂ ಹೌದು, ಉದ್ಯಮವೂ ಹೌದು. ಆಧುನೀಕರಣದ ಈ ಯುಗದಲ್ಲಿ ಬೃಹತ್ ಹೋಟಲುಗಳ ಸಾನ್ನಿಧ್ಯದಲ್ಲಿ ಈ ಉದ್ಯಮದ ಸಂಸ್ಕೃತೀಕರಣವೂ ಆಗಿದೆ. ಮನುಷ್ಯ ಇನ್ನೂ ಪ್ರಾಣಿ ಎಂಬುದನ್ನು ಸಾರುವ ಈ ಪ್ರಾಚೀನ ಉದ್ಯಮದ ಉತ್ಕ

ಷಕ್ಕೆ ತೆಂಕ ಇತಾಲಿಯಾದ ಗ್ರಾಮಾಂತರ ಪ್ರದೇಶದ ದಟ್ಟದಾರಿದ್ರ್ಯ ಒಂದು ಪ್ರಬಲ ಕಾರಣವಾಗಿದೆ.

* * * *

'ಲೇಪೊಂತಾನೆ'ಯಿಂದ ನಡೆದುಕೊಂಡೇ ಕೆಳಗಿನ ರಸ್ತೆಗೆ ಹೋಗಬೇಕಾದರೆ ರಸ್ತೆಯಿಂದ ರಸ್ತೆಗೆ ಪಾವಟಿಗೆ ಕಟ್ಟಿದ್ದಾರೆ. ಪಾವಟಿಗೆಯ ಪಕ್ಕದ ಕಟಾಂಜನಕ್ಕೆ ಒರಗಿ ಒಬ್ಬ ಮುದುಕ ಖಾಯಂ ಬೇಡಲು ನಿಂತಿರುತ್ತಿದ್ದ. ಪ್ರತಿ ಲೀರೆಗೂ ಪೇಚಾಡುತ್ತಿದ್ದ ನಾನು ವಾರಕ್ಕೊಂದೆರಡಾವರ್ತಿ ಅವನ ಹ್ಯಾಟಿಗೆ ಇಪ್ಪತ್ತೊ ಐವತ್ತೋ ಲೀರೆ ಹಾಕಿಬಿಡುತ್ತಿದ್ದೆ. ವಿಯಾರೋಮಕ್ಕೆ ಹೋಗುವ ದಾರಿಯಲ್ಲಿ ಪೇಟೆಯ ನಟ್ಟನಡುವೆ ಒಬ್ಬ ಕುರುಡ ವಯೋಲಿನ್ ಬಾರಿಸುತ್ತ ನಿಂತಿರುವ. ಆರು ತಿಂಗಳೂ ಅದೇ ಸ್ಥಳದಲ್ಲಿ ಭಿಕ್ಷುಕ ವೃತ್ತಿ ಸಾಗಿಸಿದ್ದನ್ನು ನಾನು ನೋಡಿದೆ. ನೂರಾರು ಮಂದಿ ಸ್ತ್ರೀ ಪುರುಷರು ಅವನನ್ನು ದಾಟಿ ಹೋದರೂ ಎಲ್ಲೋ ಒಬ್ಬಿಬ್ಬರು ಮಾತ್ರ ಅವನಿಗೆ ಲೀರೆ ಕೊಡುತ್ತಿದ್ದರು. 'ಧರ್ಮ' ಪರಾಙ್ಮುಖವಾದ ಪಟ್ಟಣಿಗ ಮನೋವೃತ್ತಿ ತೆಂಕ ಇತಾಲಿಯದ ಶ್ರದ್ಧಾಳುಗಳಲ್ಲಿಯೂ ಅಂಕುರಿಸಿರಬೇಕು – ಹನ್ನೆರಡು ವರ್ಷದ ಆರ್ಥಿಕ ಪ್ರಗತಿಯ ಪರಿಣಾಮವಾಗಿ.

* * * *

ಮಳೆ ಸುರಿಯದ ಭಾನುವಾರ ಮುಂಜಾನೆಯ ಫಲಾಹಾರ ಮುಗಿದ ಕೂಡಲೇ ಹುದಾ ಮತ್ತು ಸುಬ್ಬಯ್ಯನ ಜತೆಗೆ ನಗರದ ಪರಿಭ್ರಮಣಕ್ಕೆ ತೊಡಗುತ್ತಿದ್ದೆ. ಮುಖ್ಯ ಬೀದಿಯ ಅಕ್ಕಪಕ್ಕದ ಸಂದಿಗಳಲ್ಲಿ ಯಾವ ಅಂಗಡಿ ಇದೆ, ಅಲ್ಲಿನ ವರ್ತಕರು ಯಾರು, ಗಿರಾಕಿಗಳು ಯಾರು ಎಂಬ ಕುತೂಹಲದಿಂದ ಅನೇಕ ಸಂದಿಗಳಿಗೂ ನಾವು ನುಗ್ಗಿದ್ದುಂಟು. ಕಸ-ಕಡ್ಡಿ-ಕೊಳಕು ಈ ಓಣಿಗಳ ವೈಶಿಷ್ಟ್ಯ. ನೂರು ಮಾರಿಗೊಮ್ಮೆ ಶಾಲೆಗೆ ಹೋಗದ ಮಕ್ಕಳ ಗುಂಪು: ಸಿಗರೇಟು ಸೇದಿಕೊಂಡು, ಗಟ್ಟಿಯಾಗಿ ಬೊಬ್ಬಿಡುತ್ತ, ಮೋಜಿನಲ್ಲಿರುವ ನೋಟ, ಅವರ ಉಡುಪೋ ಕೊಳೆ ಮೆತ್ತಿಕೊಂಡೇ ಇರುತ್ತಿತ್ತು. ಮುಖ ನೋಡಿದರೆ ಎದ್ದ ಮೇಲೆ ತೊಳೆದದ್ದಲ್ಲ. ಸರಕ್ಕನೆ ಇನ್ನೊಂದು ಓಣಿಯಿಂದ ಒಬ್ಬರನ್ನೊಬ್ಬರು ಬೆನ್ನಟ್ಟಿಕೊಂಡು ಬರುವ ಹುಡುಗರು.

ಸೇಬುಹಣ್ಣನ್ನು ಒಂದು ಕೈಯಲ್ಲಿ ಕಚ್ಚಿಕೊಂಡು ಇನ್ನೊಂದರಿಂದ ಜಗಳ ವಾಡುವ ನೋಟ.

* * * *

ತೆಂಕದ ಯಾವುದೋ ಹಳ್ಳಿ. ನಮ್ಮ ಪ್ರವಾಸಿ ಬಸ್ಸು ಚೌಕದಲ್ಲಿ ನಿಂತಿದೆ. ಕಿಟಿಕಿಯೊಳಗಿಂದ 'ಯಾರಿವರು?' ಎಂದು ಕಣ್ಣಿಂದಲೆ ಕೇಳುವ ಸ್ತ್ರೀಯರು. ನಾವು ನಿಂತ ಪ್ಯಾಜ್ಸಾದಲ್ಲಿ ಹೆಚ್ಚು ಜನಸಂಚಾರವಿಲ್ಲ. ಇದ್ದರೂ ಬಲು ನಿಧಾನ. ಮನೆಗಳ ಕಡೆಗೆ ನೋಡಿದರೆ ಕಟ್ಟಿ ನಲ್ವತ್ತು ಐವತ್ತು ವರ್ಷ ಗಳಾದರೂ ಸಂದಿರಬಹುದು ಎನಿಸುತ್ತದೆ. ಒಂದೇ ಮನೆ, ನಾಲ್ಕು ಬಾಗಿಲು, ಅದರೊಳಗೆ ಎಷ್ಟು ಕುಟುಂಬ ವಾಸ ಮಾಡಿದರೂ ಸರಿಯೆ. ಹೊಸ ಮನೆಗಳೇ ಈ ಹಳ್ಳಿಯಲ್ಲಿ ಕಾಣೆಸವು – ಹೊಸ ಕಾರುಗಳೂ ಇಲ್ಲ. ಇಂಡಿಯದಂತೆ ಹತ್ತು ಹದಿನೈದು ವರ್ಷ ಪೂರ್ವದ ಮಾಡೆಲುಗಳಲ್ಲಿ ಒಬ್ಬಿಬ್ಬರು ಅಡ್ಡಾಡುತ್ತಾರೆ.

* * * *

ಹಳೇ ಕಸರ್ತದಿಂದ ಮರಳುವ ಗುಡ್ಡದ ದಾರಿಯಲ್ಲಿ ಒಂಟಿ ಕತ್ತೆಯ ಗಾಡಿ. ಗಾಡಿಯಲ್ಲಿ ತುಂಬಿರುವುದು ಒಣಕಲು ಕೊಂಬೆ–ರೆಂಬೆ. ಚಡಾವಿ ನಲ್ಲಿ ಗಾಡಿಯವನು ಗಾಡಿ ನೂಕುವ ಸಲುವಾಗಿ ನಡೆದುಕೊಂಡೇ ಬರು ತ್ತಿದ್ದ. ಇಷ್ಟು ಕಟ್ಟಿಗೆ ಸಂಪಾದಿಸಲು ಎಷ್ಟು ದೂರ ಹೋಗಿದ್ದನೋ? ಬೆಳಿಗ್ಗೆ ಹೋಗಿರಬೇಕು. ಈಗ ಸಾಯಂಕಾಲ. ಕಟ್ಟಿಗೆ ಮುಟ್ಟಿದ ಮೇಲೆ ಮನೆಯೊಳಗಿನ ಚಳಿ ಹೊರಗೆ ಓಡಬೇಕು, ಮಕ್ಕಳುಮರಿ ಚಳಿಕಾಯಿಸ ಬೇಕು. ಒಲೆಗೆ ಬಿಸಿ ತಗಲಬೇಕು.

* * * *

ಮೊದಲು ಗ್ರೀಕರು, ಆಮೇಲೆ ರೋಮನರು, ತರುವಾಯ ಫ್ರಾನ್ಸಿನ ಬೂರ್ಬನ್ ವಂಶಜರು, ಡ್ಯೂಕರು, ಇಟಾಲಿಯನ್ ಪಾಳೇ ಗಾರರು. ತುಂಡರಸರು, ಕೊನೆಕೊನೆಗೆ ಫುಂಡ ಪೋಕರಿಗಳು ತೆಂಕ ಇಟಾ ಲಿಯದಲ್ಲಿ ವಸಾಹತು ಹೂಡಿ ಇಲ್ಲಿನ ನೆಲ, ಹೊಲ ಮತ್ತು ಜನರ ಮೇಲೆ ಪದರು ಪದರಾಗಿ ಅತ್ಯಾಚಾರ ನಡೆಸಿದ್ದರ ಪರಿಣಾಮವಾಗಿ ಎಪ್ಪೈವತ್ತು ವರ್ಷಗಳಿಂದಲೂ ಈ ಪ್ರದೇಶ ಅಳುಮೋರೆ ಹಾಕಿಕೊಂಡೇ ಇದೆ.

ಕಾಡು, ಮರಮಟ್ಟು ಎಲ್ಲ ನಾಶವಾದ ಮೇಲೆ ನಿಸರ್ಗ ತನ್ನ ಸೇಡನ್ನು ತೆಂಕದ ಪ್ರಜೆಗಳ ಮೇಲೆ ತೀರಿಸಿಕೊಳ್ಳದಿರಲಿಲ್ಲ. ಭೂಸವಕಳಿಯಿಂದಾಗಿ ಸಾವಿರಾರು ಎಕರೆ ಹೊಲ ತನ್ನ ಫಲವತ್ತತೆಯನ್ನು ಕಳೆದುಕೊಂಡು ಬರಡಾಯಿತು. ಮೊದಲೇ ಗುಡ್ಡಬೆಟ್ಟಗಳ ಆಧಿಕ್ಯವುಳ್ಳ ತೆಂಕದ ಹಳ್ಳಿಗಳಲ್ಲಿ ಬೇಸಾಯದಿಂದ ಜೀವನ ನಡೆಸುವುದೂ ಕಷ್ಟವಾಯಿತು. ಬೇಸಾಯ ಹಿಮ್ಮುಖವಾದಮೇಲೆ ಎರಡೇ ದಾರಿ (1) ಊರು ಬಿಟ್ಟುಹೋಗುವುದು: ಅಮೆರಿಕಕ್ಕೋ ಯುರೋಪಿಗೋ ವಲಸೆ ಹೋಗುವುದು. (2) ಇಲ್ಲವಾದರೆ ಬೆಟ್ಟದ ಇರುಕಿನ ಗುಹೆಗಳನ್ನು ಸೇರಿ 'ಮಾಫಿಯಾ' ಪಂಗಡದ ಸುಲಿಗೆ ವೃತ್ತಿಗೆ ಹವಣಿಸುವುದು. ಚಕ್ರವರ್ತಿಗಳು. ರಾಜರು, ಪಾಳೆಯಗಾರರು ಇತಿಹಾಸದ ಕಾಲದಲ್ಲಿ ಜನರ ಶೋಷಣೆ ಮಾಡಿದರು. ಆಧುನಿಕ ಕಾಲದಲ್ಲಿ ಈ ಇಪ್ಪತ್ತನೆಯ ಶತಮಾನದ 50 ವರ್ಷ ತೆಂಕ ಇತಾಲಿಯದ ಹಿತಕ್ಕಾಗಿ ಯಾವ ಕೆಲಸವೂ ನಡೆಯಲಿಲ್ಲ. ಮುಸಲಿನಿಯ ಸರ್ವಾಧಿಕಾರ ಯುಗದಲ್ಲಿ ಜವುಗು ನೆಲವನ್ನು ಒಣಗಿಸುವ ಸಾರ್ವಜನಿಕ ಯೋಜನೆ ಕಾರ್ಯಗತವಾಗಿ ಮಲೇರಿಯದ ಹಾವಳಿಯೊಂದು ಕಡಮೆಯಾಯಿತು; ಆದರೆ ಮುಸಲಿನಿಯ ದೆಸೆಯಿಂದ ತೊಡಗಿದ ದ್ವಿತೀಯ ಮಹಾಸಮರದಲ್ಲಿ ತೆಂಕದ ಜನ ಅತ್ತ ಜರ್ಮನರಿಂದಲೂ ಇತ್ತ ಮಿತ್ರರಾಷ್ಟ್ರಗಳಿಂದಲೂ ಸೈನಿಕ ಚಲನವಲನ, ಬಾಂಬುದಾಳಿ ಇತ್ಯಾದಿ ಹಿಂಸೆಗೊಳಗಾದರು. ಈ ತನ್ಮಧ್ಯೆ ಜನಸಮುದಾಯ ಕಂಗಾಲಾಯಿತು. ಹಸಿವು, ಉಪವಾಸ, ರೋಗ, ಹಿಂಸೆ ಮುಂತಾದ ಮಾನವೀಯ ಪೀಡೆಗಳಿಗೆ ತುತ್ತಾಗಿ ಆರ್ಥಿಕವಾಗಿ ಅತಿ ನಿಮ್ನ ಹಂತದಲ್ಲಿರುವ ತೆಂಕ ಇತಾಲಿಯವನ್ನು ಉದ್ಧರಿಸುವ ಆಗತ್ಯ ಮತ್ತು ಕಾರ್ಯಕ್ರಮಗಳ ವಿಶ್ಲೇಷಣೆಗೂ, ಯೋಜನೆಗಳ ಪ್ರತ್ಯಕ್ಷ ದರ್ಶನಕ್ಕೂ ಮುಂದಿನ ಕೆಲ ಪುಟಗಳು ಮೀಸಲು.

□ □ ಇತಾಲಿಯದ ಇಜ್ಜೋಡು

ನಾನು ಇತಾಲಿಯಕ್ಕೆ ಹೋದ (1962) ಹಿಂದಿನ ವರ್ಷ (1961) ಇತಾಲಿಯನ್ ರಾಷ್ಟ್ರ ಏಕೀಕರಣದ ಶತಮಾನೋತ್ಸವವನ್ನಾಚರಿಸಿತು.

1861ಕ್ಕೆ ಪೂರ್ವದಲ್ಲಿ ಇತಾಲಿಯ ಎಂದರೆ ಬರೇ ಭೌಗೋಲಿಕ ಕಲ್ಪನೆ ಎನಿಸಿದ್ದು. ಫ್ರೆಂಚರು, ಇತಾಲಿಯನ್ ಡ್ಯೂಕರು, ರೋಮ್ ನಗರದ ಪೋಪ್ ಗುರುಗಳು ಮುಂತಾದವರಿಂದ ಹಲಬಗೆಯ ರಾಜಕೀಯ ದುರಾ ಡಳಿತಕ್ಕೆ ಈಡಾದ ಈ ದೇಶವನ್ನು ಕಾವೂರ್, ಮಜ್ಜಿನಿ, ಗರಿಬಾಲ್ದಿಯಂಥ ನಾಯಕರು 1861ರಲ್ಲಿ ಏಕರಾಷ್ಟ್ರವಾಗಿ ರೂಪಿಸಿದರು. ಹೀಗೆ ನೂರು ವರ್ಷಗಳ ಹಿಂದೆ ರಾಜಕೀಯ ಐಕ್ಯ ಸಾಧಿಸಿಕೊಂಡ ಇತಾಲಿಯ ಇನ್ನೂ ಆರ್ಥಿಕ ಏಕೀಕರಣ ಸಾಧಿಸಲು ಅಸಮರ್ಥವಾಗಿದೆ. 1950ರಿಂದ ಯೋಜನೆ ಗಳ ರೂಪರೇಖೆ ಸ್ಪಷ್ಟವಾದರೂ ಅವುಗಳ ಪ್ರತ್ಯಕ್ಷ ಪರಿಣಾಮ ಇನ್ನೂ ಸ್ಪಷ್ಟವಾಗಿ ಮೂಡಿಲ್ಲ. ಇತಾಲಿಯದ ಅರ್ಥ ಮಂಡಲಕ್ಕೆ ಪಕ್ಷವಾತ ಹಿಡಿ ದಿದೆ. ತೆಂಕಣ ಪ್ರದೇಶ ಇನ್ನೂ ದೀನದರಿದ್ರಾವಸ್ಥೆಯಲ್ಲಿರುವಾಗಲೆ ಯುದ್ಧೋತ್ತರ ಜಗತ್ತಿನಲ್ಲಿ ಉತ್ತರ ಇತಾಲಿಯ ಅತಿ ಕ್ಷಿಪ್ರ ಪ್ರಗತಿಯನ್ನು ಸಾಧಿಸಿ ದ್ವಿದಳ ಅರ್ಥಮಂಡಲಕ್ಕೆ (Dual Economy) ಉತ್ತಮ ಉದಾಹರಣೆ ಒದಗಿಸಿದೆ. ಜನೊವ ತೊರಿನೊ, ಮಿಲಾನೊ ನಗರ ಗಳು ರಚಿಸಿದ ಔದ್ಯಮಿಕ ತ್ರಿಕೋನದ ನಗರ–ಉಪನಗರಗಳು, ಅಲ್ಲಿನ ಮಹೋದ್ಯಮಗಳಿಗೆ ಬಿಡಿಭಾಗಗಳನ್ನು ತಯಾರಿಸಿಕೊಡುವ ಚಿಕ್ಕಪುಟ್ಟ ಕೈಗಾರಿಕೆಗಳು, ಸಾರಿಗೆ ಸಂಪರ್ಕದ ನವೀಕರಣ, ಉದ್ದಿಮೆದಾರರ ಸಾಹಸ, ಧೈರ್ಯ, ಅಂತಾರಾಷ್ಟ್ರೀಯ ವಲಯದಲ್ಲಿ ಅವರ ಕೆಚ್ಚು, ಪೈಪೋಟಿ, ಧೃತಿ; ವೇಗಪೂರಿತ ವಾಹನಗಳ ಸಂಚಾರ, ಜನಜೀವನದಲ್ಲಿ ವರಮಾನದ ಉನ್ನತ ಮಟ್ಟದಿಂದ ಲಾಭದಾಯಕ ಐಶಾರಾಮಿನ ಮನೆ, ಬಂಗಲೆ, ಎಲ್ಲಾ ಸಲಕರಣೆ ಸುಖಸೌಕರ್ಯಗಳು; ಕೂಲಿಗಾರರಿಗೂ 800ರಿಂದ 1000 ರೂಪಾಯಿ ಸಂಬಳ – ಇಂಥ ಆರ್ಥಿಕವಾಗಿ ಪ್ರಾಗತಿಕ ಪದ್ಧತಿಯ ನಿರ್ಮಾಣ ಉತ್ತರ ಇತಾಲಿಯಕ್ಕೆ ಸಾಧ್ಯವಾಗಿದೆ. ಆದರೆ ಅದೇಕಾಲದಲ್ಲಿ ಅದೇ ದೇಶದಲ್ಲಿ ತೆಂಕಣ ಭಾಗ ಸಕಲ ವಿಷಯುಗಳಲ್ಲಿಯೂ ಹಿಂದೆ ಉಳಿ ದಿದೆ. ತೆಂಕ ಇತಾಲಿಯದ ಬಡತನದ ಕೆಲವು ಚಿತ್ರಗಳನ್ನು ಹಿಂದಿನ ಪರಿ ಚ್ಛೇದದಲ್ಲಿ ಕೊಟ್ಟಿರುವುದನ್ನು ಇಲ್ಲಿ ಜ್ಞಾಪಿಸಿಕೊಂಡರೆ ಇತಾಲಿಯದ ಆರ್ಥಿಕ ಐಕ್ಯ ಇನ್ನೂ ದೂರದಲ್ಲಿರುವುದೆಂದು ವಿದಿತವಾಗಬಹುದು. ಇತಾಲಿಯನ್ ಉದ್ಯಮಕ್ಕೆ ಅಥವಾ ಅಲ್ಲಿನ ಔದ್ಯಮಿಕ ಕ್ರಾಂತಿಗೆ (Industrial Revolution) ನಿನ್ನೆ ಮೊನ್ನೆಯದೇನೂ ಅಲ್ಲ – ಅದಕ್ಕೆ

80 ವರ್ಷಗಳ ಸುದೀರ್ಘ ಇತಿಹಾಸವಿದೆ. ಆದರೂ ಇತಾಲಿಯದ ಇಂದಿನ ಚಿತ್ರ–ನೆಳಲುಬೆಳಕಿನ ಕಣ್ಣುಮುಚ್ಚಾಲೆಯಾಗಿದೆ. ತೆಂಕದಲ್ಲಿ ನೆಳಲು, ಬಡಗದಲ್ಲಿ ಬೆಳಕು.

ಇತಾಲಿಯನ್ ಭಾಷೆಯಲ್ಲಿ ತೆಂಕ ಇತಾಲಿಯಕ್ಕೆ ಮೆಜ್ಜೊಜೊರ್ನೊ (ದಿನಾರ್ಧ – ದಿನದ ಅರ್ಧ – ಜೊರ್ನೊ = ದಿನ. ಮೆಜ್ಜೊ = ಅರ್ಧ) ಎಂದು ಹೆಸರು. ಆಬ್ರುಜ್ಜಿ, ಕಂಪಾನಿಯ, ಆಪೂಲಿಯ, ಬಸಿಲಿಕಾತ (ಅಥವಾ ಲುಕಾನಿಯ) ಮತ್ತು ಕಲಾಬ್ರಿಯ ಈ ಐದು ಪ್ರಾಂತಗಳಲ್ಲದೆ ಸಿಸಿಲಿ ಮತ್ತು ಸರ್ದೀನಿಯ ದ್ವೀಪಗಳನ್ನು ಈ ಪ್ರದೇಶಕ್ಕೆ ಸೇರಿಸಿಕೊಳ್ಳಬೇಕು. ಇತಾಲಿಯ ದೇಶದ 50 ಮಿಲಿಯ ಜನರಲ್ಲಿ ಅರ್ಧಾಂಶ ಇಲ್ಲಿ ವಾಸ ಮಾಡುತ್ತಾರೆ. 1959ರಲ್ಲಿ ಇವರ ತಲಾ ವರಮಾನ ವರ್ಷ ಒಂದಕ್ಕೆ 172,000 ಲೀರೆ (=1325 ರೂಪಾಯಿ) ಅಂದರೆ ತಿಂಗಳೊಂದರ 110 ರೂಪಾಯಿ, ದಿನಕ್ಕೆ ನಾಲ್ಕು ರೂಪಾಯಿಯೂ ಆಗಲಿಲ್ಲ; ಅದೇ ವರ್ಷದಲ್ಲಿ ಬಡಗ ಇತಾಲಿಯದವರ ವರಮಾನ ತಲಾ 382,000 ಲೀರೆ ಅರ್ಥಾತ್ ತೆಂಕದವರಿಗಿಂತ ಇಮ್ಮಡಿಗೂ ಮಿಗಿಲು. ತೆಂಕದೊಳಗಡೆ ಹಳ್ಳಿಯ ನಿವಾಸಿಗೂ ಪಟ್ಟಣದ ಔದ್ಯಮಿಕ ಉದ್ಯೋಗವಂತನಿಗೂ ವ್ಯತ್ಯಾಸವುಂಟು. ಎಲ್ಲೋ ಕೆಲ ಸಾವಿರ ಕುಟುಂಬಗಳು ಉತ್ತಮ ಮಟ್ಟವನ್ನು ಆರ್ಜಿಸಿಕೊಂಡದ್ದಕ್ಕೆ ಪ್ರತಿಯಾಗಿ ಮಿಲಿಯಾಂತರ ಜನ ವರ ಮಾನದ ಮುಕ್ಕಾಲು ಭಾಗವನ್ನು ಕೇವಲ ಆಹಾರಪದಾರ್ಥಗಳಿಗಾಗಿಯೇ ವೆಚ್ಚ ಮಾಡುವ – ಅದರಲ್ಲೂ ಬ್ರೆಡ್ ಮತ್ತು ಒಲಿವ್ ಅಷ್ಟಕ್ಕೇ ಸೀಮಿತವಾದ – ಅಸಮತೆ. ಮಾಂಸದ ರುಚಿಯನ್ನೂ ತೆಂಕದವರು ಬಡಗಣದವರಷ್ಟು ಕಾಣರು. ದಕ್ಷಿಣದಲ್ಲಿ ಮಾಂಸದ ಅನುಭೋಗ ತಲಾ 11 ಕೆ.ಜಿ., ಉತ್ತರದಲ್ಲಿ 22. ಮನೆಗಳ ಸರಪರಾಜಿನ ದೃಷ್ಟಿಯಿಂದಲೂ ತೆಂಕ ಹಿಂದುಳಿದ ಪ್ರದೇಶವೇ. ಇಡಿ ಇತಾಲಿಯಕ್ಕೆ ಕೋಣೆಗೆ 1.4 ನಿವಾಸಿಗಳಾದರೆ ತೆಂಕದ ಕೆಲ ಪ್ರಾಂತಗಳಲ್ಲಿ ಇದರ ಇಮ್ಮಡಿ. ಸಾಲದ್ದಕ್ಕೆ ಸುಮಾರು 10 ಲಕ್ಷ ಜನರಾದರೂ ಅನಿಕೇತನರಾಗಿ ಅಲ್ಲಿ ವಾಸ ಮಾಡುತ್ತಾರೆ – ಅಂದರೆ ಗುಹೆ, ಗುಡಿಸಲು, ತಟ್ಟಿ, ನೆಲಮಾಳಿಗೆ, ಮುರುಕಲು ಮನೆಯು ಕಮಾನುಗಳ ನೆರಳು, ಡೇರೆ ಮುಂತಾದವುಗಳನ್ನೇ ಮನೆಯಾಗಿ ಪರಿಗ್ರಹಿಸಿದ್ದಾರೆ. ಸುಮಾರು 40 ಲಕ್ಷ ಮನೆಯೆಂದು ಕರೆಯ

ಲ್ಪಡಲು ಅರ್ಹವಾದ ಮನುಷ್ಯ ನಿವಾಸಗಳಲ್ಲಿ 40% ಭಾಗ ಪಾಯಖಾನೆ ಮತ್ತು ಸ್ನಾನಗೃಹವಿಲ್ಲದೆಯೂ, 51% ನೀರಿನ ಸರಪರಾಜಿಲ್ಲದೆಯೂ (=ಬಾವಿ ಇಲ್ಲ, ಕೊಳವೆಯೂ ಇಲ್ಲ) ಮನೆ ಎನಿಸಿಕೊಂಡಿದ್ದವು. ನಿರಕ್ಷರತೆಯಲ್ಲಿಯೂ ತೆಂಕ ಬಡಗಕ್ಕಿಂತ ಬಹಳ ದೂರವುಳಿದಿದೆ – 24% (6% ಬಡಗು) ಹೀಗೆ ತೆಂಕು–ಬಡಗು ಇಜ್ಜೋಡಾಗಿಬಿಟ್ಟಿದೆ. ಇದರಿಂದ ಉದ್ಭವವಾಗುವ ರಾಜಕೀಯ, ಆರ್ಥಿಕ – ಸಾಮಾಜಿಕ ಮುಂತಾದ ಮಾನವಿಕ ಸಮಸ್ಯೆಗಳ ಪರಿಹಾರಕ್ಕೆ ಸಮಗ್ರವಾದ ಯೋಜನೆಯೊಂದನ್ನು ಇತಾಲಿಯನ್ ಸರ್ಕಾರ 1950ರಲ್ಲಿ ರೂಪಿಸಿತು. ನಾನು 1962ರಲ್ಲಿ ನಾಪೊಲಿಯ ಅಧ್ಯಯನ ಸಂಸ್ಥೆಗೆ ಸೇರಿದಾಗ ದ್ವಿದಳ ಅರ್ಥಮಂಡಲದ ಚಿಕಿತ್ಸಾ ವಿಧಾನಗಳಲ್ಲಿ ಅಲ್ಲಿನ ತಜ್ಞರು ಸಾಕಷ್ಟು ಅನುಭವ ಗಳಿಸಿದ್ದರು. ಸುಪ್ತ. ಸ್ತಬ್ಧ ಪ್ರದೇಶವೊಂದರಲ್ಲಿ ಆಧುನೀಕರಣದ ಚಿಹ್ನೆಯಂತೆ ಸಣ್ಣ ದೊಡ್ಡ ಸ್ಥಾವರಗಳು ತಲೆಎತ್ತಿ ನಿಂತಿದ್ದವು. ನಾಪೊಲಿಯ ಇಟಾಲ್ಸಿಡರ್ ಉಕ್ಕಿನ ಕಾರ್ಖಾನೆ, ತಾರಂತೋದ ಪೈಪು ಕಾರ್ಖಾನೆ, ಬಾರಿಯ ಪಿಸ್ಟನ್ ಕಾರ್ಖಾನೆ, ಸೀಲಾಪ್ರಸ್ಥಭೂಮಿಯ ಅಭಿವೃದ್ಧಿ ಯೋಜನೆ, ಬ್ರಿಂದಿಸಿಯ ಮೊಂತೆಕತೀನಿ ರಾಸಾಯನಿಕ ಮತ್ತು ಏನಿ ಇದ್ರೋಕಾರ್ಬನ್(=ಪೆಟ್ರೋಲಿಯಮ್) ಉದ್ಯಮ, ರೆಜೋಕಲಾಬ್ರಿಯದ ತುತ್ತತುದಿಯನ್ನು ಮುಟ್ಟುವ ಆಟೋಸ್ಟ್ರಾದಾ (=ರಾಷ್ಟ್ರೀಯ ಹೈವೇ.), ಪ್ರವಾಸಿಕರಿಗಾಗಿ ನಿರ್ಮಿಸಲಾಗುವ ಹೋಟೆಲ್ ಮತ್ತು ಮೋಟೆಲ್‌ಗಳು – ಇವು ಹನ್ನೆರಡು ವರ್ಷವಲ್ಲಿ ತೆಂಕದ ಆರ್ಥಿಕ ಜೀವನದ ಉತ್ಕರ್ಷಕ್ಕೆ ಸಾಕಷ್ಟು ಚಾಲನೆ ನೀಡಿದುವು. ಸರ್ಕಾರ ಮತ್ತು ಖಾಸಗೀ ವಲಯಗಳ ವಿಶಿಷ್ಟವೆನಿಸುವ ಹೊಂದಾಣಿಕೆಯ ಕಾರಣವಾಗಿ ತೆಂಕಣ ಇತಲಿ ಚೇತರಿಸಿಕೊಳ್ಳುವ ಲಕ್ಷಣ ಮೂಡಿತ್ತು. ಒಂದು ಶತಮಾನದ ಅವಜ್ಞೆ. ಆಲಸ್ಯಗಳನ್ನು ಕೊಡಹಿ ಎದ್ದುನಿಲ್ಲುವ ಅಪೇಕ್ಷೆ ಜನಸಾಮಾನ್ಯರಲ್ಲಿಯೂ ಸಾರ್ವತ್ರಿಕವಾಗಿ ಹಬ್ಬಿದ ಹನ್ನೆರಡು ವರ್ಷಗಳ ಸಿದ್ಧಿಯನ್ನು ಪರಿಷ್ಕರಿಸಿ ಇಸ್ಪೇ ಪಾಠಕ್ರಮದಲ್ಲಿ ನಮಗೆ ಬೋಧಿಸಲಾಯಿತು. ಪ್ರಾತ್ಯಕ್ಷಿತೆಯ ರೂಪದಲ್ಲಿ ಅಭಿವೃದ್ಧಿಯ ಈ ಪ್ರಯೋಗಭೂಮಿಯಲ್ಲಿ ಎರಡು ವಾರಗಳ ಪ್ರವಾಸವನ್ನೂ, ನಡುನಡುವೆ ಪಾರಾಂತ್ಯದ ಸಂದರ್ಶನವನ್ನೂ ಜೋಡಿಸಲಾಯಿತು. ಒಂದುಳಿದ ರಾಷ್ಟ್ರಗಳನ್ನು ಪ್ರತಿನಿಧಿಸುವ ನಮ್ಮ ಇಸ್ಪೇ ಗುಂಪಿನ ಸದಸ್ಯರಿಗೆ ಏಕ

ದೇಶದಲ್ಲಿ ಮತ್ತು ಏಕಕಾಲದಲ್ಲಿ ಎರಡೂ ಚಿತ್ರಗಳನ್ನು ನೋಡಿ, ತುಲನೆ ಮಾಡುವ ಅವಕಾಶ ಒದಗಿಸಿದ ಇಸ್ಪೇಗೆ ನಾವು ಋಣಿಗಳಾಗಿರಲೇಬೇಕಾಗುತ್ತದೆ. ಏಕೆಂದರೆ ಇಷ್ಟು ಸ್ಪಷ್ಟವಾಗಿ, ಸಮೀಪಸ್ಥವಾಗಿ, ಏಕದೇಶೀಯವಾಗಿ ಎಲ್ಲೂ ದ್ವಿದಳ ಅರ್ಥಮಂಡಲದ ದ್ವಿವಿಧತೆ, ವೈಷಮ್ಯ ನೋಡಸಿಗಲಾರದು. ಎಲ್ಲೂ ಇಷ್ಟು ತೀವ್ರತೆವಾಗಿ ತೆಂಕ-ಬಡಗಣ ಚರ್ಚೆ, ವಿರೋಧ, ಮಸಗಲಾರದು. ತೆಂಕದ ಅಭಿಪ್ರಾಯವೇ ಬೇರೆಂಬುದನ್ನು ಸೂಚಿಸಲು ಅನೇಕ ಪತ್ರಿಕೆಗಳಲ್ಲಿ ಪ್ರಚಾರ ನಡೆಯುತ್ತದೆ. ತೆಂಕಕ್ಕಾಗಿ ಪ್ರಚಾರ ಮಾಡುವ ಮುಂದಾಳುಗಳು ತೆಂಕ ಇತಾಲಿಯದಲ್ಲಿ ಸುಲಭದಲ್ಲಿ ಜನಪ್ರಿಯತೆ ಗಳಿಸುತ್ತಾರೆ. ಬಡಗಣವರ ಮುಷ್ಟಿಯಿಂದ ತೆಂಕದವರನ್ನು ಬಚಾಯಿಸಬೇಕೆಂಬ ವಾದವೂ ಅಲ್ಲಿ ಪ್ರಚಲಿತವಾಗಿದೆ.

(ನಮ್ಮ ದೇಶದಲ್ಲಿಯೂ ಇಂಥ ಭಾವನೆಗಳಿಲ್ಲವೆ? ಎಂದು ಕೇಳಬಹುದು. ವೈಯಕ್ತಿಕವಾದ ಮಟ್ಟದಲ್ಲಿ, ಕೆಲವೊಮ್ಮೆ ಭಾಷಾ ವೈವಿಧ್ಯದ ದೆಸೆಯಿಂದಾಗಿ 'ಮದ್ರಾಸೀ' ಎಂದು ಉತ್ತರದವರು ದಾಕ್ಷಿಣಾತ್ಯರಾದ ನಮ್ಮನ್ನೂ, 'ಹೈ ಹೈ' ಜನಗಳೆಂದು ನಾವು ಔತ್ತರೇಯರನ್ನೂ ಕರೆಯುವುದುಂಟು. 'ರೋಟೀವಾಲ' ರೆಂದು ಅವರನ್ನು ನಾವು ಕರೆದರೆ ಅವರು 'ಭಾತ್‌ವಾಲಾ' ಎಂದು ಅನ್ನದ ರಾಶಿಯನ್ನು ಕಬಳಿಸುವ ನಮ್ಮ ಬಗ್ಗೆ ಅಣಕ ಆಡಬಹುದು. ಇನ್ನೂ ಮುಂದೆ ಹೋಗಿ ಸೇಲಮಿಗೆ, ವಿಶಾಖಪಟ್ಟಣಕ್ಕೆ, ಹೊಸಪೇಟೆಗೆ ಉಕ್ಕಿನ ಕಾರ್ಖಾನೆ ಕೊಡದ ಕೇಂದ್ರ ಸರ್ಕಾರವನ್ನು ನಾವು ದೂಷಿಸಬಹುದು. ನಮ್ಮ ಟೀಕೆ ವಿಮರ್ಶೆ ಚಳವಳಿಯ ರೂಪ ಪಡೆದಾಗ ಅಥವಾ ಅದಕ್ಕೂ ಮೊದಲೇ ಕೇಂದ್ರ ಸರ್ಕಾರ ನಮಗೆ ಬೇಕೆನಿಸಿದ ಯೋಜನೆ ಮಂಜೂರು ಮಾಡಿ ಸಮಸ್ಯೆಯನ್ನು ಇಲ್ಲವಾಗಿಸುತ್ತದೆ. ಆದ್ದರಿಂದ ಅರ್ಥಮಂಡಲವನ್ನು ನಾವು 'ಉತ್ತರ–ದಕ್ಷಿಣ' ಎಂಬುದಾಗಿ ಒಡೆದು ದ್ವೈತ ಸ್ಥಾಪನೆ ಮಾಡಲಾರೆವು. ಉತ್ತರದಲ್ಲಿ ಕಾರ್ಖಾನೆಗಳು ಹೆಚ್ಚಿದರೆ ದಕ್ಷಿಣದಲ್ಲಿ ಸಾಕ್ಷರತೆ ಹೆಚ್ಚಾಗಿದೆ. ಆರ್ಥಿಕವಾಗಿ ಹೇಳಿಕೊಳ್ಳುವಂಥ ಯಾವ ವೈಷಮ್ಯವೂ ಇಲ್ಲಿಲ್ಲ. ಉತ್ತರಪ್ರದೇಶದಷ್ಟು ಹಿಂದುಳಿದ ರಾಜ್ಯ ದಕ್ಷಿಣಪಥದಲ್ಲಿಲ್ಲ; ಅಲ್ಲದೆ ದಕ್ಷಿಣದ ರಾಜ್ಯಗಳಲ್ಲಿಯೂ ಸಮೃದ್ಧಿಯ ಪ್ರದೇಶಗಳು – ಇದ್ದೇ ಇವೆ. ಬಡತನ ನಮ್ಮಲ್ಲೂ ಇದೆ; ಆದರೆ ಅದನ್ನು ಉತ್ತರ – ದಕ್ಷಿಣ ಎಂದು ಹಂಚಿ ಹಾಕುವಂತಿಲ್ಲ.)

## □ □ ಯಾತಕೀ ವೈಷಮ್ಯ?

ಇಜ್ಜೋಡಿನ ಸಾಮಾನ್ಯ ಲಕ್ಷಣಗಳನ್ನು ಕೆಳಗಿನ ಕೋಷ್ಟಕದ ಅಂಕೆ ಸಂಖ್ಯೆ ಸೂಚಿಸಬಲ್ಲುದು:

| | ಬಡಗ (1) | ತೆಂಕ (2) | ಇತಾಲಿಯೆ (3) | ಪ್ರಮಾಣ 2÷3 % |
|---|---|---|---|---|
| I ಜನಸಂಖ್ಯೆ (1951) | | | | |
| 1. ಹಾಲಿ ಜನಸಂಖ್ಯೆ (000) | 29,830 | 17,685 | 47515 | 37.2 |
| 2. ಕಾರ್ಯತತ್ಪರರು (000) | 13,779 | 6,892 | 20672 | 33.3 |
| 3. ಬೇಸಾಯ ನಿರತರು (000) | 4,634 | 3,627 | 8261 | 43.9 |
| II ಉದ್ಯಮ ಮತ್ತು ವ್ಯಾಪಾರದಲ್ಲಿ ಉದ್ಯೋಗ (1951) | | | | |
| 1. ಉದ್ಯಮ (000) | 3508.2 | 733.7 | 4241.9 | 17.3 |
| 2. ವ್ಯಾಪಾರ (000) | | | | |
| – ಸಗಟು | 197.5 | 46.9 | 244.4 | 19.2 |
| – ಚಿಲ್ಲರೆ | 679 | 278.6 | 957.6 | 29.1 |
| – ಸಂಚಾರಿ | 153.2 | 60.6 | 213.8 | 28.3 |
| – ಇತರ | 450.4 | 145.1 | 595.5 | 24.4 |
| ಒಟ್ಟು | 1480.2 | 531.2 | 2011.4 | 26.4 |
| 3. ಸಾರಿಗೆ, ಸಂಪರ್ಕ (000) | 425.3 | 154.0 | 579.3 | 26.6 |
| 4. ಬ್ಯಾಂಕಿಂಗ್, ವಿಮೆ ಇತ್ಯಾದಿ | 12406 | 37.8 | 162.4 | 23.3 |
| III ಬೇಸಾಯ ಮತ್ತು ಅರಣ್ಯ ಉತ್ಪತ್ತಿ: 1953–6ರ ಸರಾಸರಿ.(ಮಿಲಿಯಾರ್ಡ್ ಲೀರ) | 2072.7 | 1060.7 | 3130.4 | 33.9 |
| IV ನಿವ್ವಳ ತಲಾ ವರಮಾನ 1957–59ರ ಸರಾಸರಿ (000 ಲೀರ) | 361.2 | 166.5 | 287.9 | 46.1 |

ನಿವ್ವಳ ವರಮಾನ ಅರ್ಧಕ್ಕಿಂತ ಕಡಿಮೆ ಇರುವಂತೆಯೆ ಉದ್ಯೋಗದ ಅವಕಾಶಗಳೂ ತೆಂಕದಲ್ಲಿ ಬಡಗಕ್ಕಿಂತ ಅರ್ಧಾಂಶವೇ. ದಾಖಲೆಯಾದ ನಿರುದ್ಯೋಗಿಗಳ ಸಂಖ್ಯೆ ತೆಂಕದಲ್ಲೇ ಅಧಿಕವಾಗಿರುತ್ತದೆ: ಅರ್ಧಕ್ಕಿಂತಲೂ ಹೆಚ್ಚು ಕಾರ್ಯವಂತರು ಬೇಸಾಯದಲ್ಲಿ ನಿರತರಾಗಿರುವುದೂ ಅವರು

ಮಾರಾಟ ಮಾಡುವ ಉತ್ಪತ್ತಿಯ ಮೌಲ್ಯ ರಾಷ್ಟ್ರೀಯ ಜುಮಲಾವ ಮೂರರಲ್ಲೊಂದು ಪಾಲಷ್ಟೇ ಆಗಿರುವುದೂ ತೆಂಕ ಪ್ರದೇಶದ ಬಡತನದ ಸೂಚನೆಯಾಗುತ್ತದೆ. ಕೈಗಾರಿಕೆಗಳಲ್ಲಿ ಕೇವಲ 11% ಅಥವಾ 734,000 ಜನರು ಮಾತ್ರ ಉದ್ಯೋಗ ದೊರಕಿಸಿಕೊಂಡಿದ್ದಾರೆ. (ಬಡಗ 21%). ಇರುವ ಕೈಗಾರಿಕೆಗಳೂ (1951ರಲ್ಲಿ) ಸಾಮಾನ್ಯವಾಗಿ ಆಧುನಿಕ ಉದ್ದಿಮೆ ಗಳಲ್ಲ. ಗುಡಿಕೈಗಾರಿಕೆ, ಹತ್ತಕ್ಕಿಂತ ಕಡಮೆ ಉದ್ಯೋಗಿಗಳಿರುವಂಥದ್ದು, ಬೇಸಾಯದ ಪದಾರ್ಥಗಳಿಗೆ ಸಮೀಪಸ್ಥವಾದ್ದು – ಒಟ್ಟಿನಲ್ಲಿ ಪ್ರಮಾಣ ದಲ್ಲಿ ಚಿಕ್ಕದ್ದೂ ಬಡವರ ಆವಶ್ಯಕತೆಗಳನ್ನು ಪೂರೈಸುವಂಥದೂ ಆಗಿದೆ.

ಕಣ್ಣುಕೋರೈಸುವ ಈ ದ್ವಿಧಾಸ್ಥಿತಿಗೆ ಈ ಶತಮಾನದ ಮೊದಲ ವರ್ಷ ಗಳಿಂದಲೂ ಕಾರಣಗಳನ್ನು ಹುಡುಕುವ ಕೆಲಸ ನಡೆಯಿತು. ಈ ವಿಷಯ ದಲ್ಲಿ ಎರಡು ಬಗೆಯ ವಾದಗಳು ಹುಟ್ಟಿಕೊಂಡವು. ಮನುಷ್ಯರ ಸ್ವಭಾವ ಮತ್ತು ಸಾಂಪ್ರದಾಯಿಕ ನಡವಳಿಕೆಯೇ ಇದಕ್ಕೆ ಹೊಣೆ ಎನ್ನುವುದು ಒಂದನೆಯ ವಾದ. ತೆಂಕದಲ್ಲಿ ಆಡಳಿತ ಕ್ರಮ ಸರಿಯಾಗಿಲ್ಲ, ನ್ಯಾಯ ವಿತರಣೆ ಸಮರ್ಪಕವಾಗಿಲ್ಲ, ಸಂಘಟಿತ ಕೊಲೆ ಸುಲಿಗೆಯಿಂದ ಜೀವಿ ಸುವುದೇ ಜನರ ಹವ್ಯಾಸವಾಗಿಬಿಟ್ಟಿದೆ. ತೆಂಕದ ಶಿಕ್ಷಿತ ಜನರು ಕೂಡ ಚಾಕರಿಗಾಗಿ ಅಂಗಲಾಚುವ ಮನೋಭಾವವುಳ್ಳವರೇ ಹೊರತು ಧೈರ್ಯ ವಾಗಿ ವ್ಯಾಪಾರೋದ್ಯಮಗಳನ್ನು ಮುಂದೊತ್ತಬಲ್ಲವರಲ್ಲ, ಅವರಲ್ಲಿ ಪ್ರಗತಿಮುಖವಾದ ನಾಯಕತ್ವವೇ ಇಲ್ಲ. ಒಟ್ಟಿನಲ್ಲಿ ಮೆಜ್ಜೊಜೊರ್ನೊದ ಜನಸಮುದಾಯದ ಸ್ವಭಾವವೇ ಆರ್ಥಿಕ ಪ್ರಗತಿಗೆ ಆತಂಕ. ಇತಾಲಿಯದ 'ನೈಸರ್ಗಿಕ ದಾರಿದ್ರ್ಯ'ವೇ ಎಲ್ಲ ಅಪರಾಧಗಳಿಗೂ ಮೂಲ ಕಾರಣವೆಂದು ಸೂಚಿಸುವುದು ಎರಡನೆ ವಾದದ ತಿರುಳು. ಅಲ್ಲಿ ಸಮತಟ್ಟಾದ ಬಯಲುಭೂಮಿ ಕಡಮೆ, ಗುಡ್ಡಬೆಟ್ಟಗಳೇ ಅತಿಶಯವಾಗಿ, ಆ ಗುಡ್ಡ ಬೆಟ್ಟಗಳೂ ಹಿಮಶಿಖರವನ್ನು ಪಡೆಯುವಷ್ಟು ಉನ್ನತವಾಗಿಲ್ಲದಿರುವುದ ರಿಂದ ನದೀ ಜಲಕ್ಕೂ ಕೊರತೆ. ಗುಡ್ಡಗಳ ಕಡಿದಾದ ಮೈ, ಕಲ್ಲುಮುಳ್ಳು, ಬಂಡೆಗಳ ಪ್ರಾಬಲ್ಯ, ಕೆಲ ತಿಂಗಳು ಮಾತ್ರ ಹೊಯ್ಯುವ ಮಳೆ – ಇಂಥ ನಿಸರ್ಗದತ್ತ ಕಾರಣಗಳಿಂದಾಗಿ ತೆಂಕದ ಬೇಸಾಯವೂ ಹೀನಸ್ಥಿತಿಯಲ್ಲೇ ಇರಬೇಕಾಗಿ ಬಂದಿದೆ ಎನ್ನುತ್ತಾರೆ ಈ ವಾದದ ಪುರಸ್ಕರ್ತರು.

ನಿಸರ್ಗ ಮತ್ತು ಮನುಷ್ಯಸ್ವಭಾವ ಎರಡೂ ಸೇರಿ ಆರ್ಥಿಕ ಪ್ರಗತಿಗೆ ವಿಮುಖವಾದ ಒಂದು ಪರಿಸ್ಥಿತಿಯನ್ನು ನಿರ್ಮಾಣಮಾಡಿರುವುದರಿಂದ ತೆಂಕ ಇತಾಲಿಯದ ಜೀರ್ಣೋದ್ಧಾರ ಸುಲಭ ಕಾರ್ಯವಲ್ಲ ಎಂದು ಬಡಗಣವರು ನಿರ್ಧರಿಸಿದ್ದಾರೆ. ರಾಜಕೀಯ ಏಕೀಕರಣದ ಅನಂತರ ತೆಂಕದ ಶಕ್ತಿ ಸಾಮರ್ಥ್ಯಕ್ಕೆ ಮೀರಿದ ಕರಭಾರವನ್ನು ಹೊರಿಸಿ ಕೇಂದ್ರೀಯ ಸರ್ಕಾರ ತೆಂಕದ ಬಡತನವನ್ನು ಇನ್ನಷ್ಟು ತೀವ್ರಗೊಳಿಸಿತೆನ್ನುವವರೂ ಇದ್ದಾರೆ. ಸಾರ್ವಜನಿಕ ವೆಚ್ಚದ ಪ್ರಶ್ನೆ ಬಂದಾಗ ಮಾತ್ರ ಹೆಚ್ಚಿನಂಶ ಕಾಮಗಾರಿಗಳು ಬಡಗಣ ಪ್ರಾಂತಗಳಲ್ಲೇ ನಡೆಯುವಂತೆ ರಾಜಕೀಯ ಒತ್ತಡವನ್ನು ಹೇರಲಾಗುತ್ತದೆ. ಸಂಪದ್ವಿಹೀನ ತೆಂಕದ ರಾಜಕೀಯ ಪ್ರತಿನಿಧಿಗಳಿಗೆ ರಾಜಧಾನಿಯಲ್ಲಿ ವರ್ಚಸ್ಸೆಲ್ಲಿದೆ? ಅವರ ಮಾತು ಯಾರು ಕೇಳುತ್ತಾರೆ? ಇಡೀ ದೇಶಕ್ಕೆ ಏಕರೂಪವಾದ ವ್ಯಾಪಾರ ಧೋರಣೆಯನ್ನು ನಿಯಮಿಸಿದ್ದರಿಂದಲೂ ತೆಂಕದ ಪ್ರಾಂತಗಳಿಗೆ ಆಘಾತವಾಗಿದೆ ಎನ್ನುವವರಿದ್ದಾರೆ; ಬಡಗಣ ಪ್ರಬಲ ಔದ್ಯಮಿಕ ಸರಕುಗಳಿಗೆ ತೆಂಕಣ ಮಾರುಕಟ್ಟೆ ಸರಿಯಾಗಿ ದೊರಕಿದ ಬಳಿಕ ತೆಂಕದ ಕೈಗಾರಿಕೆಗಳಿಗೆ ಗಿರಾಕಿ ಕಡಿಮೆಯಾಗಿ ಆರ್ಥಿಕ ತೊಂದರೆ ಉಂಟಾಯಿತು ಎಂದು ಇವರು ವಾದಿಸುತ್ತಾರೆ.

## □ □ ಚಿಕಿತ್ಸೆ - ಚಿಂತನೆ

ತೆಂಕ ಬಡಗಣ ಪ್ರದೇಶಗಳ ನಡುವಣ ಅಸಮತೆಯನ್ನು ಹೋಗಲಾಡಿಸುವ ಕುರಿತು ದ್ವಿತೀಯ ಮಹಾಯುದ್ಧೋತ್ತರ ಇತಾಲಿಯದಲ್ಲಿ ಬಹಳ ಚಿಂತನ ಮಂಥನ ನಡೆಯಿತು. ವಿಶ್ವವಿದ್ಯಾನಿಲಯಗಳ ಪಂಡಿತರು ಆಗತಾನೇ ಪ್ರವರ್ಧಮಾನಕ್ಕೆ ಬರುತ್ತಿದ್ದ ಅಭಿವೃದ್ಧಿ ಸಿದ್ಧಾಂತಗಳನ್ನು ವೈಜ್ಞಾನಿಕವಾಗಿ ವಿಶ್ಲೇಷಿಸಿ. ಸ್ವಕೀಯ ಪರಿಸ್ಥಿತಿಗೆ ಅನ್ವಯವಾಗತಕ್ಕುವು ಯಾವುವೆಂಬ ವಿಷಯದಲ್ಲಿ ಚಿಂತನೆ ನಡೆಸಿದರು. ವಸ್ತುಸ್ಥಿತಿಯನ್ನು ಇದ್ದಕ್ಕಿದ್ದಂತೆ ಪರಿಶೀಲಿಸುವಾಗ ರೋಮ್ ನಗರದ ತೆಂಕಣ ಮೆಜ್ಜೊಜೊರ್ನೋ ಭಾಗ ಹಿಂದುಳಿದಿರುವುದು ನಿಜವೆಂದು ತೋರುವುದಾದರೂ. ಆ ಬಗ್ಗೆ ಕಳವಳಪಡುವುದರಿಂದ ಅಥವಾ ಔತ್ತರೇಯರ ಕುರಿತು ಕರುಬುವುದರಿಂದ

ಯಾವ ಪ್ರಯೋಜನವೂ ಇಲ್ಲ. ಮುಂದುವರಿದ ಬಡಗಣವರ ಬುದ್ಧಿ ಶಕ್ತಿ, ಸಂಘಟನಾಶಕ್ತಿ,ಆರ್ಥಿಕ ಬಲ, ಅಂತಾರಾಷ್ಟ್ರೀಯ ರಂಗದ ಸ್ಪರ್ಧಾ ಪ್ರವೃತ್ತಿ ಇಷ್ಟನ್ನು ತೆಂಕಣ ಪ್ರದೇಶದ ಅಭಿವೃದ್ಧಿಗೆ ವಿನಿಯೋಗಿಸಬಹುದಾದಾದ ಉತ್ತಮ ಸನ್ನಿವೇಶ ಪ್ರಾಪ್ತವಾಗಿರುವುದಕ್ಕೆ ಸಂತೋಷಪಡತಕ್ಕದ್ದು. ಯುದ್ಧೋತ್ತರ ಪರಿಸರದಲ್ಲಿ ದ್ವಿದಳ ಅರ್ಥಮಂಡಲದ ಎರಡೂ ದಳಗಳಲ್ಲಿ ಸಮಾನ ಸೌಕರ್ಯಗಳನ್ನು ಹವಣಿಸುವುದು ಕಷ್ಟವಲ್ಲ. ಮೊದಲನೆಯದಾಗಿ ಸಾಮಾಜಿಕ ಸ್ಥಿರ ಬಂಡವಾಳ – ಅಂದರೆ ಮಾರ್ಗ, ರೈಲ್ವೆ, ಟೆಲಿಫೋನ್, ನೀರಿನ ಕೊಳವೆ, ಚರಂಡಿ ಯೋಜನೆ, ಶಾಲೆ, ಆಸ್ಪತ್ರೆ ಮುಂತಾದುವನ್ನು – ತೆಂಕಣ ಪ್ರದೇಶದಲ್ಲಿ ಸ್ಥಾಪಿಸಬೇಕು. ಎರಡನೆಯದಾಗಿ ಆನತಿ ಕಾಲದಲ್ಲಿ ಔದ್ಯಮಿಕ ಸ್ಥಾವರಗಳ ವಿಸ್ತರಣೆಯ ದೆಸೆಯಿಂದ ಸುತ್ತಲ ವಾತಾವರಣವೇ ಪ್ರಗತಿಪರವಾಗಿ ಅಭಿವೃದ್ಧಿ ಹೊಂದಿದಾಗ ಉಂಟಾಗುವ ಬಾಹ್ಯ ಮಿತವ್ಯಯ (external economics) ದಕ್ಷಿಣ ಇತಾಲಿಯವನ್ನು ಉತ್ತರಕ್ಕೆ ಸರಿಸಮವಾಗಿ ನಿಲ್ಲಿಸಲು ಕಾರಣವಾದೀತು. ಹೀಗೆ ವಿಧಾಯಕವಾದ ರೀತಿಯಲ್ಲಿ ತೆಂಕ ಇತಾಲಿಯದ ಆರ್ಥಿಕ ಅಭಿವೃದ್ಧಿಯ ಚಿಂತನೆಗೆ ತೊಡಗಿದವರಲ್ಲಿ ಪ್ರೊಫೆಸರ್ ಪಾಸ್ಕ್ವಲೆ ಸರಾಚೆನೋ ಆದ್ಯರು, ಮುಖ್ಯರು. ಪತ್ರಿಕೆಗಳಲ್ಲಿ, ಪಂಡಿತ ವರ್ಗದಲ್ಲಿ ಸಾಕಷ್ಟು ಚರ್ಚಿತವಾದ ಮೇಲೆ ಈ ಧೋರಣೆಯನ್ನು ಇತಾಲಿಯನ್ ಸರ್ಕಾರ ಕಾರ್ಯರಂಗಕ್ಕಿಳಿಸಿತು. 1950ರಲ್ಲಿ 'ಇತಾಲಿಯ ತೆಂಕದ ಅಭಿವೃದ್ಧಿ ನಿಧಿ' (cassa per il mezzo-giorno) ಎಂಬೊಂದು ಸ್ವಾಯತ್ತ ಸಂಸ್ಥೆಯನ್ನು ಸ್ಥಾಪಿಸಿ ಅಭಿವೃದ್ಧಿ ತತ್ವಗಳಿಗೆ ರೂಪು ಕೊಡಲು ಆರಂಭಿಸಿತು. ಜತೆಗೇ ತೆಂಕದ ಔದ್ಯಮಿಕ ಅಭಿವೃದ್ಧಿ ಕಾರ್ಯಗಳಿಗಾಗಿಯೇ ಸ್ವಿಮೆಜ್ (Associazione per lo Sviluppo industriale del mezzo-giorno) ಎಂಬ ಇನ್ನೊಂದು ಸಂಸ್ಥೆಯನ್ನು ವಿರಚಿಸಿತು. ಮೊದಲು ಮೂಲಸ್ಥಾವರಗಳ ನಿರ್ಮಾಣ – ರಸ್ತೆ, ಸಾರಿಗೆ, ಸಂಪರ್ಕ ಇತ್ಯಾದಿ. ಸರ್ಕಾರದ ವತಿಯಿಂದಲೇ ಸಾರ್ವಜನಿಕ ಕಾಮಗಾರಿಗಳ ನಿರ್ಮಾಣ. ಸರ್ಕಾರಿ ಬಂಡವಾಳದ ವಿತರಣೆ, ವಿನಿಯೋಗ. ಎರಡನೆ ಹಂತದಲ್ಲಿ ಖಾಸಗೀ ಬಂಡವಾಳಗಾರರನ್ನು ಪ್ರೋತ್ಸಾಹಿಸಿ ತೆಂಕದಲ್ಲಿ ಉದ್ಯಮಗಳ ಸ್ಥಾಪನೆಗೆ ಚಾಲನೆ ನೀಡುವುದು. ಹೇಗೂ ಯುದ್ಧೋತ್ತರ ಅರ್ಥ

ಮಂಡಲದಲ್ಲಿ ತಾಂತ್ರಿಕ ಪ್ರಗತಿಯಿಂದಾಗಿ ಕಲ್ಲಿದ್ದಲಿನ ಮಹತ್ವ ಕಡಿಮೆಯಾಗಿಬಿಟ್ಟು ಯಾವ ಉದ್ಯಮವನ್ನು ಎಲ್ಲಿಯೂ ಸ್ಥಾಪಿಸಬಹುದಾದ ಅನುಕೂಲ ಸನ್ನಿವೇಶ ಒದಗಿದೆ. ಕಚ್ಚಾ ಮಾಲಿನ ಸಾಮೀಪ್ಯ ಇತ್ಯಾದಿ ಹಳೇ ಆನುಕೂಲ್ಯಗಳಿಗೆ ಈಗ ಮಹತ್ವವಿಲ್ಲದೆ ಹೋಗಿರುವುದರಿಂದ ಹಿಂದೆ ಅಪ್ರಶಸ್ತವೆನಿಸಿದ್ದ ಪ್ರದೇಶದಲ್ಲಿಯೂ ಉದ್ದಿಮೆಗಳನ್ನು ಪ್ರಾರಂಭಿಸಿ ಯಶಸ್ವಿಯಾಗಿ ನಡೆಸಬಹುದು. ಬಂದರು, ರಸ್ತೆ ಸಾರಿಗೆ, ರೈಲು ಸರಿಯಾಗಿದ್ದರೆ ವಿದೇಶ ರಫ್ತಿನ ಸಮಸ್ಯೆಯೂ ಬಗೆಹರಿಯುತ್ತದೆ. ಮೂರನೆಯ ಹಂತದಲ್ಲಿ ಈ ಹಿಂದಿನ ಅನುಕೂಲಗಳಷ್ಟೆ ಅಲ್ಲದೆ 'ಬಾಹ್ಯ ಮಿತವ್ಯಯ'ದ ಸನ್ನಿವೇಶವುಂಟಾಗುವುದರಿಂದ ಆ ಪ್ರದೇಶದ ಸ್ವಂತ ಶಕ್ತಿ ಸಾಮರ್ಥ್ಯದಿಂದಲೇ ಆರ್ಥಿಕ ಪ್ರಗತಿ ಮುಂದು ಮುಂದಕ್ಕೆ ಸಾಗುತ್ತದೆ. ಹೀಗೆ ಪರಿಷ್ಕೃತವಾದ ಒಂದು ಆರ್ಥಿಕ ಸೂತ್ರದ ನೆಲೆಯಲ್ಲಿ ತೆಂಕ ಇತಾಲಿಯ ಪ್ರಗತಿ ಪಥದಲ್ಲಿ ಕಾಲಿಟ್ಟು 12 ವರ್ಷಗಳಾದ ತರುವಾಯ ತಮ್ಮ ಅನುಭವವನ್ನು ಅಭಿವೃದ್ಧಿ ಕಾತರವಾಗಿರುವ ರಾಷ್ಟ್ರಗಳಿಗೆ ಹಂಚಿಕೊಡಬೇಕೆಂಬ ಇತಾಲಿಯನ್ ಸರ್ಕಾರದ ಸಂಕಲ್ಪ ನಮ್ಮ 'ಇಸ್ವೇ'ಯ ಜನನಕ್ಕೆ ಪ್ರಚೋದನೆ ಒದಗಿಸಿತು.

## □□ ಅಭಿವೃದ್ಧಿ ಚಕ್ರ

ತೆಂಕದ ಅಭಿವೃದ್ಧಿಯ ಪ್ರಶ್ನೆ ಯುದ್ಧೋತ್ತರ ಇತಾಲಿಯದಲ್ಲಿ ಒಂದು ಪ್ರಾಮುಖ್ಯ ಸಾಮಾಜಿಕ-ರಾಜಕೀಯ ಸಮಸ್ಯೆಯ ರೂಪ ತಳೆದು ಅದರ ಬಗ್ಗೆ ಇತಾಲಿಯನ್ ಸರ್ಕಾರ ಪ್ರಥಮ ಅಭಿವೃದ್ಧಿ ಚಕ್ರದ ಹತ್ತು ವರ್ಷಗಳಲ್ಲಿ (1947–57)ಒಟ್ಟು 347 ಅಧಿನಿಯಮಗಳನ್ನು ಅಂಗೀಕರಿಸಿತು. ಖಾಸಗೀ ಉದ್ದಿಮೆದಾರರಿಗೆ ಆರ್ಥಿಕ ಪ್ರೋತ್ಸಾಹ, ಪರಿಹಾರ; ಮೆಜ್ಜೊಜೋರ್ನೊ ಪ್ರದೇಶ ನಿಧಿಯ ಸ್ಥಾಪನೆ (1950); ನಿಧಿಯಿಂದ ಮೊದಲ ಬಾರಿಗೆ ಬೃಹತ್ ಪ್ರಮಾಣದಲ್ಲಿ ಸರಕಾರಿ ಕ್ಷೇತ್ರದ ಇನ್ವೆಸ್ಟ್ಮೆಂಟ್ ಕಾರ್ಯಕ್ರಮಗಳು – ಇಷ್ಟು ಪ್ರಥಮ ಚಕ್ರದಲ್ಲಿ ಕಾರ್ಯಗತವಾಯಿತು. ಜುಲೈ 1957ರಿಂದ ಆರಂಭಿಸಿದ ಎರಡನೆ ಚಕ್ರದಲ್ಲಿ ಖಾಸಗಿ ಉದ್ಯಮಗಳ ಬಂಡವಾಳ ವೆಚ್ಚ (capital cost)ವನ್ನೂ, ಸಣ್ಣ ಮತ್ತು

ಮಧ್ಯಮ ಪ್ರಮಾಣದ ಉದ್ಯಮಗಳನ್ನೂ 'ಕಸ್ಸಾ' ನೋಡಿಕೊಳ್ಳಲು ಆರಂಭಿಸಿತು. ಕಾಲಕ್ರಮೇಣ 'ಕಸ್ಸಾ'ದ ಕಾರ್ಯಕ್ಷೇತ್ರ ವಿಸ್ತರಿಸುತ್ತ ಹೋಗಿದೆ. ಕೃಷಿಮಂಡಲದಲ್ಲಿ ಮೊತ್ತ ಮೊದಲು ಹೆಜ್ಜೆಯಿಟ್ಟ 'ಕಸ್ಸಾ' ಉದ್ಯಮದ ಪರಿನಿರ್ಮಾಣಕ್ಕೂ ತದನಂತರ ಉದ್ದಿಮೆ ಸಾಲದ ಕಾರ್ಯಕ್ರಮಕ್ಕೂ ಮನಸ್ಸು ಮಾಡಿತು. ಶ್ರಮಜೀವಿಗಳ ತರಬೇತಿ, ಸಣ್ಣಪುಟ್ಟ ಗ್ರಾಮೀಣ ವಲಯಗಳಲ್ಲಿ ಶಾಲೆಗಳ ನಿರ್ಮಾಣ, ಭೂಸುಧಾರಣೆ ಮುಂತಾದ ಕಾರ್ಯಕ್ರಮಗಳಲ್ಲಿಯೂ 'ಕಸ್ಸಾ' ಪ್ರವರ್ತಿಸಿತು.

ಪ್ರಥಮ ಚಕ್ರದಲ್ಲಿ ನಿಧಿಯ ಇನ್ವೆಸ್ಟ್‌ಮೆಂಟ್
(ಮಿಲಿಯರ್ಡ್ ಲೀರೆ)

| | | |
|---|---|---|
| ಕೃಷಿ | ... | 602.9 |
| ಭೂಸುಧಾರಣೆ | ... | (253.7) |
| ರಸ್ತೆ | ... | 100.1 |
| ನೀರಿನ ದಾರಿ ಮತ್ತು ಚರಂಡಿ | ... | 101.4 |
| ಪ್ರವಾಸಿ ಉದ್ಯಮ | ... | 16.5 |
| ರೇಲ್ವೇ, ಬಂದರು | ... | 61.7 |
| | | 882.6 |

ಪ್ರಥಮ ಚಕ್ರದಲ್ಲಿ 'ಕಸ್ಸಾ'ಕ್ಕೆ ಒದಗಿದ ಅನುಭವದಿಂದಾಗಿ ಎರಡನೆ ಚಕ್ರದಲ್ಲಿ ಬೇರೆ ರೀತಿಯ ಯೋಜನೆ ರಚಿಸಲಾಯಿತು. ನಿಧಿಯ ಮೊತ್ತವನ್ನು ಇಡಿ ಪ್ರದೇಶದ ಮೇಲೆ ತೆಳುವಾಗಿ ಹರವಿದ್ದರಿಂದ ನಿರೀಕ್ಷಿತ ಫಲ – ಉತ್ಪಾದನೆ, ಉದ್ಯೋಗ ಹೆಚ್ಚುವರಿ – ಬರಲಿಲ್ಲ ಎನ್ನುವ ಟೀಕಾಕಾರರಿಗೆ ದ್ವಿತೀಯ ಚಕ್ರದಲ್ಲಿ ಉತ್ತರವನ್ನು ನೀಡಲಾಯಿತು. 'ಕಸ್ಸಾದ ಸಲಹಾ ಮಂಡಳಿಯಲ್ಲಿದ್ದ ಸಚಿವಸಂಪುಟ ತೆಂಕದಲ್ಲಿ ಹತ್ತು ಅಭಿವೃದ್ಧಿ ವಲಯಗಳನ್ನು ವಿಂಗಡಿಸಿಟ್ಟಿತು. 1959ನೇ ವರ್ಷ ಕೊನೆಯಾಗುವುದರೊಳಗೆ ಬಾರಿ, ಬ್ರಿಂದಿಸಿ, ತಾರುತೊ ಇವು ಮೂರು ಔದ್ಯಮಿಕ ಅಭಿವೃದ್ಧಿಗೆ ಸೂಕ್ತವಾದ ವಲಯಗಳೆಂದು ನಿಷ್ಕರ್ಷಿಸಲಾಯಿತು. ಪ್ರತಿ ವಲಯಕ್ಕೊಂದು

ಕನ್ಸೋರ್ಟಿಯಂ ರಚನೆ, ಆದಕ್ಕೆ 'ಕಸ್ಸಾ'ದಿಂದ ಅರ್ಧಾಂಶ ಆರ್ಥಿಕ ನೆರವು. ದ್ವಿತೀಯ ಚಕ್ರದಲ್ಲಿ ಕಲಾಬ್ರಿಯ ಪ್ರಾಂತಕ್ಕೆ ವಿಶೇಷ ನೆರವಿನ ಒಂದು ಯೋಜನೆಯನ್ನು ರೂಪಿಸಲಾಯಿತು. ಬೆಟ್ಟದ ಬದಿ ಕುಸಿಯುವುದು ಮತ್ತು ನೆರೆಯ ಬವಣೆ—ಕಲಾಬ್ರಿಯಕ್ಕೆ ವಿಶಿಷ್ಟವೆನಿಸಿದ ಆಪತ್ತುಗಳು. ಇವನ್ನು ಹೋಗಲಾಡಿಸುವುದಕ್ಕಾಗಿ ವಿಶೇಷ ತೆರಿಗೆಯನ್ನು ಹೊರಿಸಿ ಕಲಾಬ್ರಿಯದ ಜೀವನವನ್ನು ಸುಭದ್ರಗೊಳಿಸಲು ಸರಕಾರ ಹೆಣಗಿತು.

ಬಡಗದಲ್ಲಿರುವ ಉದ್ದಿಮದಾರರು ತೆಂಕಕ್ಕೆ ತೆರಳಿ ಉದ್ಯಮ ಮತ್ತು ವ್ಯಾಪಾರ ಪ್ರಾರಂಭಿಸಲು ಅವರಿಗೆ ಉತ್ತೇಜನ ನೀಡುವುದೂ 'ಕಸ್ಸಾ'ದ ಧ್ಯೇಯವಾಯಿತು. ಹತ್ತು ವರ್ಷಗಳ ವರೆಗೆ ತೆಂಕಕ್ಕೆ ಹೋದವರಿಗೆ ವಿನಾಯತಿ, ರೈಲು ದರದಲ್ಲಿ ಕಡಿತ, ಸಾಲದ ಬಡ್ಡಿಯ ದರದಲ್ಲಿ ಇಳಿತ—ಇವೂ ಬಡಗದವರು ತೆಂಕಕ್ಕೆ ಹೋಗಲು ಪ್ರಚೋದಕಗಳಾದುವು.

ಸಾಲ ನೀಡಿಕೆಯ ಬಗ್ಗೆ ಹಲವು ಸಂಸ್ಥೆಗಳು ಸ್ಥಾಪಿತವಾದುವು. 1959ರಲ್ಲಿ ಇಂಥ 30 ಸಂಸ್ಥೆಗಳು ತೆಂಕದಲ್ಲಿ ಕಾರ್ಯಮಗ್ನವಾಗಿದ್ದುವು. ಇವುಗಳಲ್ಲಿ ಈಮಿ (IMI), ಇಸ್ವೆಮರ್ (ISVEIMER), ಈರ್‌ಫಿಸ್ (IRFIS) ಮತ್ತು ಚಿಸ್ (CIS) ಪ್ರಖ್ಯಾತವಾದುವು. ಕಡಿಮೆದರದ ಬಡ್ಡಿಯಲ್ಲಿ ಸಾಲ ಕೊಡುವುದು, ದೀರ್ಘ ಕಾಲೀನ ಮತ್ತು ಮಧ್ಯಕಾಲೀನ ಸಾಲಗಳನ್ನು ಪೂರಯಿಸುವುದು, ಉದ್ಯಮಗಳ ನವೀಕರಣ ಮತ್ತು ವಿಸ್ತರಣಕ್ಕಾಗಿ ಸಾಲ ನೀಡುವುದು ಈ ಸಂಸ್ಥೆಗಳ ಕರ್ತವ್ಯ. 1954–59ರ ಪಂಚವಾರ್ಷಿಕ ಅವಧಿಯಲ್ಲಿ ಇಸ್ವೇಮರ್ ಹೊಸ ಕೈಗಾರಿಕೆಗಳಿಗೆ 59.3 ಮಿಲಿಯಾರ್ಡ್ ಮೌಲ್ಯದ 429 ಸಾಲಗಳನ್ನೂ, ನವೀಕರಣ ಕಾರ್ಯಕ್ಕಾಗಿ 37.4 ಮಿಲಿಯಾರ್ಡ್ ಬೆಲೆಯ 413 ಸಾಲಗಳನ್ನೂ ನೀಡಿದೆ. ಈರ್‌ಫಿಸ್ ಸುಮಾರು 75 ಮಿಲಿಯಾರ್ಡ್ ಸಾಲ ಕೊಟ್ಟಿದೆ. ಆಗಿಂದಾಗ ಕಸ್ಸಾಕ್ಕೆ ವಿಶ್ವಬ್ಯಾಂಕು ಮತ್ತು ಐರೋಪ್ಯ ಇನ್ವೆಸ್ಟ್‌ಮೆಂಟ್ ಬ್ಯಾಂಕು ಪ್ರತ್ಯೇಕ ಯೋಜನೆಗಳ ಸಲುವಾಗಿ ಸಾಲ ಕೊಟ್ಟಿದ್ದಾವೆ. ಉದಾ: 1958ರ ವರೆಗೆ ವಿಶ್ವಬ್ಯಾಂಕು ನೀಡಿದ 238 ಮಿಲಿಯ ಡಾಲರುಗಳನ್ನು ನೀರಾವರಿಗಾಗಿ ಬಳಸುವುದರ ಮೂಲಕ ಕಸ್ಸಾ ಕೃಷಿಗೆ ನೀಡಿದ ಆದ್ಯತೆಯ ಅರಿವಾಗುತ್ತದೆ. ತದನಂತರ ವಿದ್ಯುತ್ಕರಣಕ್ಕೂ ಹಲಕೆಲವು ಸಾಲಗಳನ್ನು ಹೊಂದಿಸಿಕೊಳ್ಳಲಾಯಿತು.

1957ರಲ್ಲಿ ಗುಡಿಕೈಗಾರಿಕೆಗಳ ಜೀರ್ಣೋದ್ಧಾರ ಮತ್ತು ನವೀಕರಣ ಕ್ಕಾಗಿ ಕಸ್ಸಾ ಟೊಂಕಕಟ್ಟಿತು. 75,000ಕ್ಕಿಂತ ಕಡಮೆ ಜನಸಂಖ್ಯೆಯ ಪಟ್ಟಣ ಅಥವಾ ಗ್ರಾಮಗಳಲ್ಲಿರುವ ಕುಶಲಕರ್ಮಿಗಳು ಯಾರೂ ಸಾಲಕ್ಕಾಗಿ ಅರ್ಜಿ ಸಲ್ಲಿಸಬಹುದು. ಬೇಕಾದ ಯಂತ್ರ, ಸಲಕರಣೆ, ಕಟ್ಟಡ, ಮುಂತಾದುವುಗಳ ಬಂಡವಾಳ ವೆಚ್ಚವನ್ನು 'ಕಸ್ಸಾ' ದಾನ(Grants)ದ ರೂಪದಲ್ಲಿ ಗುಡಿಗಾರರಿಗೆ ಕೊಡಲು ಬದ್ಧವಾಗಿದೆ. ಸ್ವಲ್ಪ ಕಾಲದಲ್ಲಿಯೇ 70 ಮಿಲಿಯರ್ಡ್ ಲೀರೆ ಮೌಲ್ಯದ 700 ಅರ್ಜಿಗಳು ಕಸ್ಸಾದ ಕಚೇರಿ ಯಲ್ಲಿ ದಾಖಲಾದುವು. ಇದು ನಿಜವಾಗಿ ಒಂದು ದಲಿತವರ್ಗದ ಉದ್ಧಾರ ಕಾರ್ಯಕ್ರಮವೇ ಆಯಿತು. ಬೃಹತ್ ಆಧುನಿಕ ಉದ್ಯಮಗಳಿಗೆ ಸಮಾ ನಾಂತರವಾಗಿ ಚಿಕ್ಕ ಪುಟ್ಟ ಕೈಗಾರಿಕೆಗಳವರೂ ಬದುಕಬೇಕೆಂಬ ಆಸೆಗೆ ಸರ್ಕಾರ ಪುಷ್ಟಿ ನೀಡಿತು.

ಈ ಮಧ್ಯೆ ತೆಂಕದ ಅಭಿವೃದ್ಧಿ ಯೋಜನೆಯಂತೆ ಆ ಪ್ರದೇಶದಲ್ಲಿ ಸ್ಥಾಪಿತವಾದ ಉದ್ಯಮಗಳು ಬಡಗಣಕ್ಕಿಂತ ಹೆಚ್ಚು ಲಾಭ ಗಳಿಸುವ ಸ್ಥಿತಿ ಯನ್ನು ಮುಟ್ಟಿದ್ದಾವೆಂದು ಒಂದು ಪಂಗಡದವರೂ, ಹಾಗಿಲ್ಲವೆಂದು ಮತ್ತೊಂದು ಪಂಗಡದವರೂ ಜಗಳ ಹಚ್ಚಿದ್ದಾರೆ. ಉದ್ಯಮಗಳನ್ನು ಅಖಿಲ ತೆಂಕ ಪ್ರದೇಶದಲ್ಲಿ ವಿಕೇಂದ್ರೀಕರಿಸಿ ಹರಡಬೇಕೆ ಅಥವಾ ವಿಶಿಷ್ಟ ಸ್ಥಳಗಳಲ್ಲಿ ಅಭಿವೃದ್ಧಿ ಕಾರ್ಯಕ್ಕೆ ಚಾಲನೆ ಕೊಡಬೇಕೆ ಎಂಬ ವಿಷಯ ದಲ್ಲಿಯೂ ಒಮ್ಮತವಿಲ್ಲ. ಬೆಳವಣಿಗೆ, ಔದ್ಯೋಗೀಕರಣ ಪೂರ್ತಿಯಾದ ಬಳಿಕ ತೆಂಕದ ಪಟ್ಟಣಗಳ ಜನ ಪರದೇಶ ಗಮನದ ಲೋಭ ಮೋಹ ಗಳಿಂದಾಗಿ ಹೊಸ ರಸ್ತೆ – ಆಟೋಸ್ತ್ರಾದ – ಮತ್ತು ವಾಹನಗಳನ್ನು ಬಳಸಿ ಬೇಗಬೇಗನೆ ದೇಶಾಂತರ ಹೊರಟರೆ ಏನು ಮಾಡೋಣ? ಅಭಿವೃದ್ಧಿ ಕಾರ್ಯ ಮುಂದುವರಿದಂತೆ 1950ರಿಂದ 62ರ ವರೆಗಿನ ದ್ವಾದಶ ವರ್ಷ ಗಳಲ್ಲಿ ತೆಂಕ ಇತಾಲಿಯ ಪ್ರದೇಶದ ಒಳಗಡೆಯೆ ಅಸಮತೆ ತಲೆಯೆತ್ತಿದೆ. ಕಂಪಾನಿಯ ಮತ್ತು ಲ್ಯಾಟಿಯುಮ್ ಪ್ರಾಂತಗಳು ಉಳಿದವುಗಳಿಗಿಂತ ಹೆಚ್ಚು ಪ್ರಗತಿ ಸಾಧಿಸಿ, ಮತ್ತೆ ಮತ್ತೆ ಉದ್ಯಮ ಸ್ಥಾಪಕರು ಅಲ್ಲಿಗೇ ಪ್ರಾಶಸ್ತ್ಯ ಕೊಡತೊಡಗಿದ್ದಾರೆ. ಸಾಲದ ಪೂರೈಕೆ ಮತ್ತು ಆಧುನೀಕರಣದ ತೀವ್ರ ಆಸಕ್ತಿ ಬೃಹತ್ ಉದ್ಯಮಗಳಿಗೆ ಮಾತ್ರ ಪ್ರೋತ್ಸಾಹ ಕೊಟ್ಟಿರು ವುದರಿಂದ ಉದ್ಯೋಗ ಅಷ್ಟಾಗಿ ಬೆಳೆಯಲಿಲ್ಲ. ಯುದ್ಧೋತ್ತರ ಉದ್ಯಮ

ಗಳಲ್ಲಿ ನವೀನ ತಂತ್ರಗಳ ಬಳಕೆ ಶ್ರಮಜೀವಿಗಳಿಗೆ ಗಿರಾಕಿ ಒದಗಿಸುವುದಿಲ್ಲ. – ಹೆಚ್ಚು ಬೆಲೆಯ ಬೃಹತ್ ಯಂತ್ರಗಳು ಮನುಷ್ಯಬಲವನ್ನು ಹಿಮ್ಮೆಟ್ಟಿಸಿರುವುದರಿಂದ ತೆಂಕದಲ್ಲಿ ನಿರುದ್ಯೋಗದ ಪ್ರಶ್ನೆ ಬಗೆಹರಿಯಲಿಲ್ಲ. ರಾಷ್ಟ್ರದ ಮುಖ್ಯ ಹೋಲ್ಡಿಂಗ್ ಕಂಪೆನಿಗಳೆನಿಸಿದ ಈರಿ (IRI) ಮತ್ತು ಏನಿ (ENI) ತೆಂಕದ ಕಡೆಗೆ ಇನ್ನಷ್ಟು ಕೃಪಾದೃಷ್ಟಿ ಬೀರಬೇಕು – ಹೀಗೆ ಭಿನ್ನಾಭಿಪ್ರಾಯಗಳಿಗೆ. ಚರ್ಚೆ, ವಿವಾದ ಮತ್ತು ಪ್ರಚಾರಕ್ಕೆ ಕೊನೆಯಿಲ್ಲ.

ಇಂಥ ಚರ್ಚೆಗಳಲ್ಲಿ ವಿಶ್ವವಿದ್ಯಾನಿಲಯದ ಪ್ರೊಫೆಸರ ಮಹಾಶಯರು ಸಕ್ರಿಯವಾಗಿ ಭಾಗವಹಿಸುವುದು ಇತಾಲಿಯದಲ್ಲಿ ಒಂದು ಸಾಮಾನ್ಯ ಸಂಗತಿ. ಆದರೆ ಭಾರತದ ಎರಡು ಪಂಚವಾರ್ಷಿಕ ಯೋಜನೆಗಳ ಗತಿ–ಪ್ರಗತಿ–ಸಾಧನೆಯ ಕುರಿತು ಹೆಚ್ಚಾಗಿ ತಟಸ್ಥ ನೀತಿಯನ್ನನುಸರಿಸಿದ ನಮ್ಮ ವಿಶ್ವವಿದ್ಯಾನಿಲಯದ ಪಂಡಿತವರ್ಗದ ಅನುಭವವುಳ್ಳ, ನನ್ನ ದೃಷ್ಟಿಗೆ ಇತಾಲಿಯದ ಈ ದೃಶ್ಯ ವಿಚಿತ್ರವಾಗಿ ಕಂಡಿತು. ವಿಶ್ವವಿದ್ಯಾನಿಲಯಗಳು ಸಂಖ್ಯೆಯಲ್ಲಿ–ವಿದ್ಯಾರ್ಥಿ ಸಂಖ್ಯೆಯಲ್ಲಿ, ಅಧ್ಯಾಪಕ ಸಂಖ್ಯೆಯಲ್ಲಿ – ವಿಸ್ತಾರವಾಗುತ್ತ, ಪ್ರಜಾಪ್ರಭುತ್ವದ ಒತ್ತಡ–ಒತ್ತಾಸೆಗಳ ದೆಸೆಯಿಂದ ಹೊಸ ಹೊಸ ಆರ್ಥಿಕ ಸಾಮಾಜಿಕ ವರ್ಗಗಳ ಪ್ರತಿನಿಧಿಗಳನ್ನು ಸೇರಿಕೊಳ್ಳುತ್ತ ಜನತಾ ವಿಶ್ವವಿದ್ಯಾನಿಲಯಗಳ ರೂಪವನ್ನು ಪಡೆದ ಮುಹೂರ್ತದಲ್ಲಿಯೂ ಅವು ಜನಸಾಮಾನ್ಯರ ಪ್ರಗತಿ ಚಿಂತನೆಯಲ್ಲಿ ಸಕ್ರಿಯವಾಗಿ ಪಾಲುಗೊಳ್ಳದಿರುವುದನ್ನು ಒಂದು ರೀತಿಯ ಬೇಜವಾಬುದಾರಿತನವೆಂದೇ ಹೇಳಬೇಕಾಗುತ್ತದೆ. ಸರ್ಕಾರದ ಯಾವುದೋ ಒಂದು ಸಮಿತಿಯಲ್ಲಿ ವಿಶ್ವವಿದ್ಯಾನಿಲಯದ ಅರ್ಥಶಾಸ್ತ್ರ ಯಾ ಸಮಾಜಶಾಸ್ತ್ರದ ಮುಖ್ಯ ಪ್ರಾಧ್ಯಾಪಕನಿಗೆ ಹತ್ತರ ಕೂಡೆ ಹನ್ನೊಂದು ಸ್ಥಾನ ಲಭಿಸಿದರೂ ಆತನ ಅಭಿಪ್ರಾಯಗಳಿಗೆ ಅಲ್ಲಿ ಗೌರವ ಇಲ್ಲವೋ ಅಥವಾ ಗೌರವ ಹುಟ್ಟುವಂಥ ಯಾವ ಅಭಿಪ್ರಾಯವೂ ಅವನ ಹತ್ತಿರ ಇಲ್ಲವೋ ಎಂದು ತಿಳಿಯುವುದು ಕಷ್ಟ. ನಮ್ಮ ಯೋಜನೆಯ ಕರಡು ತಯಾರಿಸುವುದೂ ಸರ್ಕಾರಿ ಯೋಜನಾ ಭವನದಲ್ಲಿ, ಅದರ ಮೌಲ್ಯಾಂಕನ ನಡೆಯುವುದೂ ಅಲ್ಲೇ. ಸರ್ಕಾರಿ ವಿಭಾಗದ ಅರ್ಥಶಾಸ್ತ್ರಜ್ಞರದೇ ಅಲ್ಲಿ ದಾಲತ್ತು; ಹೊರಗಿನ ಅಂದರೆ ವಿಶ್ವವಿದ್ಯಾನಿಲಯಗಳವರು ವಿರುದ್ಧ ಅಥವಾ

ಭಿನ್ನಾಭಿಪ್ರಾಯವನ್ನು ಹೊಂದಿದ್ದರೂ ಅದನ್ನು ಪ್ರಕಟಿಸದೆ, ಪ್ರಚಾರ ಮಾಡದೆ ಜನಸಾಮಾನ್ಯಕ್ಕೆ ಅಪಚಾರ ಮಾಡಿದ್ದಾರೆಂದೇ ನನ್ನ ಭಾವನೆ. ಇತಾಲಿಯದಲ್ಲಿ ಹೀಗಿಲ್ಲ. ಪ್ರೊಫೆಸರುಗಳ ಅಭಿಪ್ರಾಯಗಳ ಮೇಲೆಯೆ ಅಲ್ಲಿನ ಎಷ್ಟೋ ಯೋಜನೆಗಳು ನಿರ್ಮಿತವಾಗಿದ್ದಾವೆ; ಎಲ್ಲ ವಿಶ್ವವಿದ್ಯಾನಿಲಯಗಳ ಪ್ರೊಫೆಸರುಗಳೂ ದೈನಂದಿನ ಜೀವನದ ಮೇಲೆ ಪ್ರಬಲ ಪರಿಣಾಮ ಬೀರುವಂಥ ಯೋಜನೆಗಳ ಕುರಿತು ಸ್ವತಂತ್ರ ಅಭಿಪ್ರಾಯಗಳನ್ನು ಪುಸ್ತಕಗಳಲ್ಲಿ ಪತ್ರಿಕೆಗಳಲ್ಲಿ ಪ್ರಕಟಿಸುತ್ತಾರೆ; ಅಭಿವೃದ್ಧಿ ಕೇಂದ್ರಗಳ ನಿಷ್ಪಕ್ಷಪಾತ ವಿಮರ್ಶೆ-ಸಂಶೋಧನೆ ನಡೆಸುತ್ತಾರೆ. ಸರ್ಕಾರವಾದರೂ ಅವರನ್ನು ತನ್ನ ವರ್ಚಸ್ಸಿನ ವಲಯದಿಂದ ಹೊರಗಿಟ್ಟಿಲ್ಲ; ಪ್ರೊಫೆಸರುಗಳನ್ನು ಕಟ್ಟಿಕೊಂಡು ಕೆಲಸ ಮಾಡುವುದು ತಮಗೆ ಗೌರವವೆಂದು ಅಲ್ಲಿನ ರಾಜಕೀಯಸ್ಥ ಜನ ತಿಳಿದಿದ್ದಾರೆ. ಇಸ್ಪೀಗೆ ಬಂದ ಹಿರಿಯ ಪ್ರಾಧ್ಯಾಪಕರಲ್ಲಿ ಪ್ರತಿಯೊಬ್ಬನೂ ಒಂದಲ್ಲ ಒಂದು ಕೇಂದ್ರೀಯ ಅಥವಾ ಸ್ಥಾನೀಯ ಸರ್ಕಾರಿ ಯಾ ಅರೆಸರ್ಕಾರಿ ಸಂಸ್ಥೆಗಳಲ್ಲಿ, ಯಾವ ಯಾವುದೋ ಸಮಿತಿಗಳಲ್ಲಿ ಸದಸ್ಯ. ಎಂದರೆ ತುಟಿ ಬಿಚ್ಚದ 'ಗೌರವ' ಸದಸ್ಯನಲ್ಲ; ಸಾಕಷ್ಟು ಚರ್ಚೆ ಮಾಡಬಲ್ಲ ಬಾಯಾಳಿ, ಹೋರಾಟಗಾರ, ಸ್ವಾಭಿಪ್ರಾಯ ಮಂಡನೆಯಲ್ಲಿ ನಿಷ್ಣಾತ, ತನ್ನ ಬುದ್ಧಿಶಕ್ತಿ ಮತ್ತು ಪ್ರಾವೀಣ್ಯವನ್ನು ಸ್ವದೇಶದ ಅಭಿವೃದ್ಧಿಗಾಗಿ ನಿಷ್ಠೆಯಿಂದ ಸಮರ್ಪಿಸುವ ಬುದ್ಧಿಜೀವಿ. ಇತಾಲಿಯನ್ ಯೋಜನೆಗಳ ಮೂಲದಲ್ಲಿ ಇಂಥ ಬೌದ್ಧಿಕ ಆಧಾರಗಳಿರುವುದರಿಂದಲೇ ಅಲ್ಲಿನ 12 ವರ್ಷಗಳ ಪ್ರಗತಿ ನಮ್ಮ ದೇಶದ ಎರಡು ಪಂಚವಾರ್ಷಿಕ ಯೋಜನೆಗಳಿಗಿಂತಲೂ ಹೆಚ್ಚು ಪ್ರೇಕ್ಷಣೀಯವಾದ ಸಾಧನೆಯೆನಿಸಿತು.

ತೆಂಕ ಇತಾಲಿಯದ ಅಭಿವೃದ್ಧಿ ಯೋಜನೆಗಳ ಪರಿಣಾಮವನ್ನು ಅಲ್ಲಿನ ವರಮಾನ ಹೆಚ್ಚುವರಿಯ ಪ್ರಮಾಣದ ಮೇಲಿಂದ ನೋಡಿದರೆ ಬಡಗದಂತೆಯೆ, ಹೆಚ್ಚುಕಡಿಮೆ ಅದೇ ದರದಲ್ಲಿ, ಇಲ್ಲೂ ವರಮಾನ ಮತ್ತು ಉತ್ಪತ್ತಿ ಹೆಚ್ಚಿದ ಸೂಚನೆ ಕಂಡುಬರುತ್ತದೆ. ತಲಾ ವರಮಾನ ಬಡಗದಲ್ಲಿರುವುದಕ್ಕಿಂತ ಅರ್ಧದಷ್ಟೆ ಅಲ್ಲವೆ ಎಂದು ನಿರಾಶೆ ಉಂಟಾಗುವುದಾದರೂ, ಪ್ರಗತಿಯ ವೇಗದಲ್ಲಿ ಸಮಾನತೆ ಉಂಟಾದದ್ದು ಒಂದು ಪ್ರಶಂಸನೀಯ ಸಿದ್ಧಿ ಎನ್ನಬಹುದು.

## ಪ್ರಾದೇಶಿಕ ವರಮಾನ

| | 1951 | | 1959 | |
|---|---|---|---|---|
| | ತೆಂಕ | ಬಡಗ | ತೆಂಕ | ಬಡಗ |
| ಒಟ್ಟು ಇನ್ವೆಸ್ಟ್‌ಮೆಂಟ್ (ಮಿಲಿಯಾರ್ಡ್‌ಲೀರೆ) | 442 | 1641 | 888 | 2939 |
| ಪ್ರಾದೇಶಿಕ ವರಮಾನ (ಮಿಲಿಯಾರ್ಡ್ ಲೀರೆ) | 1948 | 6878 | 3267 | 12064 |
| ತಲಾ ಪ್ರಾದೇಶಿಕ ವರಮಾನ (000 ಲೀರೆ) | 110.3 | 231.1 | 172 | 383.1 |
| ಸೂಚೀ ಸಂಖ್ಯೆ (1951 = 100) | 100 | 100 | 155.9 | 165.8 |

## □ □ ನಾ ಕಂಡ ತೆಂಕದ ಚಿತ್ರ

ತೆಂಕದ ರಾಜಧಾನಿ ಎನಿಸುವ ನಾಪೊಲಿ ನಗರದಲ್ಲಿ ಆರು ತಿಂಗಳು ವಾಸ ಮಾಡಿರುವುದರಿಂದ ನಾ ಕಂಡ ತೆಂಕದ ಚಿತ್ರಗಳಲ್ಲಿ ಅದು ಇಷ್ಟು ವರ್ಷಗಳ ಮೇಲೂ ಮನಸ್ಸಿನಲ್ಲಿ ಅಚ್ಚಳಿಯದೆ ನಿಂತಿದೆ. ಮೆಡಿಟರೇನಿಯನ್ ಪ್ರದೇಶದಲ್ಲಿ ಚಳಿಗಾಲದ ಮಳೆಯ ಹೊಡೆತ ಹೇಗಿರುತ್ತದೆಂದು ಅನುಭವಿಸಿಯೇ ತಿಳಿಯಬೇಕು. 120 ಇಂಚು ಮಳೆ ಬೀಳುವ ಕರಾವಳಿ ಮೈಸೂರಿನ ಕಷ್ಟೆಯಾದ ನನಗೂ ಈ ಚಿಳಿಚಿಟಿ ಮಳೆ ಬೇಸರ ಹಿಡಿಸಿಬಿಟ್ಟಿತು. ಲೇಫ್ಲೋಂತಾನೇಯ ವಿಶಾಲವಾದ ಗಾಜಿನ ಕಿಟಿಕಿಗಳನ್ನು ಅಮುಕುವ ಗಾಳಿ. ಸೆಳೆಮಿಂಚು, ಕಾರ್ಮೋಡ, ಆಗೊಮ್ಮೆ ಈಗೊಮ್ಮೆ ಬಿಲ್ಲೋಣೆ, ವಾತಾವರಣದ ಮಂಜು ಸೇರಿದ 'ಅಸೂರ್ಯಾ ತೇ ಲೋಕಾ' ಇದನ್ನು ನೋಡಲಾರದೆ ಹಾಸಿಗೆಯಲ್ಲಿ ಬಿದ್ದು ಗುಬ್ಬಚ್ಚಿಯಂತೆ ಎರಡೆರಡು ಕಂಬಳಿ ಹೊದ್ದು ನಿದ್ದೆ ಹೋಗುವುದು – ಹಗಲಿಗೂ, ರಾತ್ರಿಗೂ – ಎಷ್ಟು ಸವಿಯಾಗಿತ್ತು? ದಿನಚರಿಯನ್ನು ಆರಂ

ಭಿಸಿಬಿಡುತ್ತೇನೆ. ಇಷ್ಟು ದೂರ ಬಂದು ನನ್ನ ಕನ್ನಡ ಬಂಧುಗಳಿಗೆ ಸ್ವಾನುಭವದ ವರ್ಣನೆಯನ್ನು ಮಾಡದಿದ್ದರೆ ಅವರಿಗೆ ಎಂಥ ನಷ್ಟ ವಾದೀತು, ಇವತ್ತು ಶುರುಮಾಡುತ್ತೇನೆ, ಸಂಜೆಗೆ 'ಉಪಿಮ್'ಗೆ ಹೋಗಿ ಕಾಗದ ತರಬೇಕು, ಪೇನಕ್ಕೆ ಶಾಯಿ ತುಂಬಿಸಬೇಕು – ಹೀಗೆ ಏನೇನೋ ಯೋಚನೆ. ರಜಾದಿನಗಳಲ್ಲಿ ಹೊರಗೆ ಹೋದರೆ ಚಳಿ–ಗಾಳಿ–ಮಳೆ; ಒಳಗೆ ಕೂತರೆ ಇಂಗ್ಲಿಷ್ ಪುಸ್ತಕಗಳನ್ನು ಮಾತ್ರ ಓದಬಲ್ಲ ನಮಗೆ ಪುಸ್ತಕ ಎಲ್ಲಿದೆ? ಪುಸ್ತಕವೇ ಏಕೆ ಪತ್ರಿಕೆಗಳ ಸುದ್ದಿಯೂ ದುರ್ಲಭ. ಮುಂಜಾನೆಯ ಫಲಾಹಾರದ ಹೊತ್ತು ನಾಪೊಲಿಯ ದೈನಿಕ 'ಇರ್‌ಮತ್ತೀನಾ'ದ ಚಿತ್ರ ನೋಡುವುದರಲ್ಲಿಯೇ ನಮಗೆ ತೃಪ್ತಿ. ಅದರಲ್ಲಿ ಬರೆದದ್ದು ಯಾವುದೂ ಅರ್ಥವಾಗುವಂತಿರಲಿಲ್ಲ. ಸಾಯಂಕಾಲ ವಿಯಾರೋಮದಲ್ಲಿ ಲಂಡನ್ನಿನ ಟೈಮ್ಸ್ ಸಿಗುತ್ತಿತ್ತು – ಅದಕ್ಕೂ 120 ಲೀರೆ ತೆರಬೇಕು – ವಿದೇಶವಿನಿ ಮಯದ ಸುಜಾಗ್ರತೆಯುಳ್ಳ ನನ್ನ ಜೇಬಿಗೆ ಇಷ್ಟನ್ನು ಬಿಡುವುದು ಕಷ್ಟ ವಾಗುತ್ತಿತ್ತು. ಆದರೂ ಮೂರು ದಿನಕ್ಕೊಮ್ಮೆಯಾದರೂ ಟೈಮ್ಸ್ ಕೊಂಡು ಅದರಲ್ಲಿ ನಮ್ಮ ದೇಶದ ಸಮಾಚಾರ ಓದಿಕೊಳ್ಳಬೇಕು, ದೇಶ ದೇಶಾಂತರದ ವರ್ತಮಾನ ಸ್ಥಿತಿಗತಿ ನಮಗೆ ತಿಳಿಯಬೇಕು ಹೊರತು ಇತಾಲಿಯನ್ ಪತ್ರಿಕೆಗಳಿಂದ ನಮಗೇನೂ ಪ್ರಯೋಜನವಾಗುತ್ತಿರಲಿಲ್ಲ. ವಿಶೇಷ ಸುದ್ದಿ ಏನಾದರೂ ಇದ್ದರೆ ಬಾಲೆತೀಚ್ ಅಥವಾ ಆಲಿ ನಮಗೆ ತರ್ಜುಮೆ ಮಾಡಿ ತಿಳಿಸುತ್ತಿದ್ದರು.

ಫಲಾಹಾರ – ಮುಗಿಯುವ ಹೊತ್ತಿಗೆ – 8.30ಕ್ಕೆ ನಮ್ಮ ಬಸ್ಸು ಸಿದ್ಧವಾಗಿಬಿಡುತ್ತಿತ್ತು. ಅದರಲ್ಲಿ ಲೇಘೋಂತಾನೆ ನಿವಾಸಿಗಳಾದ ಹತ್ತು ಜನ ವಿದ್ಯಾರ್ಥಿಗಳು ಕೂತುಕೊಳ್ಳಬೇಕು. ನಮಗಿಂತ ಮೊದಲೇ ಅಲ್ಲಿ ಆಸೀನಳಾಗಿರುತ್ತಿದ್ದವಳು ಇಸ್ವೇ ಕಚೇರಿಯ ಟೈಪಿಸ್ಟ್ ಫ್ರಾಂಕಾ. ತೆಂಕ ಇತಾಲಿಯದ ಸರ್ವ ಜನರಂತೆ ಈಕೆಯೂ ಕುಳ್ಳಗೆ–ಬೆಳ್ಳಗೆ. ಇತಾಲಿಯನ್ ಬಲ್ಲ ವಿದ್ಯಾರ್ಥಿಗಳು ಅವಳ ಹತ್ತಿರ ಸರಸಸಲ್ಲಾಪ ಮಾಡಿಯೇ ತಮ್ಮ ಸೀಟನ್ನು ಆವರಿಸುವರು. ನನ್ನದು 'ಬೋನ್‌ಜೋರ್ನೊ' ಮಾತ್ರ. ಅಲ್ಲಿಂದ ಬಸ್ಸು ಗುಡ್ಡ ಹತ್ತಿ ಹೋಟೇಲ್ ಸ್ಪ್ಲೆಂಡಿಡ್‌ಗೆ ಹೋಗಬೇಕು – ಅಲ್ಲಿನ ಇಸ್ವೇ ಗುಂಪನ್ನು ತುಂಬಿಕೊಳ್ಳಲು. ಪ್ರತಿನಿತ್ಯ ದಾರಿಯಲ್ಲಿ ಒಂದು ಅಮೆರಿ ಕನ್ ಶಾಲೆಯ-ಮಕ್ಕಳ ಸ್ಕೂಲ್ ಬಸ್ಸು ನಮ್ಮ ಮುಂದೆ ಓಡಿ ಸ್ಪ್ಲೆಂಡಿಡ್

ಸಮೀಪದ ಅಮೇರಿಕನ್ ಶಾಲೆಯಲ್ಲಿ ಅವರನ್ನಿಳಿಸುವುದು. ಇಳಿದ ಮಕ್ಕ ಳಿಗೆ ಮೊದಲ ಪಾಠವೇ ಫುಟ್‌ಬಾಲ್! ಕೆಂಪು ನೀಲಿ ಸ್ವೆಟರ್ ತೊಟ್ಟು ಕೊಂಡ ಹೃಷ್ಟ-ಪುಷ್ಟ ಮಕ್ಕಳು ಕೇಕೆಹಾಕುತ್ತ ಆಟವಾಡುವುದನ್ನು ನೋಡು ವಷ್ಟಕ್ಕೆ ಬಸ್ಸು ಮತ್ತೆ ಹೊರಟು ಇನ್ನಷ್ಟು ಗುಡ್ಡಗಳನ್ನು ಸುತ್ತಿಕೊಂಡು ನಾಪೊಲಿಯ ಸುರಮ್ಯ ಸಾಗರದ ದೃಶ್ಯವನ್ನು ಕಣ್ಣಿಗೆ ಹಾಯಿಸಿ ಮೊಸ್ತ್ರಾ ಪ್ರದೇಶದಲ್ಲಿ ತಂಗುವುದು: ಮೋಸ್ತ್ರಾದ ಕಟ್ಟಡ ಪ್ರವೇಶಿಸಿ ನಮ್ಮ ನಮ್ಮ ಸೀಟುಗಳಲ್ಲಿ ಮುದ್ದೆಯಾಗಿ ಕೂತುಬಿಟ್ಟರೆ ಸ್ವಲ್ಪ ಹೊತ್ತಿನಲ್ಲೇ ನಮ್ಮ ಪ್ರೊಫೆಸರ್ ಮಹಾಶಯರು ಫೆರ್ರೊಲಾ ಅಥವಾ ಬೊನೆಯೋ ಜತೆ ಪ್ರವೇಶ ಮಾಡುವರು. ಮೊದಲ ದಿವಸ ಪ್ರತಿ ಕುರ್ಚಿಗೂ ನಮ್ಮ ಹೆಸ ರನ್ನು ಅಂಟಿಸಿದ್ದರು. ಸಾಲಾಗಿ ನೋಡುತ್ತ ಹೋದರೂ ನನ್ನ ಹೆಸರು ಕಾಣಿಸಲಿಲ್ಲ – ಆದರ ಬದಲು ಕುಂಜಿಬೆಟ್ಟು ಮೂರಿಂಚಿನ ಅಕ್ಷರದಲ್ಲಿ ರಾರಾಜಿಸುತ್ತಿತ್ತು. ನಾನು ಹುಟ್ಟಿದ ಸ್ಥಳದ ಸ್ಮರಣೆ ಮಾಡಲು ಇದೊಳ್ಳೆ ಯದೇ ಆಯಿತು. ಊರಿನ ಹೆಸರು ಯಾವುದು, ಅಡ್ಡ ಹೆಸರು ಯಾವುದು, ನಿಜವಾದ ಹೆಸರು ಯಾವುದು – ಇದನ್ನು ಬಿಡಿಸಿ ಬಿಡಿಸಿ ಆಮೇಲೆ ಹೇಳ ಬೇಕಾಯಿತು. ಇಸ್ವೇಯ ಕಚೇರಿಯ ಜನಗಳಿಗೂ, ಫೆರ್ರೋಲರಿಗೂ ನಾನು ಪ್ರೊಫೆಸರ್ ಭಾತ್ ಆದೆ, ಡೈರೆಕ್ಟರ್ ಡಿಜನ್ನಾರೊ ಅವರಿಗೆ ಹರಿ ದಾಸಾ ಆದೆ, ಬೊನೆಯೋ ಮುಂತಾದವರಿಗೆ ಡಾಕ್ಟರ್ ಭಾತ್ ಆಗಿ ಬಿಟ್ಟೆ. (ಇತಾಲಿಯದಲ್ಲಿ ಡಾಕ್ಟರ್ ಆಗಲು ಕಷ್ಟವಿಲ್ಲ – ಎಲ್ಲ ಪದವೀಧರ ರಿಗೂ ಕೊಡುವ ಡಿಗ್ರಿಯೇ ಡಾಕ್ಟರೇಟು, ಅವರನ್ನು ಕರೆಯುವುದೂ ಹಾಗೆಯೆ – 'ದೊತ್ತರ್'. ಇದು ಒಂದು ಅವಧಾರಕ. ಬೊನೆಯೋ ಒಬ್ಬ ಇಂಜಿನಿಯರ್, ಅವನನ್ನು ಎಲ್ಲರೂ 'ಇಂಜಿನೀರೇ' ಎಂದು ಕರೆಯಬೇಕು)

90 ಮಿನಿಟು ಕ್ಲಾಸಿನ ಉಪನ್ಯಾಸ ಮುಗಿದ ಕೂಡಲೇ 10 ಮಿನಿಟು ವಿರಾಮ – ನಮ್ಮ ಲೆಕ್ಕಕ್ಕೆ. ಅಂದರೆ ಇಸ್ವೇ ಪಾಠಪಟ್ಟಿಯಲ್ಲಿ ವಿರಾಮದ ಸೂಚನೆ ಇರಲಿಲ್ಲ. ನಾವಾಗಿ ಎಲ್ಲರೂ ಹೊರಗೆ ಬಂದುಬಿಟ್ಟರೆ ತನ್ನಂತೆ ವಿರಾಮ ಕಾಲ ಸೃಷ್ಟಿಯಾಗಿಬಿಡುತ್ತಿತ್ತು. ಅದೇ ವೇಳೆಗೆ ಒಬ್ಬ ಹುಡುಗ ತಾಟಿನಲ್ಲಿ 'ಕಫೆ' ತರುತ್ತಿದ್ದ. ಕಫೆ ಕುಡಿದು, ಸಿಗರೇಟು ಸೇದಿ ಪಟ್ಟಾಂಗ ಮುಗಿಸಿ ಕ್ಲಾಸುರೂಮನ್ನು ಸೇರುವವರಲ್ಲಿ ಏಶಿಯದ ವಿದ್ಯಾರ್ಥಿಗಳು ಅಗ್ರೇಸರರು. ಲ್ಯಾಟಿನ್ ಅಮೇರಿಕದ ತರುಣರನ್ನು ಫೆರೊಲಾ, ಬೊನೆಯೊ

ಎಲ್ಲೆಲ್ಲೋ ಮೂಲೆಯಿಂದ ಹೆಕ್ಕಿ, ಸೂಕಿ, ಅಂಗಲಾಚಿ, ಕರೆದುಕೊಂಡು ಬರಬೇಕು. ಅದನ್ನು ತಡಮಾಡಿ ಬರುವುದನ್ನು ಒಂದು ಲಲಿತಕಲೆಯಾಗಿ ಮಾಡಿಕೊಂಡ ತರುಣರೂ ಇದ್ದರು. 'ಬಸ್ಸಿ ಹೊತ್ತಾಯಿತು', ಎಂದು ಗಂಟೆ ಬಾರಿಸಿದ ಮೇಲೆಯೇ ಶೌಚಕ್ಕೆ ಓಡುವುದು ಕ್ಲಾಸ್ ತಪ್ಪಿಸುವ ಒಂದು ಉಪಾಯವಾಗಿತ್ತು. ಒಂದು ಗಂಟೆಗೆ ಅಥವಾ ಒಂದೂವರೆಗೆ ಪಾಠ ಮುಗಿದ ಮೇಲೆ ಫರ್ಲಾಂಗು ದೂರದ ಮೋಸ್ತ್ರಾ ಕೆಂಟೀನಿಗೆ ಹೋಗಬೇಕು. ಅಲ್ಲಿನ ದಾರಿ ಪ್ರಾಣಿಸಂಗ್ರಹಾಲಯದೊಳಗಿಂದಲೇ ಇದ್ದುದರಿಂದ ಕ್ಯಾಂಟೀನಿನ ಭೋಜನ ಮುಗಿದ ತರುವಾಯ ಪ್ರಾಣಿವೀಕ್ಷಣೆಯಲ್ಲೇ ಸ್ವಲ್ಪ ಕಾಲ ಕಳೆದು ವರ್ಗವನ್ನು ತಡವಾಗಿ ಹೋಗುವವರೂ ಇದ್ದರು. ಅಲ್ಲಿಂದಲೇ ಕಂಬಿ ಕೀಳುವುದೂ ಇತ್ತು. ಅಂತೂ ಮಧ್ಯಾಹ್ನದ ಹಾಜರಿ ಸೇಕಡಾ ಹತ್ತೊ ಇಪ್ಪತ್ತೊ ಖೋತಾ.

ಅಪರಾಹ್ನ ಹೆಚ್ಚಾಗಿ ಉಪನ್ಯಾಸಗಳಿಲ್ಲ–ಚರ್ಚೆ, ಸೆಮಿನಾರ್: ಮೊದಲು ಕೆಳಗಡೆಯ ಚಿಕ್ಕ ಚಿಕ್ಕ ಸೆಮಿನಾರ್ ಅರೆಗಳಲ್ಲಿ ಆರು–ಎಂಟು ಜನ ಸೇರಿ ಮುಂಜಾನೆಯ ಉಪನ್ಯಾಸಕ್ಕೆ ಸಂಬಂಧಪಟ್ಟ ಮುಖ್ಯಾಂಶಗಳ ಬಗ್ಗೆ ಅಭಿಪ್ರಾಯ ಮಂಡನೆ, ಚರ್ಚೆ. 3.30ಕ್ಕೆ ಈ ಚರ್ಚೆ ಮುಗಿದು ಮತ್ತೆ ಮೇಲ್ಗಡೆ ಇರುವ ಉಪನ್ಯಾಸ ಭವನಕ್ಕೆ ಹೋಗಬೇಕು. ಅಲ್ಲಿ ಪ್ರತಿ ಗುಂಪೂ ತನ್ನ ವರದಿ ಒಪ್ಪಿಸಬೇಕು. ಮತ್ತೆ ಚರ್ಚೆ–ಉಪನ್ಯಾಸಕರ ಸನ್ನಿಧಿಯಲ್ಲಿ. 5 ಗಂಟೆ ಸಮೀಪವಾದಂತೆ ಎಲ್ಲರಿಗೂ ಗಡಿಯಾರದ ಮೇಲೆ ಕಣ್ಣು. ಗಂಟೆ ಬಾರಿಸುವ ಮೊದಲೇ ಬಸ್ಸಿನೊಳಗೆ ಓಡಾಟ. ಕಟ್ಟ ಕೊನೆಗೆ ಬಸ್ಸು ಹತ್ತುವವನೇ ಬಾಲೆತಿಚ್ – ಒಳಗೆ ಬಂದ ಮೇಲೂ ಅವನ ಚರ್ಚೆ ಮುಗಿದಿರುವುದಿಲ್ಲ.

ಮರಳುವ ದಾರಿಯಲ್ಲಿ ಹೋಟೆಲ್ ಸ್ಪ್ಲೆಂಡಿಡ್ ದಾಟಿ ಲೇಪ್ಪೋಂತಾನೆಗೆ ಬರಬೇಕಾದರೆ ದಾರಿಯಲ್ಲಿ ಕಟ್ಟುತ್ತಿರುವ ಕಟ್ಟಡಗಳನ್ನು ನೋಡಬಹುದು. ಆಧುನಿಕ ಯಂತ್ರೋಪಕರಣಗಳ ಸಹಾಯದಿಂದ ಆರು ತಿಂಗಳಲ್ಲೇ ಅಡಿಪಾಯದಿಂದ ತೊಡಗಿ ಸಂಪೂರ್ಣವಾದ ಒಂದು ಎಂಟಂತಸ್ತಿನ ಕಟ್ಟಡದ ಪ್ರಗತಿಯನ್ನು ದಿನಾ ನಿರೀಕ್ಷಿಸುತ್ತಿದ್ದೆ. ಹಳೇ ನಾಪೋಲಿಯ ಬಂದರುಪ್ರದೇಶದ ಮನೆಗಳು ಪುರಾತನ ಕಾಲದ ಇಟ್ಟಿಗೆ-ಸುಣ್ಣ-ಗಾರೆ-ಮರ-ಮೋಪು-ಹೆಂಚುಗಳಿಂದ ನಿರ್ಮಿತವಾದುವು. ಬಂದರ ಪ್ರದೇಶದ

ಎಷ್ಟೋ ಮನೆಗಳ ಗೋಡೆಗಳ ಮೇಲೆ ಯುದ್ಧದ ತುಪಾಕಿಗಳ ಪೆಟ್ಟಿನ ಚಿಹ್ನೆ ಇದ್ದಿತ್ತು. ಆದರೆ ಹೊಸತಾಗಿ ವೊಮೇರೋ ಗುಡ್ಡದ ಸರ್ಪ ಮಾರ್ಗದ ಇಕ್ಕೆಲದಲ್ಲಿ ಎದ್ದು ನಿಂತ ಮಹಾಸೌಧಗಳು ಉಕ್ಕು ಸಿಮೆಂಟಿನ-ಗಾಜಿನ ಪಾರದರ್ಶಕವಾದ ಭದ್ರ ಕೋಟೆಗಳೇ ಆಗಿದ್ದವು. ನಾಪೊಲಿಯಲ್ಲಿ ಗೃಹನಿರ್ಮಾಣವೂ ಒಂದು ಮಹೋದ್ಯಮವಾಯಿತು. ಇದಕ್ಕೋಸ್ಕರವೇ ನಮ್ಮ 'ಟ್ರಸ್ಟ್ ಬೋರ್ಡ್' ಅಂಥ ಹಣ ಸರಬರಾಜು-ಸಂಸ್ಥೆಗಳೂ ಅಲ್ಲಿ ಇದ್ದುವು. ಪ್ರತಿ ಮನೆಗೂ ಲಿಫ್ಟ್–ಹತ್ತು ಹನ್ನೆರಡು ಮಹಡಿಗಳ ಮೇಲೆ 50–60 ಕುಟುಂಬಗಳಿಗೆ ವಾಸಮಾಡಲು ಅನುಕೂಲತೆ ಇರು ತ್ತಿತ್ತು. ಕಾರುಗಳನ್ನಿಡಲು ಸ್ಥಳಾವಕಾಶ ಮಾತ್ರ ಕಡಿಮೆ; ಆದ್ದರಿಂದ ಕಾರುಗಳನ್ನು ಬೀದಿಯಂಚಿನ ಕಾಲ್ದಾರಿಯಲ್ಲಿಯೆ ಬಿಟ್ಟುಬಿಡುತ್ತಾರೆ– ಎರಡು ಚಕ್ರ ರಸ್ತೆಯಂಚಿನಲ್ಲಿ, ಇನ್ನೆರಡು ಏರಾದ ಕಾಲ್ದಾರಿಯ ಮೇಲೆ. ಹೀಗೆ 20° ವಾಲಿಕೊಂಡು ಕಾರುಗಳ ಸಾಲುಸಾಲು ರಾತ್ರಿ ಎಲ್ಲ ಮನೆಗಳ ಮುಂದೆ ಕಾವಲು. ವಾರಕ್ಕೊಂದೆರಡಾವರ್ತಿ ಇದಕ್ಕಾಗಿ ಪೊಲೀಸರು ಅವರಿಗೆ ದಂಡನೆ ವಿಧಿಸುವುದೂ ಉಂಟು. ಪೊಲೀಸ್ ದಂಡನೆಯ ವಿಧಾನ ಬಹಳ ಸರಳ. ಪ್ರತಿ ಕಾರಿನ ಗಾಜಿಗೂ ಒಂದೊಂದು ಹಸುರು ಲೇಬಲ್ ಹಚ್ಚಿ ಹೋಗುತ್ತಾನೆ. ಅದನ್ನು ಮರುದಿನ ಕಾರಿನ ಮಾಲಕ ಹಿಡಿದು ಕೊಂಡು ಹೋಗಿ ದಂಡ ತೆತ್ತು ಬಂದರಾಯಿತು – ತೆರಿಗೆ ಪಾವತಿ ಮಾಡಿ ದಷ್ಟೇ ಸುಲಭ.

ಲೇಫೊಂತಾನೆ ಇರುವುದು ವಿಯಾಪಾರ್ಕೊ ಮಾರ್ಗೆರಿತಾದಲ್ಲಿ. ಇದು ಸಾಧಾರಣ ಮಧ್ಯಮ ವರ್ಗದ ಜನರು ವಾಸ ಮಾಡುವ ಪ್ರದೇಶ. ಇಲ್ಲಿ ಆಧುನಿಕ ಪ್ಲಾಟುಗಳು ಕಡಮೆ, ಇದ್ದವೆಲ್ಲ, ಎರಡು—ಮೂರುಪ್ಪರಿ ಗೆಯ ಕಟ್ಟಡಗಳು. ಒಂದೊಂದು ಕಟ್ಟಡದಲ್ಲಿ ಹತ್ತೆಂಟು ಸಂಸಾರಗಳು. ನನ್ನ ಕೊಠಡಿಯ ಕಿಟಕಿಯಿಂದ ನೋಡಿದರೆ ಪ್ರತಿ ಮನೆಯ ಮಾಡಿನ ಮೇಲೂ ಮಳೆ ಇಲ್ಲದ ಹೊತ್ತು ಆ ಮನೆಯ ಒಡತಿ ತೊಳೆದ ಬಟ್ಟೆ ತೂಗುಹಾಕುವ ದೃಶ್ಯ. ಚಳಿಗಾಲವಾದ್ದರಿಂದ ಮನೆಯ ಕಿಟಕಿ ಬಾಗಿಲು ಯಾವಾಗಲೂ ಮುಚ್ಚಿಕೊಂಡೇ ಇರುವುದು ಆವಶ್ಯಕ. ಬೀದಿಯ ಬದಿ ಯಲ್ಲಿ ಲತ್ತೇರಿಯಾ (ಹಾಲಿನ ಡೈರಿ) ಸಾಲುಮೇರಿಯಾ (ಕಟ್ಲೆರಿ, ದಿನಸಿ) ಪಿಜೇರಿಯಾ (ಪಿಜ್ಜಾ ಮಾತ್ರ ಸಿಗುವ ರೆಸ್ಟೊರೆಂಟ್) ಮಚೆಲ್ಲೇರಿಯಾ

( ಮೀನು ಮಾರುವ ಅಂಗಡಿ ) ತ್ರತ್ತೋರಿಯ, ರಿಸ್ತೊರಾಂತೆ ಮುಂತಾದ ದಿನಬಳಕೆಯ ಅಂಗಡಿಗಳು. ಹಾದಿಯ ಇಟ್ಟಿಗೆಯಲ್ಲಿ ಕಾಲು ಜಾರದಂತೆ ಜಾಗ್ರತೆಯಾಗಿರಬೇಕು; ಕಾರು-ಬಸ್ಸುಗಳ ಅತಿಶಯ ಓಡಾಟದ ದೆಸೆಯಿಂದ ಎಲ್ಲರೂ ಕಾಲುಹಾದಿಯನ್ನೇ ಬಳಸುತ್ತಾರೆ. ಆದರೆ ಕಾಲುಹಾದಿಯಲ್ಲಿ ನಾಯಿಗಳ ಹೇಸಿಕೆ ಹೆಜ್ಜೆ ಹೆಜ್ಜೆಗೂ ನಿಮ್ಮನ್ನು ಎಚ್ಚರದಲ್ಲಿರುವಂತೆ ಮಾಡುತ್ತದೆ. ಅದೇಕೋ ಎಲ್ಲ ಮಹಿಳೆಯರು ತಮ್ಮ ಸಾಕುನಾಯಿಗಳಿಗೆ ಜನಸಂಚಾರವಿರುವ ಕಾಲುಹಾದಿಯೇ ತಕ್ಕ ಶೌಚಸ್ಥಾನವೆಂದು ಬಗೆದಹಾಗಿತ್ತು. ಹತ್ತು ಹೆಜ್ಜೆಗೊಮ್ಮೆ ಸರಪಳಿಯನ್ನು ಹಿಡಿದುಕೊಂಡು ನಾಯಿಯನ್ನು ಬಯಲಿಗೆ ಕೊಂಡೊಯ್ವ ರಮಣೀಯ ದೃಶ್ಯವನ್ನು ಕಂಡು ನನಗೆ ಎಲ್ಲಿಲ್ಲದ ರೇಗು. ಮಳೆ ಬಂದರಂತೂ ಶ್ವಾನ ಪ್ರಸಾದ ಕಾಲುಹಾದಿಗೆಲ್ಲ ಹರಡಿ ನಾವು ಕಾಲನ್ನು ಎಲ್ಲಿಡಬೇಕೆಂಬುದೇ ಸಮಸ್ಯೆಯಾಗಿಬಿಡುತ್ತಿತ್ತು.

## ☐ ☐ ಕಳ್ಳಸರಕಿನ ಸ್ವರ್ಗ

ಜಗತ್ತಿನ ಎಲ್ಲ ದೇಶಗಳಲ್ಲಿಯೂ – ಸರ್ಕಾರ ಅತಿ ಸಮರ್ಥವಾಗಿ ಕಣ್ಣಿಟ್ಟರೂ – ಕಳ್ಳಮಾಲಿನ ಮಾರುಕಟ್ಟೆಗಳು ಇದ್ದೇ ಇರುತ್ತವೆ. ಹೆಚ್ಚಾಗಿ ಹಡಗು ತಂಗುವ ರೇವು ಪಟ್ಟಣಗಳಲ್ಲಿ ಇಂಥ ಮಾರುಕಟ್ಟೆಗಳು ಏಳುತ್ತವೆ. ಎಂಥ ಪೋಲೀಸ ಪಹರೆ, ಕಸ್ಟಮ್ಸ್ ವಿಚಕ್ಷಣೆ ಇದ್ದರೂ ಇವನ್ನು ನಿರ್ಬಂಧಗೊಳಿಸಲು ಆಗುವುದಿಲ್ಲ. ಇಂದು ಇಲ್ಲಿ; ನಾಳೆ ಅಲ್ಲಿ. ನಾಲ್ಕು ದಿನ ಮಾಯವಾಗಬಹುದು ಮತ್ತೆ ಅದೇ ಸ್ಥಳದಲ್ಲಿ– ಉದ್ಭವವಾಗುವ ಇಂಥ ಮಾರುಕಟ್ಟೆಗಳ ಸ್ವಾರಸ್ಯವನ್ನು ಪೂರ್ತ ಆರು ತಿಂಗಳೂ ಹೀರಿಕೊಂಡು ನಾಪೋಲಿಯಲ್ಲಿ ದಿನ ಕಳೆದೆ. ಒಂದೆರಡು ವಾರ ನನಗೆ ಕಳ್ಳಮಾಲಿನ ಈ ಸ್ವರ್ಗದ ವಿಳಾಸ ಯಾವುದೆಂದು ತಿಳಿದಿರಲಿಲ್ಲ. ರೈಲು ನಿಲ್ದಾಣಕ್ಕೆ ಹೋಗುವ ದಾರಿಯಲ್ಲಿ ಒಂದೆರಡು ಸಲ ಅಡ್ಡಾಡುತ್ತಿದ್ದಾಗ ಕೈಗಡಿಯಾರಗಳನ್ನು ಚೀಲದಲ್ಲಿ ತುಂಬಿಸಿಕೊಂಡು ಗಂಟುಬೀಳುತ್ತಿದ್ದ ಒಬ್ಬಿಬ್ಬ ಪೇರಿಗಳನ್ನು ನಾನು ಮೊದಮೊದಲು ನಿವಾರಿಸಿದೆ. ಆಮೇಲೆ

ಯಾವ ವಾಚು, ನೋಡೋಣ ಎಂದರೆ ಪ್ರಚಾರದಲ್ಲಿರುವ ಹೆಸರೇ– ರೋಲೆಂಡ್, ಒಮೀಗ, ವೆಸ್ಟ್‌ಎಂಡ್, ಫಾವೆರ್ಲೊಬಾ– ಅಲ್ಲಿರಲಿಲ್ಲ. ಅಂತೂ ಸ್ವಿಸ್ ವಾಚುಗಳೇನೊ ನಿಜ, ಆದರೆ ಈ ಪೇರಿಗಳನ್ನ್ನೆ ನಂಬು ವುದು ಹೇಗೆಂದು ವಿಚಾರಿಸುವುದನ್ನೇ ಬಿಟ್ಟೆ. ಒಂದು ದಿನ ಧೈರ್ಯಮಾಡಿ 'ಕ್ವಾಂತೊ ಕೊಸ್ತಾ?' (ಬೆಲೆ ಏನು?) ಎಂದರೆ 'ಆಕ್ವಾಂತೊ ಪರ ಲೂಯಿ' (ನಿಮ್ಮ ಹತ್ತಿರ ಎಷ್ಟಿದೆ?) ಎಂದು ಆತ ಮರುಬಾಣ ಬಿಟ್ಟ. ಓಹೋ ಪರ್ದೇಶಿಯಾದ ನನ್ನ ಹತ್ತಿರ ಇರುವ ಎಲ್ಲಾ ಡಾಲರು– ಪೌಂಡುಗಳ ಮೇಲೆ ಇವನ ಕಣ್ಣು ಬಿದ್ದಿದೆ, ಇದು ಅಪಾಯವೆಂದು ಅವನಿಂದ ದೂರ ದಾಪುಗಾಲಿಕ್ಕಿ ನಿಲ್ದಾಣದ ಪುಸ್ತಕದಂಗಡಿಯ ಆಶ್ರಯ ಕೋರಿದೆ.

ನಾಪ್ಲೋಲಿ ವಾಸದ ಮೂರನೆ ವಾರ ಹುದಾ ಒಂದು ಸುವಾರ್ತೆ ಯನ್ನು ತಂದ! ಕೇಂದ್ರ ರೈಲ್ವೆ ನಿಲ್ದಾಣದ ಪಕ್ಕದ ಓಣಿಗಳಲ್ಲಿ ವಿದೇಶೀಯ ಮಾಲುಗಳ ಸಂತೆಯೇ ನೆರೆದಿದೆ. ಜಪಾನೀ ಕೆಮರಾ, ಜರ್ಮನ್ ಟ್ರಾನ್ಸಿ ಸ್ಟರ್ ಅಮೆರಿಕನ್-ಡಚ್ ಶೇವರ್ ಇತ್ಯಾದಿ ಆಕರ್ಷಕ ಸಾಮಗ್ರಿಗಳು ಪ್ರತಿ ಅಂಗಡಿಯಲ್ಲೂ ಡಜನುಗಟ್ಟಲೆ ಸೇರಿಕೊಂಡಿವೆ. ಸರಿ, ಮುಂದಿನ ಭಾನುವಾರ ಓಣಿಗಳನ್ನು ಪ್ರಥಮ ಬಾರಿ ಪ್ರವೇಶಿಸಿದೆ. ಅಲ್ಲಿನ ಜೈಜಗತ್ ವಸ್ತುಭಂಡಾರವನ್ನು ನೋಡಿ ಪುಲಕಿತನಾದೆ. ಸುದಾಮರಾಜ್ಯ ಭಾರತದಲ್ಲಿ ಒಂದೋ ಎರಡೋ ನೋಡಲು ಸಿಗುತ್ತಿದ್ದ ಸಂದರ್ಭವೆಲ್ಲಿ? ಓಣಿ ಓಣಿಗಳೇ ಅಗಣಿತ ಸರಕುಗಳನ್ನು ತುಂಬಿಸಿ ಕೊಂಡ ಕುಬೇರ ರಾಜ್ಯವೆಲ್ಲಿ? ಆ ದಿನ ಬರೇ ನೋಡುವುದಕ್ಕೆಂದೇ ಮೀಸಲಿಟ್ಟೆ. ಜಪಾನಿನ ನೇಷನಲ್, ಸೋನಿ, ಸೆನ್ಯೊ, ಸ್ಟಾಂಡರ್ಡ್ ಟ್ರಾನ್ಸಿಸ್ಟರುಗಳು; ಕನನ್, ನಿಕ್ಕೊ, ಮೈನೊಲ್ಟಾ, ಫ್ಯುಜಿ, ಪೆಂಟೆಕ್ಸ್ ಅಂಥ ಜಪಾನಿ ಕೆಮರಾಗಳು, ಹಾಲೆಂಡಿನ ಫಿಲಿಪ್ಸ್ ತಯಾರಿಕೆಯ ವಿವಿಧ ವಿದ್ಯುದುಪಕರಣಗಳು; ಜರ್ಮನ್ ಚಶ್ಮಗಳು, ಅಮೆರಿಕನ್ ಸಿಗರೇಟುಗಳು– ಇಂಥ ಐರೋಪ್ಯ ಮತ್ತು ಜಪಾನೀ ಸುಖ ಸಾಮಗ್ರಿಗಳಿಗೆ ಗಡಿಮಿತಿ ಇರಲಿಲ್ಲ. ಗೂಡಿನ ಅಂಗಡಿ, ಅದರ ಮುಂದೆ ಒಂದೋ ಎರಡೋ ಮೇಜಿನಲ್ಲಿ ಓರಣವಾಗಿ ಈ ಸಾಮಗ್ರಿಗಳ ಪ್ರದರ್ಶನ. ಓಣಿಗೆ ಅಡ್ಡ ಓಣಿ ಬೇರೆ, ಅಡ್ಡ ಓಣಿಗೆ ಬೇರೆ ಗಿಡ್ಡ ಓಣಿ. ಅದೊಂದು ಚಕ್ರವ್ಯೂಹ, ಎಲ್ಲೋ ಹೊಕ್ಕು ಎಲ್ಲೋ ಹೊರಗೆ ಬರಬಹುದು. ಮೊದ ಮೊದಲು ಒಂದು ಬಗೆಯ ಭಯ– ಪೊಲೀಸರು ನೋಡಿದವರನ್ನು

ಹಿಡಿದುಬಿಟ್ಟರೆ? ಈ ಅಂಗಡಿಕಾರರೋ ಸದಾ ಅವಸರದಲ್ಲಿಯೇ ಇರುವಂತೆ ತೋರುತ್ತದೆ. ನೀವು ಕ್ರಯ ಕೇಳುವುದೇ ತಡ, ನಿಮ್ಮ ಹತ್ತಿರ ಎಷ್ಟಿದೆ, ನಿಮಗೆಷ್ಟು ಕೊಡುವುದಕ್ಕಾಗುತ್ತದೆ, ಅಷ್ಟೇ ಸಾಕು ಎಂದು ನಿಮ್ಮ ಕೈಗೆ ಮಾಲನ್ನು ತಳ್ಳಿಬಿಡುತ್ತಾರೆ. ಇದೇನು ನಿಜವಾದ ಟ್ರಾನ್ಸಿಸ್ಟರೊ ಅಥವಾ ಒಳಗೆ ಮೋಸ ಇರಬಹುದೆ? – ಆ ಭೀತಿಯೂ ನಮ್ಮನ್ನು ಬಿಡಲಿಲ್ಲ. ಸುಬ್ಬಯ್ಯನಿಗಾಗಿ 10,000 ಲೀರೆ (=80 ರೂ.) ಕೊಟ್ಟ ಒಂದು ಕಿಸೆ ಟ್ರಾನ್ಸಿಸ್ಟರ್ ತಂದು ಅದನ್ನು ಒಂದೆರಡು ವಾರ ನುಡಿಸಿ ಮಾರುಕಟ್ಟೆಯ ಖಾತ್ರಿ ಮಾಡಿಕೊಂಡ ಮೇಲೆ ನನ್ನ ಸ್ವಂತ ವ್ಯಾಪಾರ ಶುರು ಮಾಡಿದೆ. ಸಂಗೀತ ಸವಿಯುವುದಕ್ಕೆ ಸುಬ್ಬಯ್ಯನ ಟ್ರಾನ್ಸಿಸ್ಟರ್ ಸಾಕು, ಆದ್ದರಿಂದ ಕೆಮರಾ ಕೊಳ್ಳಬೇಕು. ಎರಡು ತಾಸು ಅಲೆದು ಅಲೆದು, ಚರ್ಚೆ ಮಾಡಿಮಾಡಿ –120ಮಿ.ಮಿ. ಆಗಬಹುದೋ, 35 ಮಿಲ್ಲಿಮೀಟರ್ ಆಗಬಹುದೊ ಎಂದು ಮನಸ್ಸಿನಲ್ಲಿ ತೂಗುಯ್ಯಾಲೆ ಆಡಿ 36,000 ಲೀರೆ (=288 ರೂಪಾಯಿ)ಗೆ ಯಾಶಿಕಾಮ್ಯಾಟ್ –120 ಕೆಮರಾ ಕೊಂಡುಕೊಂಡೆ. ವ್ಯಾಪಾರ ಮುಗಿಯುವಾಗ ಸಂಜೆಯಾಗಿತ್ತು. ಮೂರು ಗಂಟೆಯ ಮೇಲೆ ಚಳಿಗಾಲದಲ್ಲಿ ಮಂಜುಬೀಳುವುದರಿಂದ ಕೆಮರಾದ ಪ್ರತ್ಯಕ್ಷ ಪ್ರಯೋಗವನ್ನು ಮರುದಿನಕ್ಕೆ ಮುಂದೂಡಿದೆ. ರಾತ್ರಿ ನಿದ್ದೆಯಲ್ಲಿ ಕನಸು: ಯಾಶಿಕಾಮ್ಯಾಟ್ ಕೆಮರಾ ನಿಜವಾಗಿ ಕೆಮರಾವೇ ಅಲ್ಲ– ಅದರಲ್ಲಿ ಹಾಕಿದ ರೋಲ್ ಫಿಲ್ಮು ಎಲ್ಲಾ ಕಪ್ಪಾಗಿಬಿಟ್ಟಿದೆ. ಲೆನ್ಸ್‌ನಲ್ಲೇ ಮೋಸ ಮಾಡಿದ್ದಾರೆ. ಮೋಸ ಹೋದೆನಲ್ಲಾ – ಹೀಗೆ ಏನೇನೋ. ಮರುದಿನ ಪ್ರತ್ಯಕ್ಷ ಪ್ರಯೋಗ: ನನ್ನ ಜತೆಗಾರರನ್ನು, ಲೇಪ್ಪೋಂತಾನೆ, ಕಾರು, ಬಸ್ಸು, ಸಿಕ್ಕಿದ್ದನ್ನು ತೆಗೆದು 12 ಚಿತ್ರಗಳನ್ನು ಮುಗಿಸಿ ಫೋಟೊಗ್ರಾಫರನಿಗೆ ಕೊಟ್ಟು, ಮತ್ತೊಂದು 24 ತಾಸು ನಿರೀಕ್ಷೆಯಲ್ಲಿ ಕಳೆಯಬೇಕಾಯಿತು. ಆ ಮಂಜು ಬೆಳಕಿನ ಚಿತ್ರಗಳು ಚೆನ್ನಾಗಿಯೇ ಬಂದಿದ್ದುವು. ಅಂತೂ ಕಳ್ಳತನದಿಂದ ತಂದಿರಬಹುದಾದ ಮಾಲಾದರೂ ಪರವಾಗಿಲ್ಲ, ನಿಜವಾದ ಮಾಲುಗಳೇ ಇಲ್ಲಿ ಮಾರಾಟಕ್ಕಿವೆ ಎಂಬುದು ಗಟ್ಟಿಯಾಯಿತು. ಇನ್ನೊಮ್ಮೆ 15,000 ಲೀರೆಗೆ (=120 ರೂ.) ಒಂದು ಸ್ಟಾಂಡಾರ್ಡ್ ಟ್ರಾನ್ಸಿಸ್ಟರ್ ಕೊಂಡೆ. ಲೇಪ್ಪೋಂತಾನೆಯ ಇತರ ಕುಳವಾರುಗಳಿಗೆ ಈ ಪ್ರದೇಶದ ಪರಿಚಯ ಮಾಡಿಸಿದೆ. ವಾರದಲ್ಲಿ ಒಂದೆರಡು ದಿನವಾದರೂ

ಅಲ್ಲಿ ಹೊಕ್ಕು ನೇತ್ರಾನಂದವನ್ನು ಪಡೆಯದೆ ನನಗೆ ನಿದ್ದೆ ಬೀಳದು. ಇಲ್ಲಿನ ವ್ಯಾಪಾರಿಗಳು ಭಾರೀ ಸಾಹಸಿಗಳು ಎಂದ ಆಪಾ. 'ಹೇಗೆ?' ಎಂದು ಕೇಳಿದೆ. 'ಅವರಲ್ಲಿ ಗಂಡಸರಿಗಿಂತಲೂ ಹೆಂಗಸರು ಹೆಚ್ಚು ಘಾಟಿ', ಎಂದ. 'ನನಗೆ ಹಾಗೆ ತೋರಲಿಲ್ಲವಲ್ಲಾ?' ಎಂದೆ. 'ನೀನು ಪೊಲೀಸ್ ಆಗಿದ್ದರೆ ನಿನಗೆ ಅನುಮಾನವಾಗುತ್ತಿತ್ತು' ಎಂದ ಆತ. 'ಕಥೆ ಏನು?' ಎಂದೆ. ಒಂದು ಸಾರಿ ಪೊಲೀಸರು ಈ ಮಾರ್ಕೆಟನ್ನು ನಿರ್ನಾಮ ಮಾಡಲು ಪಂಥ ತೊಟ್ಟ ರಂತೆ. ಪಟಾಲಮು ಕಟ್ಟಿಕೊಂಡು ಓಣಿ ಓಣಿ ನುಗ್ಗಿದರಂತೆ. ಅಂಗಡಿಕಾರ ರೆಲ್ಲ ಅಂಗಡಿ ಗೂಡಿನೊಳಗೆ ಸೇರಿ ಭೀತಿಯ ಪ್ರದರ್ಶನ ಮಾಡಿದರೆ ಮೇಲಿನ ಕಿಟಕಿಗಳಿಂದ ಬಾಣಲೆಯಲ್ಲಿ ಬಿಸಿ ಮಾಡಿದ ಆಲಿವ್ ಎಣ್ಣೆ ಮತ್ತು ಡಾಮರನ್ನು ಡಬ್ಬಿಯಲ್ಲಿ ಕೆಳಗಡೆ ನಿಂತಿದ್ದ ಸಿಪಾಯಿಗಳ ತಲೆಗೆ ನಿರ್ದಾ ಕ್ಷಿಣ್ಯವಾಗಿ ಹೊಯ್ದು ಅವರು ಕುಯ್ಯೋ ಮುರ್ರೋ ಅನ್ನುವುದನ್ನು ಕೇಳಿ ನಕ್ಕುನಲಿದರಂತೆ ಅಂಗಡಿಕಾರರ ಪ್ರಿಯತಮೆಯರಾದ ವೀರವನಿತೆಯರು!

ಕಷ್ಟದ ವ್ಯಾಪಾರ ಇದು. ಸುಂಕದ ಪೊಲೀಸರ ಕಣ್ಣು ತಪ್ಪಿಸಿ ತರ ಬೇಕು, ಊರಿನ ಪೊಲೀಸರ ಕಣ್ಣು ತಪ್ಪಿಸಿ ಮಾರಬೇಕು. ಒಂದು ದಿನ ಮೊಯಿದೀನ್ ಜತೆ ಸಿಗರೇಟು ಕೊಳ್ಳಲು ನಿಂತಿದ್ದೆವು. 1000ದ ನೋಟು ಕೊಟ್ಟು, ಒಂದು ಪ್ಯಾಕೆಟ್ ಹಸ್ತಾಂತರವಾಗಿತ್ತು. ಅಷ್ಟು ಹೊತ್ತಿಗೆ ಎಲ್ಲಿಂ ದಲೋ ಸೀಟಿ–ಸಿಗರೇಟು ಮಾರುವವರೆಲ್ಲ ಮಂಗಮಾಯ. ಹತ್ತು ಮಿನಿಟು ಯಾರೂ ಆ ಪ್ರದೇಶದಲ್ಲಿಲ್ಲ. ಪೊಲೀಸರ ಜಡ್ತಿಯ ಸೂಚನೆ ಯನ್ನು ಒಬ್ಬ ಪೊಲೀಸರವನೇ ಕೊಡುತ್ತಾನೆ. ಹತ್ತು ಮಿನಿಟಿನ ಮೇಲೆ ಸಿಳ್ಳು, ಮತ್ತೆ ಓಣಿ ಹೊಕ್ಕವರೆಲ್ಲ ಹೊರಗೆ ಬಂದು ಅದೇ ವ್ಯಾಪಾರ ಆರಂಭವಾಯಿತು. (ಇತಾಲಿಯದಲ್ಲಿ ಸಿಗರೇಟು ತಯಾರಿ ರಾಷ್ಟ್ರೀಕರಣ ವಾಗಿರುವುದರಿಂದ ಪರದೇಶಿ ಸಿಗರೇಟುಗಳಿಗೆ ಭಾರೀ ಗಿರಾಕಿ) ಮೊಯಿ ದೀನ್‌ಗೆ ಚಿಲ್ಲರೆಯೂ ಸಿಕ್ಕಿತು, ಇನ್ನೊಂದು ಪ್ಯಾಕೆಟ್ ಸಿಗರೇಟೂ ಸಿಕ್ಕಿತು– ಮೋಸದ ಈ ಮಾರುಕಟ್ಟೆಯಲ್ಲಿ ಗಿರಾಕಿಗೆ ಮೋಸ ಮಾಡುವವರಿಲ್ಲ. ಗಿರಾಕಿ ಇಲ್ಲಿಯ ದೇವರು. ಅವನನ್ನು ಸುಲಿಯುವುದು ಮಾತಿನಿಂದ. ಹಾವಭಾವಗಳಿಂದ ಹೊರತು ದಗಲ್‌ಬಾಜಿಯಿಂದಲ್ಲ.

ಮಧ್ಯಮ ವರ್ಗದ ಜನರ ದಿನಬಳಕೆಯ ಸಾಮಗ್ರಿಗಳಿಗಾಗಿ ಯೂರೋಪ್, ಅಮೇರಿಕಗಳಲ್ಲಿ ಎಲ್ಲಾ ಕಡೆ ಇರುವಂತೆ ಇತಾಲಿಯ

ದಲ್ಲು ಡಿಪಾರ್ಟ್‌ಮೆಂಟ್ ಸ್ಟೋರುಗಳು (=ನಮ್ಮ ಜನತಾ ಬಜಾರ್) ಇವೆ. ಎಲ್ಲ ಕಡೆ ಪಟ್ಟಿಹಚ್ಚಿದ ಧಾರಣೆ, ಗೃಹಕೃತ್ಯಕ್ಕೆ ಬೇಕಾದ ಎಲ್ಲಾ ಬಗೆಯ ಸರಕುಗಳು ಇಲ್ಲಿ ದೊರೆಯುತ್ತವೆ. ನಾಪೊಲಿಯ ಪರಿಸರದಲ್ಲಿ ಇಂಥ ಹತ್ತಿಪ್ಪತ್ತು ಸ್ಟೋರುಗಳಿರಬಹುದು. ಪ್ರತಿದಿನ ಸಾವಿರಾರು ಸ್ತ್ರೀ-ಪುರುಷರು ಬಾಗಿಲು ತೆರೆದ ಕ್ಷಣದಿಂದ ಮುಚ್ಚುವ ವರೆಗೆ ಇದರೊಳಗೆ ವ್ಯಾಪಾರ ಮಾಡುತ್ತಾರೆ. ಸಂಜೆಯ ಹೊತ್ತು ಅಥವಾ ರಜೆಗೆ ಮುನ್ನಾದಿನ ಜನಸಂದಣಿ ವಿಪರೀತ. ಕಳವು, ಹಾರಿಸುವುದು ಭಾರೀ ಕಡಮೆ ಅಂತೆ. ಇದಕ್ಕೆ ಕಾರಣ: ಒಳಗೆ ಸಮವಸ್ತ್ರ ವಿರಹಿತ ಗುಪ್ತಚಾರರು ನಮ್ಮಂತೆಯೆ ಅಡ್ಡಾಡುತ್ತಾರೆ: ಅಲ್ಲದೆ ಅಷ್ಟಗ್ಗದ ಸಾಮಾನುಗಳನ್ನು ಕದ್ದು ಯಾರಿಗೂ (ಮನೋವಿಕಾರ ಉಳ್ಳವರಿಗೆ ಹೊರತು) ಏನೂ ಆಗಬೇಕಾದದ್ದಿಲ್ಲ. ಕದಿಯುವುದರಿಂದಾಗುವ ನಷ್ಟ ಕೇವಲ 0.2% ಎಂದು ನಮಗೆ ಮಿಲಾನ್ ನಗರದಲ್ಲಿ ರಿನಶೆಂತೆ ಗುಂಪಿನ ಕೇಂದ್ರ ಕಚೇರಿಯಲ್ಲಿ ತಿಳಿಸಿದರು. ಪ್ರತಿ ಗುಂಪಿಗೂ ಯುರೋಪಿನ ಇತರ ನಗರಗಳಲ್ಲಿರುವ ಸ್ಟೋರುಗಳಿಗೂ ಸಮೀಪ ಬಾಂಧವ್ಯ, ಸಂಪರ್ಕ ಇರುತ್ತದೆ. ಗಿರಾಕಿಗಳ ಮನಸ್ಸಿನ ಒಲವು ನಿಲವುಗಳನ್ನು ಒಟ್ಟಾಗಿ ಅಧ್ಯಯನ ಮಾಡುತ್ತಾರೆ, ವಿಮರ್ಶಿಸುತ್ತಾರೆ, ಸರಕಿನ ಸಗಟು ಸರಪರಾಜು ಮಾಡಿಕೊಳ್ಳುತ್ತಾರೆ. ನಮ್ಮಲ್ಲಿರುವಂತೆ 'ಬೇಕಾದರೆ ಒಯ್ಯಿರಿ, ಬೇಡವಾದರೆ ಬಿಡಿ' ಎನ್ನುವ ಉಡಾಫೆಯನ್ನು ಅವರು ತೋರಿಸಲು ಸಾಧ್ಯವಿಲ್ಲ. ದಿನಬಳಕೆಯ ಸಾಮಗ್ರಿ, ಬಟ್ಟೆಬರೆ ಇತ್ಯಾದಿ ವಿಷಯದಲ್ಲಿ ಗಿರಾಕಿಯೇ ಸಾರ್ವಭೌಮ (Consumer is sovereign) ಅವನನ್ನು ತೃಪ್ತಿಪಡಿಸದೆ ನಮಗೆ ಲಾಭವಿಲ್ಲವೆಂಬುದು ತೀವ್ರ ಪೈಪೋಟಿಯ ಜಗತ್ತಿನಲ್ಲಿ ವ್ಯವಹರಿಸಬೇಕಾದ ವರ್ತಕರಿಗೂ, ವರ್ತಕ ಸಂಘಕ್ಕೂ ಆದರ್ಶವೇ ಆಗಿದೆ.

## □ □ ನಾಪೊಲಿಯ ಪರಿಸರದಲ್ಲಿ

ನಾಪೊಲಿಯ ಪರಿಸರದಲ್ಲಿ 'ಕಸ್ಸಾ'ವತಿಯಿಂದ ನಡೆದ ಅಭಿವೃದ್ಧಿ ಕಾರ್ಯಕ್ರಮಗಳನ್ನು ಸಮೀಪದಿಂದ ನೋಡುವ ಸಂದರ್ಭವನ್ನು ಇಸ್ವೇ ಒದಗಿಸಿತು. ವರ್ಗದೊಳಗಡೆ ನಡೆದ ಅಭಿವೃದ್ಧಿ ಸೂತ್ರಗಳ ಪಾಠಪ್ರವಚ

ನಕ್ಕೆ ಪೋಷಕವಾಗಿ ಪ್ರತ್ಯಕ್ಷ ಕ್ಷೇತ್ರಸಂದರ್ಶನವನ್ನು ಅಧ್ಯಯನ ಕ್ರಮದಲ್ಲಿ ಸೇರಿಸಿಕೊಳ್ಳಲಾಗಿತ್ತು. ಅದರಂತೆ ಪ್ರತಿ ವಾರದ ಅಂತ್ಯದಲ್ಲಿ ನಾಪೋಲಿಗೆ ಎಂಟು ಹತ್ತು ಮೈಲಿ ವಲಯದೊಳಗೆ ಇರುವ ಅಭಿವೃದ್ಧಿ ಕ್ಷೇತ್ರಗಳಿಗೆ ಸಂದರ್ಶನ ಇಟ್ಟುಕೊಂಡಿದ್ದರು. ಎರಡನೆಯದಾಗಿ, ಹತ್ತು ದಿನಗಳ ತೆಂಕ ಇತಾಲಿಯದ ವಿಸ್ತೃತ ಪ್ರವಾಸದ ಯೋಜನೆಯನ್ನು ಮಾಡಿದ್ದರು. ದಶಂಬರ, ಜನವರಿ ನಾಪೋಲಿಯ ಆಸುಪಾಸಿನ ಸ್ಥಾವರಗಳಿಗೆ ಸಂದರ್ಶನ; ಮಾರ್ಚಿನಲ್ಲಿ ತೆಂಕಣ ಪ್ರವಾಸ—ಹೀಗೆ ನಿರ್ದಿಷ್ಟವಾಗಿತ್ತು.

ನಾಪೋಲಿ ತೆಂಕ ಇತಾಲಿಯದ ಮುಖ್ಯ ಔದ್ಯಮಿಕ ಕೇಂದ್ರವಾಗಿತ್ತು. ಪಡುವಣ ಕರಾವಳಿಯಲ್ಲಿ ಭೂಮಧ್ಯಸಾಗರದ ರೇವು ಪಟ್ಟಣವಾಗಿ ಜಿನೋವದ ಅನಂತರ ಸಾಕಷ್ಟು ಪ್ರಸಿದ್ಧಿಯನ್ನು ಗಳಿಸಿದ ಬಂದರು ನಾಪೋಲಿ. ವರ್ಷಕ್ಕೆ 12 ಮಿಲಿಯ ಟನ್‌ಗಳಷ್ಟು ವ್ಯಾಪಾರ ಇಲ್ಲಿಂದ ನಡೆಯುತ್ತದೆ. ತೆಂಕದಿಂದ ವಲಸೆ ಹೋಗುವ ಮನಸ್ಸು ಮಾಡಿದ ತರುಣರಿಗೂ ನಾಪೋಲಿ ಮೊದಲನೇ ಮಜಲು. ಇದರಿಂದ ಇಲ್ಲಿ ಕೈಗಾರಿಕೆಗಳನ್ನು ಸ್ಥಾಪಿಸಿದರೆ ಕೂಲಿಕಾರರಿಗೆ ಕೊರತೆ ಬರಲಾರದು ಎಂಬ ದೃಷ್ಟಿಯಿಂದಲೂ ಆರ್ಥಿಕ ಪ್ರಾಶಸ್ತ್ಯ ಪಡೆದ ನಾಪೋಲಿ ಮೆಜ್ಜೊಜೊರ್ನೊ ಪ್ರದೇಶದ ಆರ್ಥಿಕ-ಸಾಮಾಜಿಕ ರಾಜಧಾನಿ ಆಯಿತು. ಕೇವಲ 120 ಮೈಲು ದೂರದಲ್ಲಿರುವ ರೋಮ್ ನಗರದ ರಾಜಧಾನಿಯ ವರ್ಚಸ್ಸು ನಾಪೋಲಿಗೆ ಸುಲಭಗಮ್ಯವಾಗಿರುವದರಿಂದ ನಾಪೋಲಿಯ ಆರ್ಥಿಕ ಜೀವನದಲ್ಲಿ ಹಿಂದೆಂದೂ ಕಾಣಿಸದ ತ್ವರೆ, ಉದ್ವೇಗ, ಆಶೋತ್ತರ ಪ್ರಕಟವಾಗುತಿದ್ದವು.

ಅಭಿವೃದ್ಧಿಗೆ ಸಮುಚಿತವಾದ ಇಂಥ ಪ್ರಾಗತಿಕ ಮನೋವೃತ್ತಿಗೆ ಬಾಂಕೋದಿನಾಪೋಲಿಯ ಡಾ। ಜೊಸೆಪ್ಪೆ ಲೊಂಗೊ ಉತ್ತಮ ಪ್ರತಿನಿಧಿ. ಇದೇ ಬ್ಯಾಂಕಿನಲ್ಲಿ ನನ್ನ ಗೆಳೆಯ ಆಪಾ ಕೆಲಸ ಮಾಡುತ್ತಿದ್ದನೆಂದು ಹೇಳಿದ್ದೇನೆ. ಡಾ। ಲೊಂಗೋ ಬಾಂಕೊದಿನಾಪೋಲಿಯ ಪ್ರಧಾನ ಅಧ್ಯಕ್ಷ. ಆಳು ಕುಳ್ಳಗೆ, ಮಾತು ನಯಾಗರ ತಡಸಲದಂತೆ ಘನಗಂಭೀರ,ಟಿಪ್‌ಟಾಪ್ ಪೋಷಾಕು, ಚಿನ್ನದ ಕನ್ನಡಕವನ್ನು ಆಗಿಂದಾಗ ಮೂಗಿನ ದಂಡೆಯ ಮೇಲೆ ಇರಿಸುತ್ತ ಆತ ಭಾಷಣ ಮಾಡುವ ರೀತಿಯಲ್ಲಿ ತೆಂಕದ ಅಭಿವೃದ್ಧಿಯ ಉತ್ಸಾಹ ಚಿಲ್ಲುವರಿಯುತ್ತಿತ್ತು. ಇತಾಲಿಯ ತೆಂಕ ಮತ್ತು ಬಡಗ ಎರಡೂ ಲೊಂಗೋ ಅವರ ಬ್ಯಾಂಕಿನ ಕಾರ್ಯಕ್ಷೇತ್ರ. ಒಟ್ಟು

400ಕ್ಕೂ ಮಿಗಿಲಾಗಿ ಶಾಖೆಗಳು – ಲ್ಯಾಟಿನ್ ಅಮೆರಿಕದ ಬೊನಸಾರಿಯಲ್ಲೂ ಒಂದು ಮುಖ್ಯ ಶಾಖೆ. ಬಾಂಕೊದಿರೋಮಾ, ಬಾಂಕೋ ಕಮ್ಮರ್ಚಾಲೆ ಇತಲ್ಯಾನಾ, ಕ್ರೆದಿತೊ ಇತಲ್ಯಾನೊ ಮತ್ತು ಬಾಂಕೊ ನ್ಯಾತ್ಯನಾಲೆ ದೆಲ್ಲವೊರೊ – ಅಂಥ ದೊಡ್ಡ ಸರ್ಕಾರಿ ಕ್ಷೇತ್ರದ ಬ್ಯಾಂಕುಗಳ ನಡುವೆಯೂ ನಾಪೊಲಿ ಬ್ಯಾಂಕು ಪೈಪೋಟಿಗೆ ನಿಂತಿದೆ ಎಂದು ಹೇಳುವಾಗ ಲೊಂಗೊ ತಮ್ಮ ಕಫ್ ಲಿಂಕ್ಸನ್ನು ಮುಟ್ಟಿ ವರಸೆ ತೋರಿಸಿದರು. ನಮ್ಮ ಜನಕ್ಕೆ ನಾವು ಬೇಕು ಎನ್ನುವಾಗ ಜನಪ್ರಿಯತೆಯ ಕುರುಹಾಗಿ ಒಮ್ಮೆ ಕೆಮ್ಮಿದರು. ಕೇಂದ್ರ ಕಚೇರಿಯ ಸಂದರ್ಶನ ಕಾಲದಲ್ಲಿ ಪ್ರತಿ ಮೂಲೆ ಮೂಲೆಯನ್ನೂ ತೋರಿಸಿ ಕಟ್ಟಕೊನೆಗೆ ಅಲ್ಲಾವುದ್ದೀನನ ವಿಚಿತ್ರ ದೀಪ ತೋರಿಸುವ ಖಜಾನೆಯಂತೆ ತಮ್ಮ ಡಿಪಾಸಿಟ್ ವಾಲ್ಟನ್ನು ತೋರಿಸಿದರು – ತಾವೇ ಸ್ವಿಚ್ ಹಾಕಿ ಘನಘೋರವಾದ ಉನ್ನತ ಉರುಟು ಕದವನ್ನು ಮುಚ್ಚಿ-ತೆರೆದು ಆನಂದಿಸಿದರು. ತೆಂಕದ ಅಭಿವೃದ್ಧಿಯಲ್ಲಿ ತಮ್ಮ 'ಅಖಿಲಸೇವೆ'ಯನ್ನು ಅಂಕಿಸಂಖ್ಯೆಗಳ ಸಹಿತ ವಿವರಿಸಿ, ತರ್ಜುಮೆಕಾರರಿಗೆ ಅವಕಾಶ ಮಾಡಿಕೊಡುವ ಹೊತ್ತು ಲೊಂಗೊ ಅವರು ನಿಂತಿರುವ ಗತ್ತು, ಮುಂದಿನ ವಾಕ್ಯಗಳನ್ನು ಮನಸ್ಸಿನೊಳಗೆ ಮೆಲುಕುಹಾಕುವ ಅವರ ಚೆಹರೆಯ ಲವಲವಿಕೆ, ತಾನು ಆ ಸಮಿತಿಯಲ್ಲಿ ಹೀಗೆ ಮಾಡ್ಡಿದೆ, ಇದರಲ್ಲಿ ಹೀಗೆ ಹೇಳಿದೆ ಎನ್ನುವಾಗ ಸೂಸುವ ಹಮ್ಮು, ಆತ್ಮವಿಶ್ವಾಸ – ಇಷ್ಟರ ಮೇಲಿಂದ ಅವರು ಬೆಳವಣಿಗೆಯ ಹೋರಾಟದ ವೀರಸೇನಾನಿಯಂತೆ ಕಾಣುತ್ತಿದ್ದರು.

ಇನ್ನೊಂದು ದಿನ ಬಾಂಕೊದಿನಾಪೊಲಿಯ ಇಲೆಕ್ಟ್ರಾನಿಕ್ ಕೇಂದ್ರವನ್ನು ಸಂದರ್ಶಿಸಿದಾಗ ಲೊಂಗೊ ಅವರ ಉತ್ಸಾಹ ಸಕಾರಣವಾಗಿತ್ತೆಂದು ನನಗೆ ಅನಿಸದಿರಲಿಲ್ಲ. ಇಂಟರ್ ನ್ಯಾಷನಲ್ ಕಂಪ್ಯೂಟರ್ ಸೆಂಟರ್‌ನವರ ಯಂತ್ರಗಳು ಸಾಲುಸಾಲಾಗಿ ಬ್ಯಾಂಕ್ ಲೆಕ್ಕಾಚಾರವನ್ನು ಮಾಡಲು ನಿಂತಿದ್ದವು. ಅತ್ಯಂತ ಪರಿಷ್ಕೃತವಾದ ಈ ಕಂಪ್ಯೂಟರಗಳ ಸಹಾಯದಿಂದ ಲೆಕ್ಕ ಇಡುವ ಪದ್ಧತಿಯ ನವೀಕರಣವನ್ನು ತೆಂಕದ ಈ ಬ್ಯಾಂಕು ಸಾಧಿಸಿ ವಿಜಯದುಂದುಭಿಯನ್ನು ಮೊಳಗಿಸಿತ್ತು.

ಬಂದರು ಕಟ್ಟೆಯ ವಿಶ್ವಸ್ತ ಮಂಡಲದವರೂ ಒಂದು ದಿನ ನಮ್ಮನ್ನು ಕರೆಸಿ ರಾಜೋಪಚಾರ ಮಾಡಿ ನಾಪೊಲಿ ಬಂದರದ ಇತಿಹಾಸ, ಯುದ್ಧ

ಕಾಲದ ಬಿಕ್ಕಟ್ಟು, ಯುದ್ಧೋತ್ತರ ಪ್ರಗತಿಯ ಕುರಿತು ಸಚಿತ್ರವಾಗಿ, ಕೂಲಂಕಷವಾಗಿ ವಿವರಿಸಿ ಹೇಳಿದರು. ಹತ್ತಿರದಲ್ಲಿ ಚಿಕ್ಕ ಹಡಗು ನಿರ್ಮಾಣದ ಒಂದು ಖಾಸಗಿ ಕಂಪನಿಯನ್ನೂ ನಾವು ಸಂದರ್ಶಿಸಿದೆವು. ಯುದ್ಧ ಕಾಲದಲ್ಲಿ ಹಳೇ ಕಬ್ಬಿಣದ ವ್ಯಾಪಾರಿ ಪೆಲ್ಲೆಗ್ರಿನೋ ಈಗ ನೌಕಾ ನಿರ್ಮಾಪಕನಾಗಿದ್ದ. ಅವನೂ ತೆಂಕ ಇತಾಲಿಯದ ಪ್ರಾತಿನಿಧಿಕ ಪ್ರಜೆಯೆ. ಖಾಸಗೀ ಸಾಹಸದ ಸಂಕೇತವಾಗಿದ್ದಂಥ ಹಡಗಿನ ರೇಖಾಚಿತ್ರದಿಂದ ತೊಡಗಿ ನೀರಿಗೆ ಇಳಿಸುವ ವರೆಗಿನ ಪ್ರಕ್ರಿಯೆಗಳನ್ನೆಲ್ಲಾ ಸೋದಾಹರಣವಾಗಿ ವರ್ಣಿಸಿಬಿಟ್ಟ. 8000 ಟನ್ ತೂಕದವರೆಗಿನ ಹಡಗನ್ನು ಆತ ನಿರ್ಮಾಣ ಮಾಡುತ್ತಾನೆ.

ಬಂದರುಕಟ್ಟೆಯ ಹೊರವಲಯದಲ್ಲಿ ಬೊಂಬೆಗಳ ಮಾರಾಟಕ್ಕೆ ಸುಗ್ಗಿ. ದೊಡ್ಡ ದೊಡ್ಡ ಬೊಂಬೆಗಳು—ಒಂದಡಿ, ಎರಡಡಿಯ ಗಾತ್ರವವು. ನಾಪೊಲಿಯ ಬಡವರ ಗುಡಿಕೈಗಾರಿಕೆಯ ಕೌಶಲ ಸರ್ವಸ್ವವನ್ನು ಈ ಗೊಂಬೆಗಳ ರಚನೆ ಮತ್ತು ಪೋಷಾಕಿನ ಓರಣದಲ್ಲಿ ನೋಡಬಹುದಾಗಿತ್ತು. ಚಿನ್ನ–ರತ್ನಗಳ ಆಭರಣ, ಹವಳದ ಆಭರಣ ಮಾಡುವ ಕಲೆಯೂ ಇಲ್ಲಿನ ಪರಂಪರಾಗತ ಗುಡಿಕೈಗಾರಿಕೆಗೆ ಸಂಬಂಧಿಸಿದ್ದಾಗಿದೆ. ವಿಯಾರೋಮದಲ್ಲಿ ಅದೆಷ್ಟೋ ಅಂಗಡಿಗಳಲ್ಲಿ ಕೊರಳಹಾರ, ಬಳೆ, ಉಂಗುರ ಮುಂತಾದುವನ್ನು ಮಾರಾಟಕ್ಕಿಡುತ್ತಿದ್ದರು. ಹವಳದ ಕೈಗಾರಿಕೆಯಂತೂ ನಾಪೊಲಿಯ ಪ್ರಖ್ಯಾತ ವೈಶಿಷ್ಟ್ಯವೆನಿಸಿದೆ. ಹವಳ ಕೊರೆದು, ತೋಡಿ, ತಿಕ್ಕಿ ಜೋಡಿಸುವ ಕುಶಲಕರ್ಮಿವನ್ನು ಬಯಸಿದವರಿಗೆ ಕರೆದು ಕೊಂಡು ಹೋಗಿ ತೋರಿಸುತ್ತಾರೆ. ಹವಳ ಬರುವುದು ಒಂದೋ ಟ್ಯುನೀಶಿಯದಿಂದ ಅಥವಾ ಜಪಾನಿನಿಂದ—ಅದು ಅಗ್ಗ ಬೆಲೆಯ ಕಚ್ಚಾ ಮಾಲು—ಅದನ್ನೇ ತೀಡಿ ತಿದ್ದಿ ಅಲಂಕರಣ ಸಾಮಗ್ರಿಯಾಗಿ ಕಂಡರಿಸಿದರೆ ವಿಶೇಷ ಬೆಲೆ ಬಂದುಬಿಡುತ್ತದೆ. ಡಾಲರ್ ಸಂಪಾದನೆಯಲ್ಲಿ ನಾಪೊಲಿಯ ಹವಳದ ಉದ್ಯಮಕ್ಕೆ ಉನ್ನತ ಸ್ಥಾನ ಇರಬೇಕೆಂದು ನಾನು ಊಹಿಸಿದೆ.

ಕಬ್ಬಿಣದ ಅದಿರೆಲ್ಲ ಬ್ರೆಜಿಲ್ ಮತ್ತು ಗೋವಾದಿಂದ ಆಮದು ಮಾಡಿಯೂ ಯಶಸ್ವಿಯಾಗಿ ಉಕ್ಕಿನ ಉದ್ಯಮವನ್ನು ಬೆಳಸಬಹುದೆಂಬುದಕ್ಕೆ ಇತಾಲಿಯ ಸಾಕ್ಷಿ. ಈಗ ಉಕ್ಕಿನ ಉದ್ಯಮಕ್ಕೆ ಕಲ್ಲಿದ್ದಲು ಅಗತ್ಯವಿಲ್ಲ, ವಿದ್ಯುತ್ತಿದ್ದರೆ ಸಾಕು ಎನ್ನುವಾಗ ಉಕ್ಕಿನ ಕಾರ್ಖಾನೆಗಳು ಕರಾವಳಿಯಲ್ಲಿ

ಯೇ ಸ್ಥಾಪಿತವಾಗುವುದು ಸಹಜ. ನಾಪೊಲಿಯಲ್ಲಿ ಇಟಾಲ್ಸಿಡರ್ ನವರ 10 ಲಕ್ಷ ಟನ್ ಸಾಮರ್ಥ್ಯದ ಕಾರ್ಖಾನೆ (ನಮ್ಮ ಭಿಲಾಯಿ ರೂರ್ಕೆಲಾಗಳಷ್ಟು ಗಾತ್ರದ್ದು) ಯನ್ನು ಸಂದರ್ಶಿಸಿದೆವು. 160 ಕೋಟಿ ರೂಪಾಯಿ ಮೊತ್ತದ ಈ ಕಾರ್ಖಾನೆಯಲ್ಲಿ ಸರ್ಕಾರದ ಇನ್ವೆಸ್ಟ್‌ಮೆಂಟ್ 51% – ಅಂದರೆ ಆಡಳಿತದ ಪರಮಾಧಿಕಾರ ಸರ್ಕಾರಕ್ಕೆ ಸೇರಿದಂತಾಯಿತು. ಕಡಲ ಕರೆಯ ಹತ್ತಿರವೇ ಇದ್ದ ಇಟಾಲ್ಸಿಡರ್ ಕಾರ್ಖಾನೆಯ ಊದುಕುಲುಮೆ, ರೋಲಿಂಗ್ ಮಿಲ್ ಮುಂತಾದ ನೂರಾರು ವಿಭಾಗಗಳನ್ನು ನೋಡುವಾಗ ನಾವೆಲ್ಲ ಉಕ್ಕಿನ ಕುಲಾವಿ ಧರಿಸಿಕೊಂಡು ಯುದ್ಧಕ್ಕೆ ಹೊರಟವರಂತೆ ಕಾಣುತ್ತಿದ್ದೆವು. ಒಂದು ವಿಭಾಗದಲ್ಲಿ ಕಬ್ಬಿಣದ ರೇಕು ಸಣ್ಣಗೆ ಮೈತುಂಬ ಹರಡುತ್ತಿತ್ತು. ಇದು ನನಗೆ ಕೇಡೆಂದು ಬಗೆದು ಮೂಗು ಮುಚ್ಚಿಕೊಂಡು ಮುನ್ನಡೆದೆ. (ಅಂದು ರಾತ್ರಿ ಎಂದೂ ಇಲ್ಲದ ನನ್ನ ದಮ್ಮು ಪ್ರತ್ಯಕ್ಷವಾಗಿ ಕಾಟ ಕೊಟ್ಟೇಬಿಟ್ಟಿತು – ಅದೇ ಪ್ರವಾಸ ಪರ್ವದ ಮೊದಲ ಮತ್ತೆ ಕೊನೆಯ 'ಅಸ್ಮಾ'ವತಾರವಾಯಿತು) ಗೇಟಿನಲ್ಲಿ ಕೆಲಸಗಾರರ ಒಂದು ವಿಭಾಗ ಲೋಹದ ಕೆಲಸಗಾರರಿಗೆ ಸರ್ಕಾರ ಯಾವುದೋ ಸೌಲಭ್ಯ ನೀಡಲಿಲ್ಲವೆಂಬುದಕ್ಕಾಗಿ ಸಂಪುಹೂಡಿತ್ತು. 6000 ಕೆಲಸಗಾರರನ್ನು ಒಳಗೊಂಡ ಈ ಬೃಹತ್ ಕಾರ್ಖಾನೆಗೆ ಸಂಪೇನೂ ಹೊಸದಲ್ಲ. ಮೂರನೇ ಒಂದಂಶ ಶಾಸಕಾಂಗವೇ ಕಮ್ಯುನಿಸ್ಟ್ ಪಕ್ಷಕ್ಕೆ ಒಲಿದಿರುವಾಗ ನೆಗಡಿ, ಕೆಮ್ಮು, ಫ್ಲೂಗಳಿಗಿರುವಷ್ಟೇ ಮಹತ್ತ್ವ ಸಂಪಿಗೂ.

ನಾಪೊಲಿಯಿಂದ ಆರೇಳು ಮೈಲಿ ದೂರದ ಪೊಜ್ಸಿಯಲ್ಲಿ ಒಂದು ಇಂಡಸ್ಟ್ರಿಯಲ್ ಎಸ್ಟೇಟನ್ನು ಕಟ್ಟುತ್ತಿದ್ದಾರೆ. ಗಾಜು, ಪ್ಲಾಸ್ಟಿಕ್ಸ್, ಪೆಯಿಂಟು ಮುಂತಾದ ಸರಕುಗಳನ್ನು ತಯಾರಿಸುವ ಹಲವಾರು ಕೊಟ್ಟಿಗೆಗಳನ್ನು ಅಲ್ಲಿ ನಿರ್ಮಿಸಿದ್ದಾರೆ. ಕೆಲವಂತೂ ಪ್ರತ್ಯೇಕ ಕಾರ್ಖಾನೆಗಳಷ್ಟು ದೊಡ್ಡವು. ತೆಂಕದ ಕೆಲಸಗಾರರ ಮನೋವೃತ್ತಿ ಮತ್ತು ವರ್ತನೆಯ ಮೇಲೆ ಸಂಪ್ರದಾಯವಂತ ಸಾಮಾಜಿಕ ಪರಿಸರವು ಬೀರುವ ಪರಿಣಾಮದ ಪೂರ್ವಾಪರಗಳನ್ನು ಅಲ್ಲಿನ ಅಧಿಕಾರಿಗಳೊಡನೆ ಚರ್ಚಿಸಿದೆವು. ವಿನಾ ಕಾರಣ ಗೈರುಹಾಜರಿ, ಹಬ್ಬಹರಿದಿನದ ಗೈರುಹಾಜರಿ – ತೆಂಕದ ಕೂಲಿಕಾರರಲ್ಲಿ ಸಾಮಾನ್ಯ. ಪ್ಲಾಸ್ಟಿಕ್ ಉದ್ಯಮದ ಲ್ಯಾಮಿನೇಶನ್ ಪ್ಲಾಂಟ್‌ನಲ್ಲಿ ಕೆಲಸ ಮಾಡುತ್ತಿದ್ದ ದೈತ್ಯಯಂತ್ರಶಕ್ತಿ ಮನುಷ್ಯಬಲವನ್ನು ಅನಗತ್ಯವೆಂಬ

ರೀತಿಯಲ್ಲಿ ವಿಜೃಂಭಿಸುತಿತ್ತು. ಅಷ್ಟು ದೊಡ್ಡ ಗಾತ್ರದ, ಸಾಮರ್ಥ್ಯದ ಯಂತ್ರ ನಡೆಸಲು ಆರೇ ಆರು ಜನ ಸಾಕು ಎನ್ನುವಾಗ ಆಧುನಿಕ ಔದ್ಯೋಗೀಕರಣದಲ್ಲಿ ಮನುಷ್ಯ ಪರಿಶ್ರಮಕ್ಕೆ ಇನ್ನು ಮುಂದೆ ಅವಕಾಶ ಕಡಿಮೆ ಆಗುವುದು ನಿಶ್ಚಯ. ಇದೇ ಅನುಮಾನ .ನಾಪೊಲಿಯ ಸಮೀಪದ ತೈಲ ಪರಿಷ್ಕರಣ ಕಾರ್ಖಾನೆಯನ್ನು ಸಂದರ್ಶಿಸಿದಾಗಲೂ ಬಂದದ್ದುಂಟು. ಸಾವಿರಗಟ್ಟಲೆ ಲೀಟರ್ ತೈಲ ಪರಿಷ್ಕಾರ ಮಾಡುವ ಬೃಹತ್ ಗಾತ್ರದ ಸ್ಥಾವರದಲ್ಲಿ ಉದ್ಯೋಗನಿರತರ ಸಂಖ್ಯೆ ಕೇವಲ 300. ಇನ್ನು ಮುಂದಿನ ಉದ್ಯಮಗಳಲ್ಲಿ ಬಂಡವಾಳದ ಒತ್ತು ಹೆಚ್ಚುಹೆಚ್ಚಾಗಿ ಬಿದ್ದು ಕೈಗಾರಿಕೆಗಳು ಒಂದು ಪ್ರದೇಶಕ್ಕೆ ಬಂದ ತಕ್ಷಣ ಜನರಿಗೆ ಉದ್ಯೋಗ ಸಿಗುತ್ತದೆನ್ನುವ ಭ್ರಮೆಗೆ ನಾವು ತಿಲಾಂಜಲಿ ಕೊಡಬೇಕಾಗುತ್ತದೆ. ತೆಂಕ ಇತಾಲಿಯದ ಔದ್ಯಮಿಕ ಉತ್ಪಾದನೆಯಿಂದಲೂ ನಿರುದ್ಯೋಗ ಸಮಸ್ಯೆ ಪರಿಹಾರವಾಗಲಿಲ್ಲ ಎಂಬ ಸತ್ಯಸ್ಥಿತಿಗೆ ಇಷ್ಟೇ ಕಾರಣ.

ನಾಪೊಲಿಯ ಸರಹದ್ದಿನೊಳಗೇ ನಾನು ನೋಡಿದ ಸ್ವಾರಸ್ಯವಾದ ಉದ್ಯಮವೆಂದರೆ ಮಕರೋನಿ ಮತ್ತು ಸ್ಪಗೆಟ್ಟಿ ತಯಾರಿಸುವ ಮಧ್ಯಮ ಪ್ರಮಾಣದ ಕಾರ್ಖಾನೆ. ಸ್ವಿಸ್‌ತಯಾರಿಯ ( Buehler ) ಸ್ವಯಂಚಾಲಿತ ಯಂತ್ರಗಳಿಗೆ ಒಂದು ಕಡೆಯಲ್ಲಿ ಹಿಟ್ಟು ಸುರುವಿದರೆ ಇನ್ನೊಂದು ಕಡೆಯಲ್ಲಿ ಸ್ಪಗೆಟ್ಟಿಯ ಎಳೆ ಬಟ್ಟೆ ಗಿರಣಿಯಲ್ಲಿ ನೂಲು ಬಂದಂತೆ ಬರುತ್ತದೆ. ಅದನ್ನು ಕಟ್ಟಿಂಗ್ ಯಂತ್ರದಲ್ಲಿ ತುಂಡರಿಸಿ, ಪೆಕೆಟಿನೊಳಗೆ ಸೇರಿಸುವುದಕ್ಕೂ ಮನುಷ್ಯ ಹಸ್ತಕ್ಷೇಪ ಆಗತ್ಯವಿಲ್ಲ; ಈ ಕಾರ್ಖಾನೆಯಲ್ಲಿ ಕೆಲಸ ಮಾಡುವವರ ಸಂಖ್ಯೆ ಒಟ್ಟು 80. ಅವರ ಸಂಬಳ ತಿಂಗಳೊಂದಕ್ಕೆ 400 ರಿಂದ 500. ಇಲ್ಲಿ ತಯಾರಾದ ಮಕರೋನಿ ಮತ್ತು ಸ್ಪಗೆಟ್ಟಿಗೆ ಅಮೆರಿಕ, ಇಂಗ್ಲೆಂಡ್ ಮತ್ತು ಸ್ವಿಟ್ಝರ್ಲೆಂಡ್‌ನಲ್ಲಿ ಒಳ್ಳೆಯ ಗಿರಾಕಿ ಇದೆ.

## □ □ ಮಿಣುಕು - ಇಣುಕು

ನಾಪೊಲಿಯ ನನ್ನ ಜೀವನದ ಕೆಲವು ಮಿಣುಕುನೋಟವನ್ನು ದಿನಚರಿ ರೂಪದಲ್ಲಿ ಬರೆದಿಟ್ಟಿದ್ದೆ. ಅದನ್ನೆ ಇಲ್ಲಿ ಇಟ್ಟರೆ ಅಪ್ರಸ್ತುತವಾಗಲಾರದು..

ಜನವರಿ, 4 : ವಿಯಾರೋಮದ ತುತ್ತತುದಿಯಲ್ಲಿರುವುದೇ ಮುಸೆಯೋ ನ್ಯಾತ್ಸನಾಲೆ (ರಾಷ್ಟ್ರೀಯ ಮ್ಯೂಸಿಯಮ್). ಇಲ್ಲಿ ಸಾಕ್ರೆಟೀಸನ ಹತ್ತು ಬಗೆಯ ಚಿಕ್ಕ ದೊಡ್ಡ ತಲೆಗಳನ್ನು ನೋಡಿದೆ. ಇತಾಲಿಯದ ನವಜಾಗೃತಿಯ ಶಿಲ್ಪಿಗಳ ತಲೆಯೊಳಗೂ ಮಹಾಜ್ಞಾನಿಯಾದ ಸಾಕ್ರೆಟೀಸನ ಬಗ್ಗೆ ಅಪಾರ ಗೌರವ ಹೊಕ್ಕಿರಬೇಕು. ಇಲ್ಲವಾದರೆ ವಿಶ್ವ ಕುರೂಪಿ ಸ್ಪರ್ಧೆಯಲ್ಲಿ ಪ್ರಥಮ ಬಹುಮಾನ ಗಳಿಸಬಹುದಾದ ಈ ಪುಣ್ಯಾತ್ಮನ ಮೇಲೆ ಅವರಿಗೇಕೆ ಇಷ್ಟು ಮೋಹ? ಅಮೃತಶಿಲೆಯ ಶಿಲ್ಪವೊಂದೇ ಅಲ್ಲದೆ ಕಂಚಿನ ವಿಗ್ರಹದ ವಿಭಾಗ ಮತ್ತು ತೈಲಚಿತ್ರದ ವಿಭಾಗವನ್ನೂ ಒಳಗೊಂಡ ಈ ವಸ್ತುಸಂಗ್ರಹಾಲಯದ ಸಂದರ್ಶನಕ್ಕೆ 150 ಲೀರೆ ಹೆಚ್ಚಲ್ಲ. ಸಾಕ್ರಟೀಸ್ ಕಾರ್ಡಿಗೆ 30 ಲೀರೆ; 20 ಚಿತ್ರಗಳ ಕಟ್ಟಿಗೆ 200 ಲೀರೆ. ಸೋವನೀರ ಸಂಚಯನಕ್ಕೆ ಇಲ್ಲಿಂದಲೇ ಆರಂಭ. ಓಂ ನಮಃ ಸೊಕ್ರಟೀಸಾಯ!

ಜನವರಿ 6 : ಆಪನ ವಿಲ್ಲಾಕ್ಕೆ ಪ್ರಯಾಣ. ಇಂದು ಬೇಫಾನ ಹಬ್ಬ. ಮಕ್ಕಳಿಗೆಲ್ಲ ಹಬ್ಬದ ಹೊಸ ಉಡುಗೊರೆಯ ನಿರೀಕ್ಷೆ. ಫಾದರ್ ಕ್ರಿಸ್ಮಸ್ ಬದಲು ಇತಾಲಿಯದಲ್ಲಿ ಉಡುಗೊರೆ ಬೆಳಗಾಗುತ್ತಲೇ ಯಾರೋ ಮಾಯಾವಿನಿ ಇಟ್ಟು ಹೋಗುತ್ತಾಳೆಂಬ ಮುದ್ದಾಂ ನಂಬಿಕೆ. ಊಟಕ್ಕೆ ಮೊದಲು 35 ಕಿ.ಮೀ. ದೂರದ ಹಳ್ಳಿಯಲ್ಲಿರುವ ಆಪಾವಿಲ್ಲಾಕ್ಕೆ ಭೇಟಿ. ಬೇಸಗೆಗೆ ಮಾತ್ರ ರಜಾದಿನ ಇಲ್ಲಿ ಕಳೆಯಲು ಬರುತ್ತದೆ ಆಪಾ ಪರಿವಾರ. ಚಳಿಗಾಲದಲ್ಲಿ ಬಾಗಿಲು ಬಂದ್. ಮೂಲೆಯ ಕಪಾಟಿನಲ್ಲಿ ಹಳೇ ಕೆಂಪು ವೈನ್. ದಾರಿಯಲ್ಲಿ ಸೇಬುಹಣ್ಣಿನ ಮರದ ಜನ್ಮಪ್ರಥಮ ದರ್ಶನ. ಗಂಟು ಗಂಟಿನಲ್ಲಿ ಕಜ್ಜಿಯ ಹಾಗೆ ಸೇಬಿನ ಗೊಂಚಲು: ಮುರಿದು ಹೋದ ಗ್ರೀಕ್ ದೇವಸ್ಥಾನದ ಇದಿರು ಆಪಾನ ಚಿತ್ರ ತೆಗೆದೆ.

ಜನವರಿ 16 : ಇಂದು ಇಸ್ವೇಯ ವಿಧಿಪೂರ್ವಕ ಉದ್ಘಾಟನೆ. ರೋಮಿನಿಂದ ಅನೇಕ ಪ್ರತಿಷ್ಠಿತರ ಆಗಮನ. ನಾಪೊಲಿಯ ಅಧ್ಯಾಪಕರ ಮಿಲನ. ಪ್ರೊಫೆಸರ್ ದಿನಾರ್ದಿ ಉದ್ಘಾಟನಾ ಭಾಷಣದಲ್ಲಿ ತೆಂಕ-ಬಡಗ ವೈಷಮ್ಯವನ್ನು ಅತಿರೇಕಕ್ಕೆ ಒಯ್ಯಬಾರದೆಂಬ ಸಾಧಾರ ವಿಮರ್ಶೆ. ಸುಂದರವಾಗಿ ಮುದ್ರಿತವಾದ ಇಸ್ವೇ ಹಸ್ತಪುಸ್ತಕ. ತೊರಿನೋದಲ್ಲಿ ಕ್ಷಿಪ್ರವಾಗಿ ಮುದ್ರಣ ಮುಗಿಸಿ ಕ್ಲಪ್ತ ಕಾಲಕ್ಕೆ ಪ್ರಕಟಿಸಿದ ಡೈರೆಕ್ಟರ್

ಜನ್ನಾರೊ ಪಂಥದಲ್ಲಿ ಗೆದ್ದದ್ದಕ್ಕೆ ಫೆರ್ರೊಲ 10,000 (=80 ರೂ.)ಲೀರೆ ತೆರಬೇಕಾಗಿ ಬಂದಿದೆ.

ಜನವರಿ 17: ಮಂಜು ಒಮ್ಮಿಂದೊಮ್ಮೆ ಮಾಯ. ಒಂದೂವರೆ ತಿಂಗಳ ತರುವಾಯ ನಾಪೊಲಿಯ ವಿಹಂಗಮ ನೋಟ – ಲೇಪೋಂತಾನೆ ಕಿಟಕಿಯೊಳಗಿಂದ. ಕೆಮರಾ ಹಿಡಿದುಕೊಂಡು ಕಡಲ ಕರೆಗೆ ಬಿಸಿಲಿನ ಫೋಟೊ ತೆಗೆಯಲು ಓಟ. ನನ್ನ ಜತೆ ಊರಿಗೆ ಊರೇ ಓಡುತ್ತಿದೆ. ತರ್ಬರ್ ಕಥೆಯಂತೆ ಹೆಂಗಸರು, ಮಕ್ಕಳು, ಗಂಡಸರು. ವಿಲಾಕಮ್ಯುನಾಲೆ ಯಲ್ಲಿ ಜನಸಂದಣಿ. ಕಾಲ್ದಾರಿಯಲ್ಲಿ ಗೊಂಬೆಯಾಟ. ಜನರ ಗುಂಪು. ತೋಟದಲ್ಲಿ ಅನೇಕ ಚಿತ್ರಗ್ರಹಣ.

ಜನವರಿ 18: ಪ್ಯಾಜ್ಸಾಪ್ಲೆಬಿಚಿತ್ತೊ ಚೌಕದ ಎದುರುಗಡೆ ಇರು ವುದೇ ಪಲಾಜ್ಸೋ ರಿಯಾಲೆ (ಅರಮನೆ). ಇಲ್ಲಿ ನಡೆದ ಕಾಕ್‌ಟೇಲ್‌ನ ಸಂಭ್ರಮ ಹೇಳತೀರದು. ಉದ್ದಕ್ಕೂ ಮೇಜು ಹಾಕಿದ್ದಾರೆ, ಅದರ ಮೇಲೆ ಪಿಂಗಾಣಿ ಬಟ್ಟಲುಗಳಲ್ಲಿ ತಿಂಡಿ ಇಟ್ಟಿದ್ದಾರೆ. ತರಹೆವಾರ ಬಣ್ಣದ ಬಾಟಲಿ ಗಳಲ್ಲಿ ಮಾದಕ ದ್ರಾವಣಗಳನ್ನು ತುಂಬಿಸಿದ್ದಾರೆ. ಎಷ್ಟು ಸಾರಿ ಬೇಕಾ ದರೂ ತಿಂಡಿ ತೆಗೆದು ತಿನ್ನಬಹುದು, ಗ್ಲಾಸ್ ಹಿಡಿದು ಮಾದಕದ್ರವ್ಯ ಸೇವಿಸಬಹುದು. ಒಂದು ಕೈಯಲ್ಲಿ ಗ್ಲಾಸ್ ಮತ್ತು ಹಲ್ಲಿನಲ್ಲಿ ತಿಂಡಿ ಕಚ್ಚಿ ಕೊಂಡು ಸೇರಿದ ಜನರೊಡನೆ ಸಲ್ಲಾಪ ಮಾಡಬೇಕು. ಯಾರ ಹತ್ತಿರವೂ ಐದು ಮಿನಿಟು ಹತ್ತು ಮಿನಿಟಿಗಿಂತ ಹೆಚ್ಚು ನಿಲ್ಲಬಾರದು – ಅಂದರೆ ಅನೇಕರ ಪರಿಚಯವಾಗುತ್ತದೆ. ಮಾತಿಗೆ ವಿಷಯ ಯಾವುದು? ಅಷ್ಟೂ ಜನರ ಹತ್ತಿರ ಏನು ಮಾತಾಡಲಿ? ಎಂಬ ಚಿಂತೆ ಬೇಡ. ರಾಜಕೀಯ ಬಿಟ್ಟು ಬೇರಾವ ವಿಷಯವೂ ಸರಿಯೆ. ಮೂರು ತಾಸಿನಲ್ಲಿ ಮೇಜಿನ ತಿಂಡಿ – ತೀರ್ಥ ಎರಡೂ ಖಾಲಿ. ಜನರೆಲ್ಲ ಹಿರಿಯುತ್ತಾರೆ.

ಬಣ್ಣಬಣ್ಣದ ತಿಂಡಿ-ತೀರ್ಥ ಎಲ್ಲವೂ ಮಾಂಸೋಪೇತವೆಂದು, ಉಪ ವಾಸ ಇರಲಾರದೆ, ಉಪ್ಪೇರಿಸಿದ ಬದಾಮಿಯನ್ನು ಒಂದು ಮುಷ್ಟಿ ತಿಂದು ಬಿಟ್ಟೆ. ರಾತ್ರಿ ಹೊಟ್ಟೆಯೊಳಗಿನ ಬದಾಮಿ ಮಾತಾಡುತ್ತಿತ್ತು.

ಜನವರಿ 20: ಎಲ್ಲಿಂದಲೋ ನನಗೆ ವಿದೇಶ ವಿನಿಮಯ ನೆರವು. 30 ಪೌಂಡ್ ಬಿಲ್ಲನ್ನು ಸ್ಟರ್ಲಿಂಗ್ ನೋಟುಗಳಲ್ಲಿ ವಟಾಯಿಸಿದ್ದೇನೆ. ಬ್ಯಾಂಕೊ ಕಮ್ಮೆರ್ಚಾಲೆಯಲ್ಲಿ ಆಪಾನ ಭಾವನೆಂಟ ಅತಿ ಹೆಚ್ಚು ವಿನಿಮಯ

ಮೌಲ್ಯ ಸಿಗುವ ಹಾಗೆ ಮಾಡಿದ್ದಾನೆ. ಸ್ಟರ್ಲಿಂಗ್, ಡಾಲರ್, ಮಾರ್ಕ್ ನೋಟುಗಳ ಕಂತೆ ಕಂತೆಯ ನೋಟ. ಯಾವುದರಲ್ಲಿ ಬೇಕು – ಡಾಲರೋ ಸ್ಟರ್ಲಿಂಗೋ? ಎಂಬ ಕರ್ಣಮಧುರವಾದ ಪ್ರಶ್ನೆ.

ಊರಲ್ಲಿ ಮಗಳು 'ಆಶಾ' ಹುಟ್ಟಿದ್ದಾಳೆ. ಅವಳಿಗೆ 'ಆಶಾ' ಎಂದು ಹೆಸರಿಡಿ ಎಂದು ಬರೆದೆ.

ಜನವರಿ 23 : ಕಸೆರ್ತದಲ್ಲಿ ಸಂಭ್ರಮದ ಉದ್ಘಾಟನಾ ಸಮಾರಂಭ. 18ನೆಯ ಶತಮಾನದ ಭದ್ರವಾದ ಅಮೃತಶಿಲಾ ನಿರ್ಮಿತ ಅರಮನೆಯ ಒಳಗಡೆ. ಜೊಸೆಫ್ ಬೊನಪಾರ್ಟೆ ಮಲಗಿದ ಸುಪ್ಪತ್ತಿಗೆ. ಪ್ರತಿ ಕೋಣೆ ಯಲ್ಲೂ ವರ್ಣಚಿತ್ರ, ಶಿಲ್ಪಗಳು. ಹೊರಗಡೆ ದೂರದ ಬೆಟ್ಟದ ನೀರನ್ನು ಬೇರೆ ಬೇರೆ ಮಟ್ಟದಲ್ಲಿ ಕಾಲುವೆಯಲ್ಲಿ ಹರಿಯಿಸಿ, ಅಲ್ಲಲ್ಲಿ ಕಾರಂಜಿಗಳನ್ನೂ ಶಿಲ್ಪ ಸಮುದಾಯವನ್ನೂ ಕೂಡಿಸಿದ್ದಾರೆ. ಬೆಟ್ಟದ ನೆತ್ತಿಗೂ ಕಟ್ಟಕಡೆಯ ಕಾರಂಜಿಗೂ ಅರ್ಧ ಮೈಲು ದೂರ ಇರಬಹುದು. ನೀರಿನ ದಾರಿಯಾಗಿ ಬೆಟ್ಟದ ಅರ್ಧದ ವರೆಗೆ ಏರಿ ದಣಿದು ಕೂತದ್ದಾಯಿತು. ಉಪವನದ ಲ್ಲಿಯೇ ಮಧ್ಯಾಹ್ನದ ಊಟ.

ಸಂಜೆ ತಿರುಗಿ ಬರುವಾಗ ಹಳೆ ಕಸೆರ್ತಕ್ಕೆ ಭೆಟ್ಟಿ. 800 ಕ್ರಿ. ಶ. ದಲ್ಲಿ ಸ್ಥಾಪಿತವಾದ ಬೆಟ್ಟದ ಮೇಲಿನ ಈ ಹಳ್ಳಿ ನಾಪೊಲಿ ಪರಿಸರದ ಅತ್ಯಂತ ಪ್ರಾಚೀನ ಪರ್ವತಗ್ರಾಮ. ಅಲ್ಲಿಯೂ ಒಂದು ಮುರುಕಲು ಇಗರ್ಜಿ. ಇಗರ್ಜಿಯ ಸ್ತಂಭಗಳು ಕ್ರೈಸ್ತ ಪೂರ್ವ ರೋಮನ್ ಮಂದಿರ ದಿಂದ ಆಯ್ದುಕೊಂಡದ್ದು. ಕಲಾತ್ಮಕವಾದ ಉಪದೇಶ ವೇದಿಕೆ, ಸ್ತಂಭ ರಾಜಿ.

ಜನವರಿ, 24 : ಪ್ರೊಫೆಸರ್ ಪಲೊಂಬರ ಮನೆಯಲ್ಲಿ 16 ಜನರಿಗೆ ಔತಣ. ಪಲೊಂಬರ ಮೂರು ಉಪನ್ಯಾಸದ ಸಾರಸಂಗ್ರಹಕಾರ್ಯ ನನಗೆ ಒಪ್ಪಿಸಿದ್ದರು. ಅದು ಚೆನ್ನಾಗಿತ್ತೆಂಬ ಶಿಫಾರಸು ಇದು ಪ್ರೊಫೆಸರ ರಿಂದಲೇ ಸಿಕ್ಕಿದೆ. ಚಿಕ್ಕ ಮನೆ. ಸೇದುವ ಪೈಪುಗಳ ಒಂದು ಪ್ರದರ್ಶನಿಯೇ ಅವರ ಮನೆಯಲ್ಲಿತ್ತು.

ಫೆಬ್ರುವರಿ 10: ಭಾನುವಾರ. ಕಿಂಕರ್ತವ್ಯವಿಮೂಢ. ಕೆಳಗಿನಿಂದ ಕರೆ: ಆ್ಯಡ್ಮಿರಲ್ ವಿಯೋಲ ಮತ್ತು ಶ್ರೀಮತಿ ಫೆರ್ರೊಲಾ ತರ್ಜುಮೆಕಾರ. 'ಜೂನ್ 4ರಿಂದ 15 ದಿನ ನಡೆಯುವ ವಿಶ್ವ ಆಹಾರ ಸಮ್ಮೇಳನಕ್ಕೆ

ಪ್ರತಿನಿಧಿಯಾಗಿ ಹೋಗುವುದಕ್ಕೆ ಒಪ್ಪಿಗೆ ಇದೆಯೆ? 425,000 ಲೀರ (=3400 ರೂಪಾಯಿ) ಇದಕ್ಕಾಗಿ ತೆಗೆದಿರಿಸಿದ್ದಾರೆ. ನಿಮಗೆ ಸೌಕರ್ಯ ಆದೀತೇ?' ಎಂಬ ಬಿನ್ನಪ. ಆಶ್ಚರ್ಯ: ಅದೃಷ್ಟದ ಶುಭದಿನ. ನನ್ನನ್ನೇ (ಮತ್ತು ಫಿಲಿಪ್ಪೀನದ ಕ್ಯಾಸ್ಟ್ರೋವನ್ನು) ಏಕೆ ಆರಿಸಿದರು? ಬಗೆಹರಿಯದ ಪ್ರಶ್ನೆ. ಎರಡೂ ಕೈಯೆತ್ತಿ ಸಮ್ಮತಿ!

ಫೆಬ್ರುವರಿ, 11: ಅರ್ಥಶಾಸ್ತ್ರದಲ್ಲಿ ನಡೆದ ಕ್ರಾಂತಿಯ ಸ್ವಾನುಭವ. ಇತಾಲೋಕುತೋಲೊ ಅವರಿಂದ 'ಓಪರೇಶನಲ್ ರೀಸರ್ಚ್' ಎಂಬ ಗಣಿತಮಯ ಅರ್ಥ ತತ್ವದ ವಿವರಣೆ. ಗಣಿತವಿಲ್ಲದವರಿಗೆ ಈ ಪಾಠ ಗ್ರೀಕ್. ಇದನ್ನೆ ಇನ್ನೂ ಮೂರು ವಾರ ತಡೆದುಕೊಳ್ಳಬೇಕಲ್ಲ? ಹೇಗೆ?

ಮಾರ್ಚಿ, 12: ಇತಾಲಿಯನ್ ಅಧ್ಯಕ್ಷರ ಭೆಟ್ಟಿಗೆಂದೇ ಒಂದು ದಿನ ನಿಯೋಜಿತವಾಗಿತ್ತು. ಅಂದು ಇಸ್ಪೇ ಬಸ್ಸು ಕ್ವಿರಿನಾಲೆ (ರಾಷ್ಟ್ರಪತಿ ಭವನ) ಮುಂದೆ ನಿಂತಾಗ ಉಸಿರು ಹಿಡಿದು ಎಲ್ಲರೂ ಆಗಸೆ ಬಾಗಿಲಿಂದ ಒಳನುಗ್ಗಿ ದೆವು. ಒಳಗಿನ ಪ್ರಾಕಾರ ದಾಟಿ ಅರಮನೆಯ ಅಂಗಳಕ್ಕೆ ಕಾಲಿಟ್ಟಮೇಲೆ ಆರಡಿ ಎತ್ತರದ ಸೈನಿಕನೊಬ್ಬ ಶಿಲಾಮೂರ್ತಿವತ್ ನಿಂತಿದ್ದ. ನಾವು ಹೋಗುತ್ತಿದ್ದಂತೆ ಅವನ ಕಣ್ಣು ನಮ್ಮನ್ನು ಹಿಂಬಾಲಿಸಿತೇ ಹೊರತು ಅವನ ಕೈಕಾಲು ಮಿಸುಕಾಡಲಿಲ್ಲ. ಕಷ್ಟದ ಕೆಲಸ. ನೊಣ ಮೂಗಿನ ಮೇಲೆ ಕೂತರೇನು ಮಾಡುತ್ತಾನೋ!

ಅಧ್ಯಕ್ಷ ಸೆನ್ಯಿ (Segni) ಸಾರ್ಡೀನಿಯಾ ದ್ವೀಪವಾಸಿ. ನಮ್ಮನ್ನೆಲ್ಲ ಇಸ್ಪೇ ವರಿಷ್ಠರು ಅವರಿಗೆ ಪರಿಚಯಿಸಿದರು; ಹಸ್ತಲಾಘವ ಕಡ್ಡಾಯ. ಅಧ್ಯಕ್ಷರಿಗೆ ವಯಸ್ಸಾಗಿತ್ತು. ಹಸ್ತದಲ್ಲಿ ಕಸುವಿರಲಿಲ್ಲ. ಆಳು ಕುಳ್ಳಗೆ, ತೆಳ್ಳಗೆ. ಬುದ್ಧಿವಂತನೆಂದು ಕಣ್ಣು, ಮೋರೆ, ಮಾತು ಸಾರಿದವು. ಚಿಕ್ಕ ಭಾಷಣದಲ್ಲಿ ನಮಗೆ ಸ್ವಾಗತ.

ಒಂದು ಬೆಕ್ಕೂ ಅರಸನನ್ನು ನೋಡಬಹುದು ಎಂಬ ಇಂಗ್ಲಿಷ್ ಗಾದೆಯಂತೆ ಅಂದಿನ ವರೆಗೆ ಯಾವ ಅಧ್ಯಕ್ಷನನ್ನೂ ಕಾಣದ ನಾನು ಒಬ್ಬ ಅಧ್ಯಕ್ಷನನ್ನು ಕಂಡೆನೆಂದಾಯಿತು.

ಮಾರ್ಚ್, 15: ರಾಯ್ (Rai) ರೇಡಿಯೋ ಟೆಲಿವಿಷನ್ ಕೇಂದ್ರದ ಸಂದರ್ಶನ. 7 ಬಿಲಿಯ ಲೀರೆ ಇನ್ವೆಸ್ಟ್‌ಮೆಂಟಿನಿಂದ ಕಟ್ಟಿರುವ ಸೌಧ.

ಯುರೋಪಿನಲ್ಲೇ ಅತ್ಯಾಧುನಿಕ ಮತ್ತು ಅತಿ ದೊಡ್ಡದು. ಒಂದು ಸಾವಿರ ಜನ ಸಂಗೀತ ಆಲಿಸಲು ಕೂರುವ ಸಭಾಭವನ.

ಮಾರ್ಚ್, 16: ಸೊಲ್ಫತಾರಕ್ಕೆ ಪ್ರಯಾಣ. ನಾಪೊಲಿಯಿಂದ 8 ಮೈಲು ದೂರ. ಸುತ್ತಲೂ ಗುಡ್ಡ, ನಡುವೆ ಹೊಲದಲ್ಲಿ ಮಣ್ಣು ಟೊಳ್ಳು ಟೊಳ್ಳಾಗಿ ಶಬ್ದ ಮಾಡುತ್ತದೆ. ಅದರ ನಟ್ಟನಡುವೆ ಕತಕತ ಕುದಿಯುತ್ತಿರುವ ಗಂಧಕದ ಕೆರೆ. ಗುಳುಗುಳು ಧ್ವಾನಂ. ಧೂಪಧೂಮಂ. ಹೊಲದ ತುಂಬ ರಂಧ್ರಗಳು. ಪ್ರತಿ ರಂಧ್ರದಿಂದಲೂ ಗಂಧಕದ ಹೊಗೆ. ದಾರಿಯಲ್ಲಿ ಕ್ಯಾಂಪಿಂಗ್ ಪ್ರದೇಶ. ಕಾರವಾನ್ ಮಾದರಿ ಕಾರುಗಳನ್ನು ಹಿಡಿದುಕೊಂಡು ಬರುವ ಪ್ರವಾಸಿಕರಿಗೆ ನಿಲುದಾಣ.

ಮಾರ್ಚ್, 17: 'ಪಲಾಜ್ಝೊ ರಿಯಲೇ'ಯಲ್ಲಿ ಕರವಾಜ್ಜೋ ಚಿತ್ರ ಪ್ರದರ್ಶನ. ಅರಮನೆಯಲ್ಲಿ ಈಗ ನಾಪೊಲಿಯ ಪ್ರಿಫೆಕ್ಟ್ (ಗವರ್ನರ್) ಬಿಡಾರ ಹೂಡಿದ್ದಾರೆ. ಆಗಿಂದಾಗ ಇಲ್ಲಿ ಪ್ರದರ್ಶನಗಳೇರ್ಪಡುತ್ತವೆ. ಕರವಾಜ್ಜೊ ಬಣ್ಣಗಾರಿಕೆಯಲ್ಲಿ ನಿಪುಣ. ವಿಧ ವಿಧ ಭಂಗಿಯ ಕೊಲೆ ಚಿತ್ರಗಳನ್ನು ನೋಡಿದೆ. ಕ್ಯಾನ್ವಾಸ್ ತುಂಬ ರಾಮಾರಕ್ತ.

ಮಾರ್ಚ್, 18: ಪೆಲ್ಲೆಗ್ರಿನೋ ಕಂಪೆನಿಯ ಮರಿಹಡಗಿನಲ್ಲಿ ನಾಪೊಲಿಕೊಲ್ಲಿಯಿಂದ ಹತ್ತು ಮೈಲು ದೂರದಲ್ಲಿರುವ ಕಾಪ್ರಿ ದ್ವೀಪಕ್ಕೆ ಪಯಣ. 80 ಮಿನಿಟಿನ ಹಾದಿ. ಕಾಪ್ರಿ ಬೆಟ್ಟದ ಶಿಖರಕ್ಕೆ ಬಸ್ಸಿದೆ, ಬೆಟ್ಟದ ರೈಲು ಇದೆ. ನೆತ್ತಿಯಲ್ಲೇ ಮಾರ್ಕೆಟ್ ಚೌಕವಿದೆ. ಹೊಟೆಲುಗಳು, ರೆಸ್ಟುರಾಗಳು ಚೊಕ್ಕವಾಗಿದ್ದಾವೆ. ಕಾಪ್ರಿಯ ಕರಕೌಶಲ ಬಟ್ಟೆಯ ಕಸೂತಿಯಲ್ಲಿ ಕಾಣುತ್ತದೆ. ಚಿಕ್ಕ ಚಿಕ್ಕ ಓಣಿಗಳಲ್ಲಿಯೂ ಇಳಿದು, ಏರಿ, ನಡೆಯಬಹುದು. ಅಲ್ಲಲ್ಲಿ ವಿಲ್ಲಾಗಳು ಎಲ್ಲಿ ಹೋದರೂ ಸಾಗರರಾಜನ ವಿಹಂಗಮ ನೋಟ. ಸಮುದ್ರಕ್ಕಿಂತ ನಾವು 2000 ಅಡಿ ಎತ್ತರದಲ್ಲಿ ನಿಂತಿರಬಹುದು. ಅನಾಕಾಪ್ರಿ ದ್ವೀಪದ ಇನ್ನೊಂದು ಮೈ. ಜರ್ಮನ್ ಲೇಖಕ ಲಾಕ್ಸೆಲ್ ಮುಂಥೆ ಇಲ್ಲಿನ ವಿಲ್ಲಾ ಸಾನ್ ಮೈಕೆಲ್ ಎಂಬುದರಲ್ಲಿ ಹಲಗಾಲ ಕಳೆದಿದ್ದ. ಅದೀಗ ಯಾತ್ರಾ ಸ್ಥಳ. ವಿಲ್ಲಾದ ತುದಿಯಲ್ಲಿ ಒಂದು ಸಿಂಹವನ್ನಿಟ್ಟಿದ್ದಾರೆ; ಅದನ್ನು ಮುಟ್ಟಿದವರಿಗೆ ಮತ್ತೊಮ್ಮೆ ಕಾಪ್ರಿ ಯಾತ್ರೆಯ ಯೋಗ ಬರುತ್ತದಂತೆ. ನಾನೂ ಸಿಂಹದ ಮೈ ಮುಟ್ಟಿದ್ದೇನೆ.

ದ್ವೀಪವನ್ನು ಕೊರೆದು ಚಿಕ್ಕ ರಂಧ್ರದ ಮೂಲಕ ಒಳನುಗ್ಗಿದ ಕಡಲು

ನೀಲಜಲದ ಗುಹೆಯನ್ನು ನಿರ್ಮಾಣ ಮಾಡಿದೆ. ಇದೇ ಒಲ್ಲಾಗ್ರೊಟ್ಟೋ. ನಮ್ಮಲ್ಲಿನ ಕುತುಬ್‌ಮಿನಾರ್, ತಾಜ್‌ಮಹಲ್‌ನಂತೆಯೆ ವಿಶ್ವವಿಖ್ಯಾತ ವಾದ ಯಾತ್ರಾಕರ್ಷಣೆ – ಈ ಗ್ರೊಟ್ಟೋ. ಹಡಗು ಬಿಟ್ಟು ಚಿಕ್ಕ ದೋಣಿ ಯಲ್ಲಿ ದ್ವೀಪವನ್ನು ಕೊಂಚ ಬಳಸಬೇಕು, ಆ ದೋಣಿಯಿಂದ ಎರಡು ಜನ ಕೂರುವ ಇನ್ನೊಂದು ಪುಟ್ಕೋಷಿ ದೋಣಿಗೆ ನೆಗೆಯಬೇಕು. ತಲೆ ಮೈ ತಗ್ಗಿಸಿ ಗುಹಾಮುಖವನ್ನು ಪ್ರವೇಶಿಸಬೇಕು; ನೀಲಜಲದ ಈ ನಿಸರ್ಗ ನಿರ್ಮಿತ ಸರೋವರದಲ್ಲಿ ಒಂದು ಪ್ರದಕ್ಷಿಣೆ ಬಂದರೆ ಜೀವನ ಧನ್ಯ. ಗ್ರೊಟೋದ ನಡುಭಾಗದಲ್ಲಿ ಬೆಳಕಿನ ಕಿರಣ ಹಬ್ಬಿದೆ. ನೀಲ ಜಲ ಪಾರದರ್ಶಕವಾಗಿದೆ. ಪ್ರದಕ್ಷಿಣೆ ಮುಗಿಯಿತು. ನಿಮ್ಮಂತೆ ನಾಲ್ಕಾರು ದೋಣಿ ಗುಹಾಮುಖದಲ್ಲಿ ಕ್ಯೂ ಹಿಡಿದಿವೆ – ಇಲ್ಲಿ ಗ್ರೊಟ್ಟೋ ದರ್ಶನ ದಿಂದ ಧನ್ಯವಾದ ಜೀವಿಗಳು ಒಂದಕ್ಕೊಂದು Wonderful, meraviglioso ಎನ್ನುತ್ತಿರುವಾಗಲೇ – ಅಪೂರ್ವ ಸಂದರ್ಶನ ಮುಗಿದು ಬಿಡುತ್ತದೆ.

ಮಾರ್ಚ್, 19: ವೆಸುವಿಯಸ್ ಬೆಟ್ಟದ ಅವಳಿ ಶಿಖರ ನಾಪೊಲಿಗೆ ಒಂದು ಸುಂದರ ಹಿನ್ನೆಲೆಯನ್ನು ಒದಗಿಸುತ್ತಿದೆ. ಜಪಾನಿನ ಫ್ಯೂಜಿ ಪರ್ವತ ದಂತೆ ಇದು ಕೂಡ ವಿಶ್ವದ ಒಂದು ಪ್ರಖ್ಯಾತ ದೃಶ್ಯ – ಎಲ್ಲ ತೆರನ ಚಿತ್ರ, ಚಿತ್ತಾರ, ಫೋಟೋ, ಸೊವನೀರ್ ಮುಂತಾದ ಮಾಧ್ಯಮಗಳಲ್ಲಿ ಮೆರೆ ಯುವ ನೋಟ. ಮುಂಜಾನೆ ಸರ್ಕಾಮವಸೂವಿಯನ ರೈಲಿಗೆ 600 ಲೀರೆ ತೆತ್ತು ಹತ್ತಿದೆವು. ಇದು ಖಾಸಗೀ ರೈಲುಬಂಡಿಯಾದದ್ದರಿಂದ ರಾಷ್ಟ್ರೀ ಕರಣವಾದ ಮೇಲೆ ಹಳ್ಳಿಯ ದಾರಿಯಲ್ಲಿ ಸಂಚರಿಸುವ ಮುರುಕಲು ಬಸ್ಸುಗಳಂತೆ ಕೆಳಮಟ್ಟದ ಡಬ್ಬಿ, ಸೌಕರ್ಯಗಳನ್ನು ಒಡಗೂಡಿದ್ದಿತು. ವೆಸುವಿಯಸ್ ಬೆಟ್ಟಕ್ಕೆ ಹತ್ತುವಲ್ಲಿ ಒಂದು ಸುಂಕದ ಕಟ್ಟೆ ಇದೆ. ಅಲ್ಲಿ 50 ಲೀರೆಗೆ ಒಂದು ಕೋಲು ಕೊಡುತ್ತಾರೆ. 150 ಲೀರೆ ಕೊಟ್ಟರೆ ಮೇಲಕ್ಕೆ ಹೋಗಲು ತೊಡಮೆ ತೆಗೆಯುತ್ತಾರೆ. ಕೋಲು ಅನುಕೂಲ ವಾಗಿರುತ್ತದೆ. ಕಡಿದಾದ ದಾರಿಯಲ್ಲಿ ಏರುವಾಗ ಆಧರಿಸಿ ನಿಲ್ಲುವುದಾಗು ತ್ತದೆ. ಬೆಟ್ಟದ ಶಿಖರದ ಸಮೀಪ ಇನ್ನೊಂದು ಸುಂಕದ ಕಟ್ಟೆ – ಅಲ್ಲೂ 100 ಲೀರೆ ತೆತ್ತೇ ಅಗ್ನಿಪರ್ವತದ ಬಾಯಿ (Crater) ನೋಡಲು ಸಾಧ್ಯ. ದೊಡ್ಡ ಪ್ರಪಾತ, ಅಡಿಯಿಂದ ಒಯ್ಯನೊಯ್ಯನೆ ಗಂಧಕದ

ಹೊಗೆ ತೇಲಿ ಬರುತಿತ್ತು. ವಿರಳವಾದ ಮೋಡದಂತೆ ಗಾಳಿಗೆ ಚದರಿ ಅತ್ತ ಇತ್ತ ತೊನೆದು ವಾತಾವರಣದಲ್ಲಿ ಮಾಯವಾಗುತ್ತಿತ್ತು. ಬಗ್ಗಿ ನೋಡಬಹುದು. 300–400 ಅಡಿ ತಗ್ಗಿನಿಂದ ಹೊಗೆ ಬರುತ್ತದೆ. ಭಾರೀ ಚಳಿ. ಬೀಸುಗಾಳಿ ನನ್ನ ಆರೋಗ್ಯಕ್ಕೆ ಒಳ್ಳೆಯದಲ್ಲ. ಚಳಿ ಮುಗಿಯಿ ತೆಂದು ಓವರ್ಕೋಟನ್ನು ಬಿಟ್ಟು ಬಂದದ್ದು ಬೆಟ್ಟದ ನೆತ್ತಿಯ ಮೇಲೆ ತಪ್ಪಾಯಿತು ಎಂದೆನಿಸಿತು. ಲಾವಾದ ಮಣಿಗಳಿಂದ ಮಾಡಿದ ಒಂದು ಸರ ಸೋವನೀರಾಗಿ ಕೊಂಡೆ. ಬೆಲೆ 300 ಲೀರೆ – ಬೆಟ್ಟದ ಬುಡದ ಸುಂಕದ ಕಟ್ಟೆ, ಸರ್ಕಾರ ಮತ್ತು ಖಾಸಗೀ ಉದ್ಯಮಗಳ ಸಮನ್ವಯಕ್ಕೆ ಉದಾಹರಣೆ. 150 ಲೀರೆ ಸುಂಕ + ಸೋವನೀರು ಸ್ವಂತ ವ್ಯಾಪಾರ.

ಮಾರ್ಚ್, 20: ಪೊಂಪೇ – ಟ್ಯಾಕ್ಸಿಯವರು ರೈಲು ನಿಲ್ದಾಣದ ಹತ್ತಿರ 'ಬೊಂಬೇ' 'ಬೊಂಬೇ' ಎಂದು ಕೂಗುತ್ತಿದ್ದರು; ಬಹಳ ದಿನ ನಮ್ಮನ್ನು ಕಂಡು ಬೊಂಬೈಯಿಂದ ಬಂದವರೇ ಎಂದು ಸ್ವಾಗತ ಮಾಡು ತ್ತಿದ್ದಾರೆಂದುಕೊಂಡೆ. ಕಾಲಕ್ರಮೇಣ ಅದು ಪೊಂಪೇಗೆ ಇಟಾಲಿಯನ್ ಬಾಯಲ್ಲಿ ಹೊರಡುವ ಧ್ವನಿ ಸಂಚಾರವೆಂದು ವಿದಿತವಾಯಿತು. ಹೊರ ಡುವ ಒಂದು ಇರುಳು ಮೊದಲು ಪೊಂಪೇಗೆ ಹೋದೆವು ಬಸ್ಸಿನಲ್ಲಿ. ಹಠಾತ್ತನೆ ಅಗ್ನಿಪರ್ವತದ ಸ್ಫೋಟದ ಪ್ರಕೋಪಕ್ಕೆ ಸಿಲುಕಿ ಭಗ್ನವಾದ ನಗರವೆಂದು ಪೊಂಪೇಗೆ ಕುಪ್ರಸಿದ್ಧಿ ಲಭಿಸಿದೆ. 79 ಕ್ರಿ. ಶ. ದಲ್ಲಿ ರೋಮನ್ ಅರಸಾಳಿಕೆಯಲ್ಲಿ ರೋಮಕರು ತಮ್ಮ ವಿಲಾಸದಲ್ಲಿ ತಲ್ಲೀನರಾಗಿದ್ದಾಗಲೆ ವೆಸುವಿಯಸ್ ಕಟ್ಟೊಡೆದು ಹರಿದು ಇಡಿ ನಗರವನ್ನು ಧ್ವಂಸ ಮಾಡಿತು. ಕೂತಲ್ಲಿ, ನಿಂತಲ್ಲಿ ಜನ ಅಗ್ನಿರಸದೊಳಗೆ ಹೂತುಹೋದರು. ಸಾವಿರಾರು ವರ್ಷಗಳ ತರುವಾಯ ಶೋಧಕರು ಈ ನಗರವನ್ನು ಅಗೆದು ಅವರ ಅಗ್ನಿರಸಾವೃತ ದೇಹವನ್ನು ವಸ್ತುಸಂಗ್ರಹಾಲಯದಲ್ಲಿ ಜತನದಿಂದ ಇರಿಸಿ ದ್ದಾರೆ. ಅರಮನೆಯ ಒಂದು ಕೊಠಡಿಯೊಳಗೆ ಜನ ಹೋಗಿ ನೋಡಿ ನಗುತ್ತಾರೆ – ಮಿಥುನಗಳ ವರ್ಣಚಿತ್ರ ಇನ್ನೂ ಮಾಸದೆ ಅರ್ಥವಾಗು ವಂತೆ ಉಳಿದಿರುವುದರಿಂದ. ನಗರದ ಮುಖ್ಯ ಚೌಕವನ್ನು ಸ್ತಂಭಗಳ ಸಮೇತ ಪುನರ್ನಿರ್ಮಿಸಿದ್ದಾರೆ. ಪಕ್ಕದಲ್ಲಿ ನೀರಿನ ಕೊಳವೆ ಆವಂದಿನ ಸುಖ ಸೌಕರ್ಯಗಳ ಕಲ್ಪನೆ ಹುಟ್ಟಿಸುತ್ತದೆ. ಎಲ್ಲವನ್ನೂ ಇತಿಹಾಸ ಅವಶೇಷಗಳ ಇಲಾಖೆ ಬಲು ಜಾಗರೂಕತೆಯಿಂದ ಕಾದಿರಿಸಿದೆ. ನಮ್ಮ

ಪಾಳುಹಂಪೆ ಇದಕ್ಕಿಂತ ವಿಷ್ಟೋ ದೊಡ್ಡದು. ವಿಷ್ಟೋ ಶ್ರೇಷ್ಠ. ಆದರೆ ಇತಾಲಿಯದ ಪ್ರೊಂಪೇಗೆ ಆಕಸ್ಮಿಕದ ವೈಲಕ್ಷಣ್ಯವೊಂದು, ಯುರೋಪ್ಯ ನಾಗರಿಕತೆಯ ಸ್ಮಾರಕವೆಂಬುದೊಂದು. ಅಪೂರ್ವತೆಯನ್ನು ದಯಪಾಲಿಸಿವೆ. ಹಂಪೆ ನೋಡಿದವರಿಗೆ ಇಲ್ಲಿ ವಿಶಿಷ್ಟವಾದದ್ದೇನೂ ಇಲ್ಲ; ಆದರೆ ಇದು ಪುರಾತನ.

ಮಾರ್ಚ್. 24: ಸೊರ್ರೆಂತೋ ನಾಪೋಲಿಯ ಕೊಲ್ಲಿಯ ತುತ್ತ ತುದಿಯ ಒಂದು ಭೂಭಾಗ. ಸಮುದ್ರಕ್ಕಿಂತ 1000 ಅಡಿ ಎತ್ತರದಲ್ಲಿರುವ ಈ ಊರಿಗೆ ಕಾಪ್ರಿ ದ್ವೀಪದಂತೆಯೆ ಭಾರೀ ಆಕರ್ಷಣೆ ಇದೆ. ಇಲ್ಲಿ ಸಾಕಷ್ಟು ವ್ಯಾಪಾರ, ಹೋಟೆಲುಗಳು, ಸೌಕರ್ಯಗಳು ಇರುವಂತೆ ತೋರುತ್ತದೆ. ರೈಲಿನ ರಿಟರ್ನ್ ಟಿಕೀಟಿಗೆ ನಾಪೋಲಿಯಿಂದ 530 ಲೀರೆ (=4.50 ರೂಪಾಯಿ). ಎಂಟು ಹತ್ತು ಮೈಲು ದೂರ ಇರಬಹುದು. ಕಡಲಲ್ಲಿ ವಿಹಾರಕ್ಕೆಹೋಗಬಹುದು. ಸುಮ್ಮನೆ ಉಪವನಗಳಲ್ಲಿ ಹಾದಿ ಬೀದಿಗಳಲ್ಲಿ ಸಂಚರಿಸಬಹುದು. ಸಿಕ್ಕ ಹೆಣ್ಣುಗಳನ್ನು ಕಂಡು ಧೈರ್ಯವಂತರು ಕಣ್ಣು ಮಿಟುಕಿಸಬಹುದು. ಅಂಗಡಿಗಳಲ್ಲಿ ಸಿಗುವ ಸಂಗೀತದ ಪೆಟ್ಟಿಗೆ (ಸಿಗರೇಟ್ ಪೆಟ್ಟಿಗೆ, ಅಲಂಕರಣ ಪೆಟ್ಟಿಗೆ ಎಲ್ಲದಕ್ಕೂ ಮುಚ್ಚಳ ತೆರೆದ ಕೂಡಲೆ ಸಂಗೀತ ಹೊರಡಿಸುವ ಕಿರುಯಂತ್ರಗಳನ್ನಿಟ್ಟಿದ್ದಾರೆ) ಕೊಳ್ಳಬಹುದು. ಇಲ್ಲಿ ಒಂದುಮನೆ ಇದೆ. ಅದರ ಗೋಡೆಯಲ್ಲಿ 'ಮ್ಯಾಕ್ಸಿಂ ಗಾರ್ಕಿ ಇಲ್ಲಿ ವಾಸಮಾಡಿದ್ದ' ಎಂದು ಬರೆದಿದ್ದಾರೆ. ಅಮೃತಶಿಲೆಯ ಈ ಚಿಕ್ಕ ಫಲಕವೂ ಒಂದು ಪ್ರವಾಸಿ ಆಕರ್ಷಣೆ.

ಮಾರ್ಚ್, 29: 'ಭಾರತದ ಅಭಿವೃದ್ಧಿ ಯೋಜನೆ' ಕುರಿತ ನನ್ನ ಪ್ರಬಂಧವನ್ನು ಇಸ್ಮೇ ವರ್ಗಕ್ಕೆ ಚಿತ್ತರಿಸಿದೆ. ನಾನೇ ಬರೆದು ಮಣಿಪಾಲದಲ್ಲಿ ಮುದ್ರಿಸಿ ತರಿಸಿಕೊಂಡ ಪ್ರಬಂಧವನ್ನು ಆಧಾರವಾಗಿಟ್ಟು ಕೊಂಡು ಉಪನ್ಯಾಸ ಮಾಡಿದೆ. ಇತಾಲಿಯನ್ ತರ್ಜುಮೆಯನ್ನು ಸೇರಿಸಿ ಉಪನ್ಯಾಸದ ಅವಧಿ ಎರಡೂವರೆ ತಾಸು; ಆಮೇಲೆ ಒಂದು ತಾಸು ನಡೆದ ಚರ್ಚೆಗೆ ಉತ್ತರವನ್ನೂ ಹೇಳಿದೆ. ಇತಾಲಿಯನ್ ಪತ್ರಿಕೆಯಲ್ಲಿ ಪ್ರಕಟಿಸಬೇಕೆಂದು ಈ ಪ್ರಬಂಧವನ್ನು ಇಸ್ಮೇ ಕಚೇರಿ ತೆಗೆದುಕೊಂಡಿದೆ.

ಏಪ್ರಿಲ್, 1: ಸ್ವಿಝರ್ಲೆಂಡ್‌ಗೆ ಒಂದು ವಾರದ ಪ್ರವಾಸ ಕೈಗೊಳ್ಳುವ ಆಸೆ. ಡಾ. ಫೆರ್ರೊಲಾ ಹತ್ತಿರ ತೋಡಿಕೊಂಡೆ. ಸುಬ್ಬಯ್ಯನೂ

ಜತೆಗೆ ಬರುತ್ತಾನೆ ಎಂದೆ. ಮನಸ್ಸಿಲ್ಲದ ಮನಸ್ಸಿಂದ ಒಪ್ಪಿ ರಜೆ ದಯ ಪಾಲಿಸಿದ ಫೆರ್ರೊಲಾ. 10 ಗಂಟೆಗೆ ವಿಯಾ ವಿತ್ತೋರಿಯೋ ವೆನೆತೋದಲ್ಲಿ ಇರುವ ಸ್ವಿಸ್ ಕಾನ್ಸುಲೇಟಿಗೆ ಹೋಗಿ ಅರ್ಧ ತಾಸಿನಲ್ಲಿ ವೀಸಾ ಪಡೆದೆ. ಬಾಸೆಲ್‌ನಲ್ಲಿ ನಡೆಯುವ ಸ್ವಿಸ್ ಔದ್ಯಮಿಕ ಪ್ರದರ್ಶನ ನೋಡಿ ಬನ್ನಿ ಎಂದು ಅಲ್ಲಿನ ಅಧಿಕಾರಿಣಿ ನಮಗಿಬ್ಬರಿಗೂ ಒಂದೊಂದು ದಪ್ಪವಾದ ದರ್ಶಿಕೆಯನ್ನು ಕೊಟ್ಟಳು.

## ಂ ಂ ದಕ್ಷಿಣಾಭಿಮುಖವಾಗಿ

ದಕ್ಷಿಣ ಭಾಗದ ಅಧ್ಯಯನ ಯಾತ್ರೆ ಹತ್ತು ದಿನಗಳ ಅವಧಿಯಲ್ಲಿ ಮುಕ್ತಾಯವಾಯಿತು. ನಾವು ಪ್ರವಾಸ ಮಾಡಿದ ಐದು ಪ್ರಾಂತಗಳ ಸರ್ಕಾರಿ ಮಂಡಲಕ್ಕೂ, ವಾಣಿಜ್ಯ ಸಂಘಗಳವರಿಗೂ ಇಷ್ಟೇ ಮೊದಲೇ ನಮ್ಮ ಆಗಮನದ ವಾರ್ತೆಯನ್ನು ತಿಳಿಸಿ ಯಾತ್ರೆಯ ರೂಪರೇಖೆಯನ್ನು ನಿಸ್ಸಂದೇಹವಾಗಿ ಚಿತ್ರಿಸಿಕೊಂಡಿತ್ತು. ಅವಧಿ ಸಾಲದೆಂದು ಸಿಸಿಲಿ ದ್ವೀಪ ವನ್ನು ಸೇರಿಸಿಕೊಂಡಿರಲಿಲ್ಲವೆಂದು ನಾನು ಭಾವಿಸಿದ್ದೇನೆ. ಡಾ. ಫೆರ್ರೊಲಾ ಗುಂಪಿನ ನಾಯಕ. ಅವನಿಗೆ ಸಹಾಯಕರಾಗಿ ಬೊನೆಯೋ ಮತ್ತು ಅನ್ನಾ. ನಾವು ನಾಲ್ವತ್ತು ಮಂದಿ ವಿದ್ಯಾರ್ಥಿಗಳು. ರಾತ್ರಿ ತಂಗುವ ಮತ್ತು ಊಟದ ವ್ಯವಸ್ಥೆ ಎಲ್ಲಾ ಪೂರ್ವನಿಶ್ಚಿತ. ನಾವು ಭೇಟಿಯಾದ ವಾಣಿಜ್ಯ, ಸಾಮಾಜಿಕ, ಆಡಳಿತ ಸಂಸ್ಥೆಗಳವರಿಗೂ ನಮಗೆ ಆತಿಥ್ಯ ನೀಡುವುದು ಮಹಾನಂದದ ಘಟನೆಯಾಗಿದ್ದಿರಬೇಕು. ತೆಂಕದ ದಾರಿಯಲ್ಲಿ ಇಷ್ಟು ಜನ ಅಂತರರಾಷ್ಟ್ರೀಯ ಅತಿಥಿಗಳು ಏಕಕಾಲಕ್ಕೆ ಪಯಣಿಸಿದ್ದು ಒಂದು ಅಪೂರ್ವ ಘಟನೆಯಾಗಿರಬಹುದೆ? ತಮ್ಮ ರಾಷ್ಟ್ರದ ಗೌರವಾನ್ವಿತ ಅತಿಥಿಗಳೆಂದು ನಮಗೆ ರಾಜೋಪಚಾರವನ್ನಿತ್ತು ಕಳುಹಿಸಿಕೊಟ್ಟ ತೆಂಕದ ಧುರೀಣರಿಗೂ ಸಂಘಗಳಿಗೂ ನಾವು ಕೃತಜ್ಞರು.

ನಾಪೊಲಿಯಿಂದ ಫೊಜಾ (Foggia)ಕ್ಕೆ ಒಂದು ಹಗಲಲ್ಲಿ ಮುಟ್ಟಿ ದೆವು. ದಾರಿಯಲ್ಲಿ ಬೀಟರೂಟಿನಿಂದ ಸಕ್ಕರೆ ತಯಾರಿಸುವ ಕಾರ್ಖಾನೆ ಯನ್ನು ನೋಡಿದೆವು. ಕಾರ್ಖಾನೆ ವರ್ಷದಲ್ಲಿ ಎರಡು ತಿಂಗಳು ಮಾತ್ರ ಸಕ್ಕರೆ ಉತ್ಪಾದನೆ ಮಾಡುವುದಂತೆ. ಚಳಿಗಾಲವಾದದ್ದರಿಂದ ನಾವು

ಹೋದಾಗ ಅದು ಉತ್ಪಾದಕ ಸ್ಥಿತಿಯಲ್ಲಿ ಇರಲಿಲ್ಲ. ಯಾವುದೋ ಅಣೆ ಕಟ್ಟಿನ ಜಾಗಕ್ಕೆ ಹೋಗಿ ಅಲ್ಲಿನ ಕೆಂಟೀನಿನಲ್ಲಿ ಶ್ರಮಜೀವಿಗಳ ಜತೆಗೆ ಕಾಫಿ-ಬೀರು ಕುಡಿದು ಬಸ್ಸು ಹತ್ತುವಾಗ ಕತ್ತಲಾಗಿತ್ತು. ಅದೇ ಕತ್ತಲಲ್ಲಿ ಮತ್ತೆ ಎರಡು ತಾಸು ಪಯಣಿಸಿ ಫೋಜಾನಗರವನ್ನು ಮುಟ್ಟಿದೆವು. ಫೋಜಾದಲ್ಲಿ ಬೆಳಗ್ಗೆ ನನಗೆ ಬಹಳ ಹೊತ್ತು ನಿದ್ದೆ ಬಂದಿರಬೇಕು. ಗಟ್ಟಿಯಾಗಿ ಫೋನ್ ಬಾರಿಸಿತು. ನನಗೆ ಗೊತ್ತಿರುವ ಇತಾಲಿಯನ್ 'ಬೊನ್‌ಜೊರ್ನೊ' ಎಂದೆ. ಏನೇನೋ ಆಚೆ ಕಡೆಯಿಂದ ಧ್ವನಿ ಕೇಳಿಸುತ್ತಿತ್ತು. ಯಾವುದೂ ನನಗೆ ಅರ್ಥವಾಗದೆ ಮತ್ತೆ ಮತ್ತೆ ಬೊನ್‌ಜೊರ್ನೊ ನುಡಿಸಿದೆ. ಅಲ್ಲಿಂದ 'ಸ್ವೆಲ್ಯಾರೆ' ಎನ್ನುವ ಒಂದು ಶಬ್ದ ಪದೇ ಪದೇ ಕೇಳಿ ಭಯವಾಯಿತು. ಅವನ ಏರು ದನಿ ಎಲ್ಲಿ ಮುಖ ತೊಳೆಯದೆ ಕೋಣೆ ಬಿಟ್ಟು ತೊಲಗು ಎನ್ನುತ್ತಾನೋ ಎಂಬಂತೆ ಕೇಳುತ್ತಿತ್ತು. ಆಮೇಲೆ ಫೆರೋಲನನ್ನು ಕೇಳಿದೆ. ಯಾರೋ ನನ್ನ ನಿದ್ರಾಭಂಗ ಮಾಡಿದರಲ್ಲಾ? ಎಂದೆ. 'ಹೌದು ನಾನೇ ಹೇಳಿದ್ದೆ, ಎಲ್ಲರನ್ನು ಎಬ್ಬಿಸಲಿಕ್ಕೆ.'

ಮುಂದಿನ ಮಜಲು ಬಾರಿ (Bari). ಇದು 'ಕಸ್ಸಾ' ಆರಿಸಿದ ಒಂದು ಪ್ರಾಮುಖ್ಯ ಅಭಿವೃದ್ಧಿ ಕೇಂದ್ರ. ಆಡ್ರಿಯಾಟಿಕ್ ಸಮುದ್ರತೀರದ ರೇವು ಪಟ್ಟಣ. ಇಲ್ಲಿ ದಿನವೆಲ್ಲ ನಮ್ಮ ಸಭೆಗಳು ಜರಗಿದುವು. ಮುಸುಲಿನಿಯ ಕಾಲದಲ್ಲಿ ಇಲ್ಲಿಯೂ ಒಂದು 'ಫೋಸ್ತ್ರ'—ಪ್ರದರ್ಶನ ಭವನ – ನಿರ್ಮಾಣ ವಾಗಿತ್ತು. ಬಾಲ್ಕನ್ ಪರ್ಯಾಯದ್ವೀಪ, ತುರ್ಕಿ, ಪಶ್ಚಿಮ ಏಶಿಯದ ರಾಷ್ಟ್ರಗಳು, ಐಗುಪ್ತ, ಸೊಮಾಲಿಯ ಮುಂತಾದ ದೇಶಗಳೊಡನೆ ವ್ಯಾಪಾರ ಸಂಪರ್ಕಕ್ಕೆ ಬಾರಿ ಪ್ರಶಸ್ತವಾದ ಸ್ಥಳ. ಮಧ್ಯಾಹ್ನ ಅಲ್ಲಿ ಚೇಂಬರ್ ಆಫ್ ಕಾಮರ್ಸಿನವರ ಆತಿಥ್ಯ ನಡೆಯಿತು. ಸಂಜೆಗೆ ಹೊರವಲ ಯದ ಪಿಸ್ಸನ್ ಕಾರ್ಖಾನೆಯಲ್ಲಿ ಆತಿಥ್ಯ. ಎರಡೆರಡು ಹೊತ್ತು ಗಡ ದ್ದಾಗಿ ಭೋಜನ ಮಾಡಿ ನಮ್ಮ ತಂಡದ ಸದಸ್ಯರು ಒಳ್ಳೇ ಉತ್ಸಾಹದ ಲ್ಲಿದ್ದರು. ಆವತ್ತು ರಾತ್ರಿ ನಮಗೆ ಸ್ವಾತಂತ್ರ್ಯ (ಲಿಬೇರೋ = 1300 ಲೀರೆ ಕೊಟ್ಟುಬಿಟ್ಟು ಎಲ್ಲಿ ಬೇಕಾದರೂ ಊಟ ಮಾಡಿ ಯಾ ಬಿಡಿ ಎನ್ನುವ ಇಷ್ಟೇ ಏರ್ಪಾಡು). ಈ ಸ್ವಾತಂತ್ರ್ಯವನ್ನು ಸಂಪೂರ್ಣವಾಗಿ ಎಲ್ಲರೂ ಉಪಯೋಗಿಸಿ ಹೋಟಲಿನ ಕೋಣೆ ತಲಪುವಾಗ ಎರಡು ಮೂರು ಗಂಟೆ

ಆಗಿರಬಹುದು. ಬಾರಿಯ ಕಡಲ್ಕರೆಯಲ್ಲಿ ರಾತ್ರಿ ಎಂಟು ಗಂಟೆಯ ಹೊತ್ತು ಸುಬ್ಬಯ್ಯ, ನಾನು ಅಲೆದಾಡುತ್ತಿದ್ದು ಯಾವುದೋ ರೆಸ್ಟುರಾದಲ್ಲಿ ಊಟದ ಶಾಸ್ತ್ರ ಮುಗಿಸಿ ಸುಮಾರು 11 ಗಂಟೆ ಹೊತ್ತಿಗೆ ನಮ್ಮ ನಿಯೋಜಿತ ಹೊಟೆಲಿಗೆ ತಲಪಿದೆವು. ಅಲ್ಲಿ ಬಾರಿನ ಕುರ್ಚಿಯಲ್ಲಿ ಜೋಲಿಫ್ ಕಿಂಗ್, ಸರ್ವೆಂಟಸ್, ಒಖೇಚಿ ಕೂತಿದ್ದರು. ಹಾದು ಹೋಗುತ್ತಿದ್ದ ನನ್ನನ್ನು ಹಿಡಿದೆಳೆದು ಎತ್ತರದ ಸುತ್ತು ಕುರ್ಚಿಯಲ್ಲಿ ಕುಳ್ಳಿರಿಸಿ 'ಹಾಂ, ತೆಕ್ಕೋ' ಅಂದರು. 'ನನಗೆ ಬೇಕಾದದ್ದು ಕೊಟ್ಟರೆ ತೆಕ್ಕೊಂಡೇನು' ಅಂದೆ. 'ಸರಿ, ಅದೇ ಆಗಲಿ' ಎಂದ ಕಿಂಗ್. ಅವರು ಪ್ರತಿ ಸಲ ಬೀರು ಗ್ಲಾಸು ಖಾಲಿ ಮಾಡಿ ಹೊಸ ಗ್ಲಾಸ್ ತುಂಬಿಸುವಾಗಲೂ ನಾನು ಕಾಫಿಗೆ ಆರ್ಡರು ಮಾಡಬೇಕು. ಹೀಗೆ ನಟ್ಟಿರುಳು ದಾಟಿ 1.30ರ ವರೆಗೆ ನಮ್ಮ ಪಾನಸಂಧಿ ನಡೆಯಿತು. ಬಾರಿನ ಹುಡುಗ ಬಾರು ಮುಚ್ಚಿದರೂ ನಮ್ಮ ಗೆಳೆಯರ ಉತ್ಸಾಹ ಕಡಮೆಯಾಗಿರಲಿಲ್ಲ. ಹೊಟೆಲ್ ಬಿಟ್ಟು ಹೊರ ನಡೆದು ಬೀರನ್ನು ಹುಡುಕಿಕೊಂಡು, ರೈಲ್ವೆ ಸ್ಟೇಶನ್ ಬಾರು ತೆರೆದಿರಬೇಕಲ್ಲಾ ಎಂದು ಆ ಕಡೆ ನಡೆದೆವು. ದಾರಿಯಲ್ಲಿ ಅವರೆಲ್ಲ ನಾಲ್ಕು ನಾಲ್ಕು ಸಲ ಬಾರಿಯ ಗೋಡೆಗಳನ್ನು ತೊಳೆದರು. ರೈಲ್ವೇ ಸ್ಟೇಶನ್ನಿನಲ್ಲಿ ಮತ್ತಷ್ಟು ಬೀರು ಹೀರಿ ಹೋಟೆಲಿಗೆ ಮರಳಿದಾಗ ಗಂಟೆ ಮೂರಾಗಿತ್ತು. ಕಿಂಗ್ ಮತ್ತು ಒಖೇಚೀ ಇದರ ನಡುವೆಯೂ ಆರ್ಥಿಕ ತತ್ವಗಳ ಕುರಿತು ಚರ್ಚೆ ನಡೆಸಿದರು; ಅವರ ಚರ್ಚೆ ತಲೆಕೆಳಗಾದಾಗ ಅದನ್ನು ಸರಿಪಡಿಸಿ ಜತೆಗೇ ಮಾಲುತ್ತಿರುವ ಅವರನ್ನೂ ಎದ್ದು ನಿಲ್ಲಿಸುವ ಜವಾಬುದಾರಿ ಕಾಫಿ ಕುಡುಕನಾದ ನನ್ನ ಪಾಲಿಗೆ ಬಿತ್ತು.

ಬಾರಿಯಿಂದ ಬ್ರಿಂದಿಸಿಗೆ (Brindisi) ಹೋಗುವ ದಾರಿಯಲ್ಲಿ ಒಂದು ಹಳ್ಳಿ ಬರುತ್ತದೆ. ಅಲ್ಲಿನ ಮನೆಗಳಿಗೆ ಶಿಖರಪ್ರಾಯವಾದ ಒಂದು ವಿಶಿಷ್ಟ ರೀತಿಯ ಕಲ್ಲಿನ ಮಾಡು ಹೊದೆಸಿರುತ್ತಾರೆ. ನೋಟಕ್ಕೆ ತುಳುನಾಡಿನ ರೈತರು ಕಟ್ಟುವ ತಿರಿ (ಕಣಜ)ಯಂತೆ ತೋರುವ ಈ 'ತ್ರುಲ್ಲಿ' ಆ ಊರಿನ ಗೃಹನಿರ್ಮಾಣದ ವೈಖರಿ. ನೂರಾರು ವರ್ಷಗಳಿಂದ ಬಂದ ಈ ನಿರ್ಮಾಣ ವೈಚಿತ್ರ್ಯವನ್ನು ಸ್ಥಿರಗೊಳಿಸಿ ಅದನ್ನೆ ಯಾತ್ರಿಕರಿಗೆ ತೋರಿಸುತ್ತಾರೆ. ಮನೆಯೊಳಗೆ ಹೋದರೆ ಪ್ರತಿ ಮನೆಯಲ್ಲೂ ಸೋವನೀರು ಕೊಳ್ಳಬೇಕೆಂಬ ಪ್ರಾರ್ಥನೆ. ಇನ್ನೊಂದು ಹಳ್ಳಿಯಲ್ಲಿ ವಿಲಕ್ಷಣವಾದ ಗುಹೆ

ಗಳಿದ್ದಾವೆ. ಯಾವುದೋ ಯುಗದಲ್ಲಿ ಇಲ್ಲಿಯ ವರೆಗೂ ಕಡಲು ಹರಡಿ ಕೊಂಡದ್ದಕ್ಕೆ ಸಾಕ್ಷಿಯಾಗಿ ಅಲಬಾಸ್ಟರಿನಲ್ಲಿ ಬಗೆಬಗೆಯ ರೂಪಗಳನ್ನು ಕೊರೆದು ನಿಲ್ಲಿಸಿದ ನಿಸರ್ಗ ನಿರ್ಮಿತ ವೈಚಿತ್ರ್ಯ ಪ್ರೇಕ್ಷಣೀಯವಾದದ್ದೇ ಸರಿ. ನೆಲದ ಮಟ್ಟದಿಂದ ನೂರಿನ್ನೂರು ಗಜ ಕೆಳಕ್ಕಿಳಿಯಲು ವಿದ್ಯುತ್ ಲಿಫ್ಟಿನ ಸೌಕರ್ಯ ಮಾಡಿದ್ದಾರೆ. ಗುಹೆಗಳ ಒಳಗಡೆ ವಿದ್ಯುದ್ದೀಪದ ವ್ಯವಸ್ಥೆಯನ್ನೂ ಜೋಡಿಸಿದ್ದಾರೆ. ನಿಸರ್ಗವೇ ಕಂಡರಿಸಿದ ಒಂಟೆ, ಕುದುರೆ, ಮುದುಕ ಮುಂತಾದ ಆಕೃತಿಗಳನ್ನು ದೀಪ ಎತ್ತಿ ನಿಮಗೆ ತೋರಿ ಸುತ್ತಾರೆ. ಮೇಲಕ್ಕೆ ಕೆಳಕ್ಕೆ ಕೊರಕಲು ದಾರಿಯಲ್ಲಿ ಈ ಅಲಬಾಸ್ಟರ್ ಆಕೃತಿಗಳ ಸಮೀಪದಲ್ಲಿ ಒಂದು ಫರ್ಲಾಂಗು ದೂರ ಸಂಚಾರ ಮಾಡ ಬಹುದು.

ಈ ಎರಡು ವಿಚಿತ್ರಗಳನ್ನು ನೋಡಿ ಬ್ರಿಂದಿಸಿ ಮುಟ್ಟುವಾಗ ಸರಿ ಯಾಗಿ ಐದು ಗಂಟೆ ಆಗಿತ್ತು. ನಮ್ಮ ವೇಳಾಪಟ್ಟಿಯಂತೆ ನಾವು ಅಷ್ಟು ಹೊತ್ತಿಗೆ ಬ್ರಿಂದಿಸಿಯ ಕ್ಷೇತ್ರಾಭಿವೃದ್ಧಿ ಮಂಡಳಿಯವರ ಜತೆ ಚರ್ಚೆಗೆ ಕೂಡ ಬೇಕಾಗಿತ್ತು. ಆದರೆ ಇನ್ನೂರು ಮೈಲು ಎಂಟು ತಾಸು ಪ್ರಯಾಣ ಮಾಡಿದ ಮೇಲೆ ಯಾರಿಗೂ ಈ ಸಭೆ ಇಷ್ಟವಿರಲಿಲ್ಲ. ಆದರೆ ಡೈರೆಕ್ಟರ್ ಜನ್ನಾರೋ ಅಲ್ಲಿ ನಮಗಾಗಿ ಕಾಯುತ್ತಿದ್ದರು. ಅವರು ಅಂದು ಮಧ್ಯಾಹ್ನ ವಿಮಾನದಲ್ಲಿ ಬಂದಿಳಿದಿದ್ದರು. ಅವರನ್ನು ಕಂಡ ಮೇಲೆ ತಪ್ಪಿಸಿಕೊಳ್ಳುವ ಮಾರ್ಗವೆಲ್ಲಿ? ಸಭ್ಯರಂತೆ ಸಭಾಭವನದಲ್ಲಿ ಉಪನ್ಯಾಸ, ಚರ್ಚೆ ಆರಂಭ ವಾಯಿತು. 'ಚೆನ್ನಾಗಿ ಪ್ರಶ್ನೆಗಳನ್ನು ಕೇಳಬೇಕು ನೀನು' ಎಂದು ಜನ್ನಾರೋ ಆಜ್ಞೆ ಆಯಿತು ನನಗೆ. ಏನೋ ಒಂದೆರಡು ಪ್ರಶ್ನೆ ಕೇಳಿ ಅವರ ಕಣ್ಣು ತಪ್ಪಿಸಿ ಬಾಗಿಲ ಸಂದಿನಿಂದ ಜಾರಿಕೊಂಡೆ. ಸಂಜೆ ಏಳಾಗಿತ್ತು. ರೆಸ್ಟುರಾಕ್ಕೆ ಹೋದೆ. ಬಿಸ್ಕತ್ತು ಕಾಫಿ ಮುಗಿಸಿದೆ. ಕಣ್ಣು ಎಲ್ಲೋ ಹೋಯಿತು; ಹಿಂದೆ ಬರುವುದಕ್ಕೆ ಕೇಳದು. ಅಂಥ ಸ್ತ್ರೀರೂಪ ಮೂಲೆಯ ಮೇಜೊಂದ ರಲ್ಲಿ ಒಬ್ಬ ಮುದುಕನ ಹತ್ತಿರ ಸಂಭಾಷಣೆ ಮಾಡುತ್ತ ಕೂತಿತ್ತು. ಮಾಟ ವಾದ ಮುಖ, ಮೈ, ಕಣ್ಣು, ಆಕೃತಿ ಇದು ಗ್ರೀಕ್ ಶಿಲ್ಪವೆಂದು – ಜೀವಂತ ಗ್ರೀಕ್ ಆಕೃತಿಯೆಂದು – ಸಾರಿ ಹೇಳುತ್ತಿತ್ತು. ಬ್ರಿಂದಿಸಿಯಿಂದ ಗ್ರೀಸ್‌ಗೆ ಹಡಗಿನಲ್ಲಿ ಒಂದು ದಿನದ ಹಾದಿ ಇರಬಹುದು. ದುಡ್ಡು, ಸ್ವಾತಂತ್ರ್ಯ ಇದ್ದಿದ್ದರೆ ಗ್ರೀಸ್ ನೋಡಬಹುದಾಗಿತ್ತು – ಎಥೆನ್ಸ್, ಪ್ಲೇಟೋ, ಸಾಕ್ರ

ಟಿಸ್, ಅರಿಸ್ಟಾಟ್ಲ್ ಇವರ ಬಗ್ಗೆ ಎಷ್ಟು ತಾಸು ಕ್ಲಾಸಿನಲ್ಲಿ ನಾನು ಉಪ ನ್ಯಾಸ ಮಾಡಿಲ್ಲ, ಅದೇ ಗ್ರೀಸ್ ಇಷ್ಟು ಸಮೀಪದಲ್ಲಿದೆ. ನಮ್ಮ ಮಾನಸಿಕ ಪ್ರಪಂಚದ ಅನಿವಾರ್ಯ ಘಟಕವಾಗಿರುವ ಗ್ರೀಸ್ ದೇಶವನ್ನು ಆ ಸ್ಫುರ ದ್ರೂಪಿ ಯುವತಿ ನನ್ನ ಜ್ಞಾಪಕಕ್ಕೆ ತಂದಳು. ಮರುದಿನ ಮುಂಜಾನೆ ರೋಮ್‌ನ ಸಾಮ್ರಾಜ್ಯದ ನೆನಪು ಹುಟ್ಟಿಸುವ ವಿಯಾ ಅಪ್ಪಿಯಿಂದ ಅಂತಿಮ ಸ್ತಂಭವನ್ನೂ ನೋಡಿದೆ. ಪೂರ್ವ ದೇಶಗಳಿಂದ – ಐಗುಪ್ತ ದಿಂದ ವಿಜಯದುಂದುಭಿ ಮೊಳಗಿಸಿ ಕ್ಲಿಯೊಪಾತ್ರಳನ್ನು ರೋಮಿಗೆ ಕರೆದುಕೊಂಡು ಬಂದ ಮಾರ್ಕ್ ಎಂಟೋನಿಯೋಸ ವೈಭವದ ಸ್ಮರಣೆ ಉಂಟಾಯಿತು. ಆ ದಿನವೆಲ್ಲ ಬ್ರಿಂದಿಸಿಯಲ್ಲೇ ಕಳೆದೆವು. ಅಲ್ಲಿನ ಔದ್ಯಮಿಕ ವಲಯವನ್ನು ಸಂದರ್ಶಿಸಿದೆವು. ಇತಾಲಿಯದ ಅತಿ ಪ್ರಖ್ಯಾತ ರಾಸಾಯ ನಿಕ ಕಂಪೆನಿ ಮೊಂತೆಕತೀನಿಯವರು ಅಲ್ಲಿ ಬೃಹತ್ ಸ್ಥಾವರವೊಂದನ್ನು ನಿರ್ಮಿಸುವುದನ್ನು ನೋಡಿದೆವು. ರಾಷ್ಟ್ರೀಕೃತ ತೈಲೋದ್ಯಮವಾಗಿರುವ 'ಏನಿ' ಕಾರ್ಖಾನೆಯಲ್ಲಿ ತಿರುಗಾಡಿದೆವು.

ಬ್ರಿಂದಿಸಿಯಿಂದ ತಾರಂತೊ (Taranto) ಔದ್ಯಮಿಕ ವಲಯಕ್ಕೆ ಬಂದು ಅಲ್ಲಿನ ವಾಣಿಜ್ಯ ಸಂಘಕ್ಕೆ ಭೆಟ್ಟಿ ನೀಡಿದೆವು. ಇಟಾಲ್‌ಸಿಡರ್ ನವರ ಭಾರೀ ಉಕ್ಕಿನ ಕಾರ್ಖಾನೆ ಇಲ್ಲಿ ನಿರ್ಮಾಣವಾಗುತ್ತ ಇದೆ. ದೊಡ್ಡ ಪ್ರಮಾಣದ ಉಕ್ಕಿನ ಪೈಪುಗಳದ್ದೇ ಒಂದು ಕಾರ್ಖಾನೆ ಈಗಾ ಗಲೇ ಕೆಲಸ ಮಾಡತೊಡಗಿದೆ. ತಾರಂತೊದಿಂದ ಕೊಸೆಂಜಾಕ್ಕೆ ಹೋಗುವ ದಾರಿ ಕರಾವಳಿಯ ದಾರಿ. ಅತಿ ಸುಂದರವಾದ ತಾರಂತೋ ಅಖಾತವನ್ನು ಸುತ್ತುವರಿಯುವ ಈ ಹಾದಿಯಲ್ಲಿ ಸಾಯಂಕಾಲ ನಮ್ಮ ಗುಂಪಿನ ಸಂಗೀತದ ಹುಚ್ಚು ಹೊಳೆ ಹರಿಯಿತು. ಅಲ್ಲಲ್ಲಿ ಬೇಸಾಯದ ಸುಧಾರ ಣೆಯ ಲಕ್ಷಣಗಳು ಕಂಡುಬರುತ್ತಿದ್ದವು. ಹೊಲದ ನಡುವೆ ಪಾಳುಗೋಡೆ ಕಮಾನು ಕೆಲವೆಡೆ, ಸ್ತಂಭರಾಜಿಗಳು ಇನ್ನೊಂದೆಡೆ ಪೂರ್ವಕಾಲದ ಗತ ವೈಭವವನ್ನು ನೆನಪಿಗೆ ತರುತ್ತಿದ್ದವು. ಒಂದು ಕಾಲಕ್ಕೆ ಬೃಹತ್ತರ ಗ್ರೀಸ್ (Magna Grecia) ಎನಿಸಿದ ಈ ಭೂಭಾಗ ಗ್ರೀಕರ ವಸತಿಯಾಗಿ ಉನ್ನತ ಜೀವನದ ಸವಿಯನ್ನು ಕಂಡಿತ್ತು. ಈಗಲೋ ಜನ ವಸತಿ ವಿರಳ, ಜೀವನೋಪಾಯ ಕಷ್ಟ. ಕೃಷಿ ಕ್ರಾಂತಿಯ ಅಂಗವಾಗಿ

ಸರ್ಕಾರ ರೂಪಿಸಿದ ಭೂಸುಧಾರಣೆ ಮತ್ತು ಭೂಸಹಾಯದ ದೆಸೆಯಿದ ಮರಳಿ ಈ ಪ್ರದೇಶ ಚೇತರಿಸಿಕೊಳ್ಳುವುದರಲ್ಲಿದೆ.

ನಾವು ಕೊಸೆಂಜಾಕ್ಕೆ (Cosenza) 6 ಗಂಟೆಗೇ ಬರಬೇಕಾಗಿತ್ತು. ಆದರೆ ಮುಟ್ಟಿದಾಗ ರಾತ್ರಿ 9 ಆಗಿಹೋಗಿತ್ತು. ಕೋಣೆ ಹುಡುಕಿ ನೇರ ವಾಗಿ ಊಟದ ಮೇಜಿಗೆ ಎಲ್ಲರೂ ಅಂಟಿಕೊಂಡರು. ಊಟ ಮುಗಿಯು ವಷ್ಟಕ್ಕೆ ಕೊಸೆಂಜದ ಪ್ರತಿಷ್ಠಿತರು ಬಂದು ಹೋಟೆಲಿನವನ ಹತ್ತಿರ ಜಗ ಳಕ್ಕೆ ನಿಂತರು. ವಾಸಕ್ಕೆ ಮಾತ್ರ ಆ ಹೋಟೆಲನ್ನು ಆರಿಸಿ ಅಂದಿನ ರಾತ್ರಿಯ ಊತಣ ಅವರ ಸಂಘದ ಮಾಳಿಗೆಯಲ್ಲಿ ನೆರವಿಸಿ ನಾವು ಬರುವುದನ್ನೇ ಆರು ಗಂಟೆಯಿಂದ ಕಾಯುತ್ತಿದ್ದರಂತೆ. ಹೊಟೆಲಿನ ಮಾಲಕನಿಗೆ ಬಂದ ಸುದ್ದಿ ಮುಟ್ಟಿಸಬೇಕೆಂದು ಹೇಳಿದ್ದರಂತೆ. ಆದರೆ ಆತ ಮಾತ್ರ ಲಾಭದ ದೃಷ್ಟಿಯಿಂದ ನಮ್ಮ ಆಗಮನದ ವಾರ್ತೆ ತಿಳಿಸದೆ ಅವರ ಏರ್ಪಾಟನ್ನೆಲ್ಲ ತಲೆಕೆಳಗು ಮಾಡಿದನಂತೆ. ಅಲ್ಲದೆ ಮೊದಲೇ ನಮ್ಮ ಸಂಸ್ಥೆಯ ಮುಖ್ಯಸ್ಥ ರಿಗೆ ತಿಳಿಸಿ ಕೊಟ್ಟ ಮಾತಿಗೆ ತಪ್ಪಿ ನಡೆದದ್ದಕ್ಕಾಗಿ ಕೊಸೆಂಜದ ಅಧ್ಯರು ನಮ್ಮ ಕ್ಷಮೆ ಕೇಳಿದ್ದು ಮಾತ್ರವಲ್ಲದೆ ಹೋಟೆಲಿನವನಿಂದಲೂ ಬಾಯಾರೆ ಕ್ಷಮೆ ಕೇಳಿಸಿದರು. ತೆಂಕ ಇತಾಲಿಯಾದ ಪ್ರಗತಿಗೆ ಬಾಧಕವೆಂದು ಸಮಾಜ ಶಾಸ್ತ್ರಜ್ಞರು ನಿರೂಪಿಸಿದ 'ಮನುಷ್ಯಸ್ವಭಾವ'ದ ತುಸು ಪರಿಚಯ ಕೊಸೆಂಜ ಪ್ರಸಂಗದಿಂದ ನಮಗಾಯಿತು.

ಕೊಸೆಂಜದಿಂದ ನಮ್ಮ ದಾರಿ ಸೀಲಾ ಪೀಠಭೂಮಿಯನ್ನು ಹಾದು ಹೋಗಬೇಕೆಂದು ನಿರ್ಣಯವಾಗಿತ್ತು. 'ಸೀಲ'ದಲ್ಲಿ ತೆಂಕದ ಅಭಿವೃದ್ಧಿಯ ಇನ್ನೊಂದು ಮುಖ ನಮಗೆ ನೋಡಲು ಸಿಕ್ಕಿತು. ಇಲ್ಲಿ ಹಾಲುಹೈನ, ಅರಣ್ಯನಿರ್ಮಾಣ ಮುಂತಾದ ಉದ್ಯೋಗಗಳಿಗೆ ಪ್ರಾಶಸ್ತ್ಯ ನೀಡಿದ್ದರು. ಇಟಾಲಿಯದ ಸ್ವಿಝರ್ಲೆಂಡ್ ಆಗಿ ಈ ಭಾಗವನ್ನು ಬೆಳೆಯಿಸುವ ಇಚ್ಛೆಯಿಂದ ಇಲ್ಲಿ ಪಶುಪಾಲನೆಗೆ ಪ್ರೋತ್ಸಾಹ. ಬೆಣ್ಣೆ ಗಿಣ್ಣು ತಯಾರಿಯ ಚಿಕ್ಕಪುಟ್ಟ ಕಾರ್ಖಾನೆಗಳು. ಆರ್ವೊ ಸರೋವರದ ತೀರದಲ್ಲಿ ಹೋಟೆಲ್ – ಮೋಟೆಲ್ ಕಟ್ಟಡಗಳು. ತೆಂಕ ಇತಾಲಿಯದ ಪ್ರಾಕೃತಿಕ ರಚನೆಯಲ್ಲಿ ಸೀಲದ ವೈಶಿಷ್ಟ್ಯವೆಂದರೆ ಅದೊಂದು ಪೀಠಭೂಮಿಯಾಗಿರುವುದು. ಸಾಮಾನ್ಯವಾಗಿ ಕಡಿದಾದ ಪ್ರಪಾತಗಳನ್ನೇ ನಿರ್ಮಿಸುವ ಸೃಷ್ಟಿಕರ್ತ ಸೀಲದಲ್ಲಿ ಒಂದಿಷ್ಟು ಸಮತಟ್ಟಾದ ಭೂಮಿಯನ್ನು ದಯಪಾಲಿಸಿದ್ದ.

ಈ ಸ್ವಾಭಾವಿಕ ನಿಸರ್ಗ ರಚನೆಗೆ ಅನುಕೂಲವಾದ ಉದ್ಯಮದ ಬೆಳವಣಿಗೆಯನ್ನೇ 'ಕಸ್ಸಾ' ಕೈಗೊಂಡಿದೆ. ಕೊಸೆಂಜದಿಂದ ಎರಡು ತಾಸಿನ ಹಾದಿಯಲ್ಲಿ ಒಂದು ಹೈಡಲ್ (ಜಲವಿದ್ಯುತ್) ಕೇಂದ್ರ ಸಿಗುತ್ತದೆ. ಅದನ್ನು ಪೂರ್ತಿ ಪ್ರದಕ್ಷಿಣೆ ಬಂದ ಮೇಲೆ ಒಳ್ಳೆಯ ಭೋಜನ ದೊರೆಯಿತು. ಶಾಕಾಹಾರಿಯಾದ ನನಗೆ ಪ್ರತ್ಯೇಕ ಉಪಚಾರ ನಡೆಯಿತು.

ಕತಂಜಾರೋ (Catanzaro) ಸುಂದರವಾದ ಪರ್ವತದ ಮೇಲೆ ನಿಂತಿರುವ ಸುಂದರತಮ ನಗರ... ಅಲ್ಲಿನ ಮೇಯರ್ ಮಹಾಶಯ ನಮ್ಮನ್ನು ಅರ್ಧ ಹಾದಿಯಲ್ಲೇ ಭೇಟಿಯಾಗಿ ಸ್ವಾಗತ ಕೋರಿದ್ದರು. ರಾತ್ರಿಯ ಭರ್ಜರಿ ಔತಣದ ಹೊತ್ತಿಗೆ ಜಗತ್ತಿನ ನಾನಾ ರಾಷ್ಟ್ರಗಳ ಪ್ರತಿನಿಧಿಗಳಾದ ನಮ್ಮನ್ನು ಒಟ್ಟಾಗಿ ದಿಟ್ಟಿಸಿ 'ವಿಶ್ವದ ಆರೋಗ್ಯ'ಕ್ಕಾಗಿ ವ್ಹಿಸ್ಕಿಯ ಬಿರಡೆಯನ್ನು ನಾಟಕೀಯವಾಗಿ ಹಾರಿಸಿ ಸ್ವಸ್ತಿವಾಚನ ಮಾಡಿದರು. ಊಟದ ಮಧ್ಯೆ ಕುಡಿದದ್ದೇ ಸಾಕು, ಅದರ ಮೇಲೆ ವಿಶ್ವದ ಆರೋಗ್ಯ ಬೇರೆ, ಇಸ್ವೇ ಆರೋಗ್ಯ ಬೇರೆ, ಡಾ. ಫರ್ರೋಲನ ಆರೋಗ್ಯ ಬೇರೆ, ಇತಾಲಿಯದ ಆರೋಗ್ಯ ಬೇರೆ – ಹೀಗೆ ಎಲ್ಲರ ಆರೋಗ್ಯವರ್ಧನೆಗಾಗಿ ನೆರೆದವರಲ್ಲಿ ಸ್ವಲ್ಪ ಸ್ವಲ್ಪವಾದರೂ ಕುಡಿದು ಅವರವರ ಆರೋಗ್ಯ ಅಂದಿನ ಮಟ್ಟಿಗೆ ಕೆಡಿಸಿಕೊಂಡರೆಂದು ನನಗನಿಸಿತು. ರಾತ್ರಿಯ ಹೊತ್ತು ಕತಂಜಾರೋದ ಬೀದಿಗಳನ್ನೂ, ಕಾರಂಜಿಗಳನ್ನೂ ನೋಡುತ್ತ ಸ್ವಲ್ಪ ಕಾಲ ಕಳೆದು ಸ್ವಸ್ಥವಾಗಿ ನಿದ್ರೆಹೋದೆವು. ನಾಳೆ ನಮ್ಮ ಬಸ್ಸು ಒಂದು ವಾರದ ಪ್ರವಾಸ – ಸಂದರ್ಶನದ ಪ್ರಯಾಸ ಮುಗಿಸಿ ನಾಪೊಲಿಗೆ ಮುಖಮಾಡಿ ಹೊರಡುತ್ತದೆಂಬ ಯೋಚನೆಯಲ್ಲೇ ಗಾಢ ನಿದ್ರೆಯಲ್ಲಿ ಮುಳುಗಿದೆವು. ಮುಂಜಾನೆ ಎದ್ದು ಹೋಟಲಿನ ಕಿಟಕಿಯಿಂದ ನೋಡಿದರೆ ನಮ್ಮನ್ನು ಆಕಾಶದಲ್ಲಿ ಏರಿಸಿ ನಿಲ್ಲಿಸಿದ ಹಾಗಿತ್ತು. ಸುತ್ತಲೂ ಆಳವಾದ ಕಣಿವೆ. ಕತಂಜಾರೋ ಬೆಟ್ಟದ ಕಣ್ಮಣಿ. ಒಂದು ಬೆಟ್ಟದಿಂದ ಇನ್ನೊಂದು ಬೆಟ್ಟಕ್ಕೆ ಬಲು ಎತ್ತರದ ಒಂದು ಸೇತುವೆ ನಿರ್ಮಾಣ ಮಾಡಿದ್ದಾರೆ. ತೀರ ಹಿಂದುಳಿದ ಭಾಗದ ಜನಸಾಮಾನ್ಯರಿಗೆ ಉತ್ತಮ ಜೀವನದ ಅರಿವನ್ನುಂಟುಮಾಡುವ ರಸ್ತೆಗಳು, ಡಿಪಾರ್ಟ್‌ಮೆಂಟ್ ಸ್ಟೋರುಗಳು, ಅಭಿವೃದ್ಧಿ ಕಾರ್ಯಕ್ರಮಗಳು ಇಲ್ಲಿ ನಡೆದ ಆರ್ಥಿಕ ಪರಿವರ್ತನೆಯನ್ನು ಸೂಚಿಸುತ್ತವೆ.

ಕತಂಜಾರೋ ಬೆಟ್ಟವನ್ನಿಳಿದು ಪಡುಕರಾವಳಿಯ ದಂಡೆಗುಂಟ ಹೊರಟೆವು. ಶ್ರೀಮತಿ ಅನಾ (ಆರ್ಜಂಟಿನಾ ರಾಷ್ಟ್ರೀಯಳು) ಅವಳ ಹಿರಿಯರು ಮೂರು ತಲೆಮಾರಿನ ಹಿಂದೆ ವಾಸಮಾಡಿದ ಹಳ್ಳಿಯ ಹತ್ತಿರ ಒಂದಷ್ಟು ಹೊತ್ತು ನಿಂತು ಬಸ್ಸು ಕ್ರೆಯ್ಯ ಆಮಾರೆ ಎಂಬ ಬೀಚಿನಲ್ಲಿ ಊಟಕ್ಕಾಗಿ ವಿರಮಿಸಿತು. ಅಲ್ಲಿನ ಮೊಟೆಲ್‌ನಲ್ಲಿ ಮಧ್ಯಾಹ್ನದ ಊಟ, ಬೀಚಿನ ಮರಳಿನಲ್ಲಿ ಆಟ, ಓಡಾಟ ಎಲ್ಲ ಮುಗಿಸಿ ಎರಡು ಗಂಟೆ ಹೊತ್ತಿಗೆ ಮತ್ತೆ ಬಸ್ಸು ಹೊರಟಿತು. ಬೆಟ್ಟದ ಸುತ್ತು ಹಾದಿಯಲ್ಲಿ ಬಸ್ಸಿಗೆ ಅಡ್ಡವಾಗಿ ಒಂದು ಲಾರಿ ಹೇಳದೆ ಕೇಳದೆ ಬಂದುಬಿಟ್ಟು, ಅದನ್ನು ತಪ್ಪಿಸಿಕೊಳ್ಳುವುದಕ್ಕಾಗಿ ಮಾಡಿದ ಪ್ರಯತ್ನದಲ್ಲಿ ಹೊರಕ್ಕೆ ಚಾಚಿದ್ದ ಉರುಟು ಕನ್ನಡಿ ಚೂರುಚೂರಾಗಿ ಬಸ್ಸೆಲ್ಲ ಹರಡಿತು. ಆ ಕನ್ನಡಿಗೆ ಸರಿ ಎದುರು ಬದರಾಗಿ ನಾನು ಕೂತಿದ್ದೆ; ಸೀಟಿನ ಮೇಲೆ ಮೊಣಕಾಲೂರಿ ಹಿಂದಕ್ಕೆ ಮುಖ ತಿರುಗಿಸಿ ಬಸ್ಸಿನ ಕಿಟಕಿಯ ಮುಖಾಂತರ ಫೋಟೋ ತೆಗೆಯುವ ಸಡಗರದಲ್ಲಿ ಇದ್ದ ನನಗೆ ಯಾವುದೂ ತಿಳಿದಿರಲಿಲ್ಲ; ಆದರೆ ನಾನು ಫೋಟೋ ತೆಗೆಯದೆ ಹೋಗಿದ್ದರೆ ಕಣ್ಣು ಉಳಿಯುತ್ತಿರಲಿಲ್ಲ; ಅಷ್ಟು ಗಾಜಿನ ಚೆಕ್ಕೆ ನನ್ನ ಹೆಡತಲೆಯ ಮೇಲೆ ಹಾರಿದ್ದವು.

ನಾಪೋಲಿಯನ್ನು ಮುಟ್ಟಿದಾಗ ಎಲ್ಲರೂ ಸೋತು ಸುಣ್ಣ. ಹತ್ತು ದಿನಗಳ ಪರಿಭ್ರಮಣ, ಮುಂಜಾನೆ ಎಂಟರಿಂದ ರಾತ್ರಿ ಎಂಟು ಗಂಟೆಯ ವರೆಗಿನ ಅವಿರತ ಸಭೆ, ಸಮಿತಿ, ಚರ್ಚೆ, ಸಂದರ್ಶನ, ಭೋಜನ– ಯೋಚನೆ ಮಾಡಲು ಅವಕಾಶವೇ ಇಲ್ಲದ ಈ ಸಂಚಾರ – ಇಷ್ಟು ಭೌಗೋಲಿಕ ದೂರದಿಂದ ಇಷ್ಟು ಸಮಯದ ಮೇರೆ ಸ್ಮರಣೆ ಮಾಡಿದರೆ ಒಂದು ಕನಸೇ ಎಂದೆನಿಸುತ್ತದೆ. ತೆಂಕ ಇತಾಲಿಯದ ಬಡತನವನ್ನು ತೋರಿಸಿ ನಮ್ಮನ್ನು ಚಕಿತರನ್ನಾಗಿ ಮಾಡುವುದು ಸಾಧ್ಯವಿರಲಿಲ್ಲ – ನಾವು ಅದಕ್ಕಿಂತಲೂ ಕಡುಬಡತನದ ಅನುಭವವುಳ್ಳವರಾದ್ದರಿಂದ. ಆದರೆ ದಾರಿದ್ರ್ಯ ನಿರ್ಮೂಲನದ ಸುಸಂಘಟಿತವೂ ಯೋಜನಾಬದ್ಧವೂ ಆದ ಪ್ರಾಮಾಣಿಕ ಪ್ರಯತ್ನ ಸಾಕಷ್ಟು ಆಶ್ಚರ್ಯಜನಕವಾಗಿತ್ತು.

## □ □ ಇತಾಲಿಯದ ಆರ್ಥಿಕ ಪವಾಡ

1952–'62 ಈ ಹತ್ತು ವರ್ಷಗಳಲ್ಲಿ ಇತಾಲಿಯದ ರಾಷ್ಟ್ರೀಯ ವರಮಾನ ವರ್ಷವೊಂದಕ್ಕೆ ಸರಾಸರಿ ಶೇಕಡಾ 5.8ರಂತೆ ಏರಿತು. ತಲಾ ಅನುಭೋಗ ಶೇಕಡಾ 50ರಂತೆ ವೃಟಿದರೆ ಇನ್ವೆಸ್ಟ್‌ಮೆಂಟು ಇಮ್ಮಡಿ ಯಾಗಿದೆ. ದೇಶದ ಆರ್ಥಿಕ ಸ್ಥಿತಿ ಈ ಹತ್ತು ಹನ್ನೆರಡು ವರ್ಷಗಳಲ್ಲಿ ಸುಭದ್ರವಾಗಿದೆ. ಕೃಷಿ ಮಂಡಲಕ್ಕೆ ಹೊರಗಡೆ ಉದ್ಯಮ, ವ್ಯಾಪಾರ, ವಾಣಿಜ್ಯ ಮತ್ತು ಇತರ ಸೇವಾಕ್ಷೇತ್ರಗಳಲ್ಲಿ 25–30 ಲಕ್ಷ ಹೊಸ ಉದ್ಯೋಗ ಹುಟ್ಟಿಕೊಂಡಿದೆ. ಶ್ರಮಜೀವಿಗಳ ತಾಂತ್ರಿಕ ನೈಪುಣ್ಯವನ್ನು ಹೆಚ್ಚಿಸಲು ಶಾಲೆಗಳೊ ತರಬೇತಿ ಕೇಂದ್ರಗಳೊ ತಲೆಯೆತ್ತಿವೆ. 'ದುಡಿಯು ವವರಿಗಾಗಿ ಕಲ್ಯಾಣ ಯೋಜನೆಗಳನ್ನು ಏರ್ಪಡಿಸುವುದು ನಾವು ತೋರಿ ಸುವ ರಿಯಾಯಿತಿ ಅಲ್ಲ, ಅದು ಅವರ ಜನ್ಮಸಿದ್ಧ ಹಕ್ಕಿನ ಬಳಕೆ' ಎಂದು ಫಿಯಟ್ ಕಂಪೆನಿ ಮುದ್ರಿಸಿದ ಒಂದು ಪುಸ್ತಕದಲ್ಲಿ ನಿರೂಪಿಸಲಾಗಿದೆ. ಇಂಥ ಶುಭಕರವಾದ, ಅಭೂತಪೂರ್ವವಾದ ಆರ್ಥಿಕ ಪ್ರಗತಿಯನ್ನು 'ಆರ್ಥಿಕ ಪವಾಡ'ವೆಂದು ಬಣ್ಣಿಸಿದ್ದಾರೆ. ಮೊದಲು ಜರ್ಮನಿಯಲ್ಲಿ ನಡೆದ ಪವಾಡ ಇತಾಲಿಯದಲ್ಲಿಯೂ ಸಾಧ್ಯವೆಂದು ದ್ವಾದಶ ವರ್ಷ (1950–'62)ದ ಆರ್ಥಿಕ ಇತಿಹಾಸ ಸಾರುತ್ತದೆ.

ತೆಂಕದ ಸ್ಥಾವರ ರಚನೆ, ಮತ್ತು ಯೋಜನಾತ್ಮಕ ಅಭಿವೃದ್ಧಿಗೆ ಈ 'ಪವಾಡ'ದಲ್ಲಿ ಯಾವ ಮಹತ್ವವೂ ಇರುವುದಿಲ್ಲ. ಅದಕ್ಕೆ ಕಾರಣ ಬಡಗಣ ಇತಾಲಿಯದ ಪ್ರಧಾನ ಔದ್ಯಮಿಕ ಕೇಂದ್ರಗಳ ಪ್ರಶಸ್ತ ಪರಿಸರದ ಲ್ಲಿರುವ ಅಪ್ರತಿಮ ಅನುಕೂಲತೆಗಳು. ಜನೋವ – ತೊರಿನೊ – ಮಿಲಾನೊ ಈ ಮೂರು ನಗರಗಳು ರಚಿಸಿದ ತ್ರಿಕೋಣದಲ್ಲಿ ನಿರ್ಮಿತ ವಾದ ಔದ್ಯಮಿಕ ನವೀಕರಣ ಮತ್ತು ಕ್ರಾಂತಿಯ ಸ್ಫೂರ್ತಿ 'ಪವಾಡ'ದ ಮೂಲ ಕಾರಣ. ಇತಾಲಿಯದಿಂದ ಉತ್ತರ ಯುರೋಪಿಗೆ ಕೆಲಸ ಹುಡುಕಿ ಕೊಂಡು ಹೋದವರನ್ನು ಸ್ವದೇಶಕ್ಕೆ ಮರಳುವಂತೆ ಬಡಗದ ಉದ್ಯಮ

ಗಳು ವಿನಂತಿಪತ್ರಗಳನ್ನು ಕಳಿಸಬೇಕಾಗಿ ಬಂದದ್ದು, ಇತಾಲಿಯದಲ್ಲಿ ನಿಮಗೆ ಕೆಲಸ ಇದೆ ಎನ್ನುವ ಪ್ರಚಾರ ಕೈಗೊಂಡದ್ದು ಪವಾಡದ ಒಂದು ವಿಶಿಷ್ಟ ಮುಖವೇ ಸರಿ. ಊರು ಬಿಟ್ಟು ಹೊರಡುವ ಉದ್ಯಮದಲ್ಲಿ ಯಶಸ್ವೀ ಪಾತ್ರ ವಹಿಸುತ್ತಿದ್ದ ಸಾವಿರಾರು ಇತಾಲಿಯನರು ಸ್ವದೇಶದ ಕರೆಯನ್ನು ಮನ್ನಿಸಿ ತೊರಿನೊ ಮಿಲಾನ್‌ಗಳಿಗೆ ಬರತೊಡಗಿದರು. ಇದೇ ಒಂದು ಪವಾಡ.

ಈ ಪವಾಡದಲ್ಲಿ ಪ್ರಮುಖ ಪಾತ್ರ ವಹಿಸಿದ್ದು ಇತಾಲಿಯನ್ ಸಾಹಸ (Enterprise) ಅರ್ಥಾತ್ ಸಾಹಸಿಗ ಮನುಷ್ಯರು. ಅವರ ಸಂಘಟನೆಯ ಚರಿತ್ರೆ ಹಿಂದುಳಿದ ದೇಶಗಳಿಗೆ ಆದರ್ಶ. ಪೆಟ್ರೋ ಕೆಮಿಕಲ್ ಉದ್ಯಮವೇ ಇಲ್ಲದ ಒಂದು ದೇಶದಲ್ಲಿ ಅದನ್ನು ಸ್ಥಾಪನೆಮಾಡಿ ವಿಚಿತ್ರ ವೇಗದಿಂದ ಬಡಾವಣೆ ಮಾಡುವುದರಲ್ಲಿ ಎನ್ರಿಕೋ ಮತ್ತೈಯಿ ಎಂಬೊಬ್ಬ ತರುಣನ ಸಾಹಸವನ್ನು ಅಲ್ಲಿ ಎಲ್ಲರೂ ಕೊಂಡಾಡುತ್ತಾರೆ. ಈಗ ಇತಾಲಿಯದಲ್ಲಿ 100 ಮಿಲಿಯ ಟನ್ ತೈಲ ಶುದ್ಧೀಕರಣ ಮಾಡುವ ಸಾಮರ್ಥ್ಯ ಬೆಳದಿದೆ. ನೈಸರ್ಗಿಕ ಗ್ಯಾಸ್ ಶೋಧನೆಯಾದ ಮೇಲೆ ಯುರೋಪ ಖಂಡಕ್ಕೇನೆ ಅತಿ ದೀರ್ಘವೆನಿಸುವ ಗ್ಯಾಸ್ ಕೊಳವೆಯನ್ನು ದೇಶ ನಿರ್ಮಾಣ ಮಾಡಿದೆ. ಫಿಯೆಟ್ ಕಂಪನಿಯ ಕಾರು, ಹಡಗ, ವಿಮಾನಗಳು ವಿಶ್ವದಲ್ಲೆಲ್ಲ ಓಡಾಡುತ್ತ ಹೆಸರು ಗಳಿಸಿವೆ. ರಶಿಯಾದಲ್ಲಿಯೂ ಫಿಯೆಟ್ ಕಾರಿನ ತಯಾರಿ ನಡೆಯುವಂತೆ ಒಡಂಬಡಿಕೆ ಆಗಿದೆ: 'ಒಲಿವೆತ್ತಿ' ಟೈಪರೈಟರ್ ಮತ್ತು ಲೆಕ್ಕಯಂತ್ರಗಳ ಪೈಪೋಟಿಯಲ್ಲಿ ಅಮೆರಿಕದ ಅಂಡರ್ವುಡ್ ಕಂಪೆನಿಯನ್ನು ಸೋಲಿಸಿ, ಬಗಲಿಗೆ ಹಾಕಿಕೊಂಡಿದೆ. ಗೃಹ ಕೃತ್ಯದ ವಿದ್ಯುತ್ ಉಪಕರಣ– ಮಿಕ್ಸರ್, ಫ್ರಿಜ್–ಇತ್ಯಾದಿಗಳಲ್ಲಿ ಇತಾಲಿಯನರು ಐರೋಪ್ಯ ಮಾರ್ಕೆಟಿನಲ್ಲಿ ದಾಳಿ ಇಟ್ಟ ಮೇಲೆ ಎಷ್ಟೋ ಪ್ರಖ್ಯಾತ ಕಂಪೆನಿಗಳು ಇತಾಲಿಯನ್ ಕಂಪೆನಿಗಳ ಜತೆ ಒಪ್ಪಂದ ಮಾಡಿಕೊಳ್ಳಬೇಕಾಯಿತು. ಯುದ್ಧದಲ್ಲಿ ಅತ್ತ ಜರ್ಮನರಿಂದಲೂ ಇತ್ತ ಮಿತ್ರರಾಷ್ಟ್ರಗಳಿಂದಲೂ ಜರ್ಜರಿತವಾಗಿ ನೆಲಹಿಡಿದಿದ್ದ ಒಂದು ದೇಶದ ಜನ ತಮ್ಮ ಉತ್ಸಾಹದಿಂದಲೂ, ಉದ್ಯಮಶೀಲತೆಯಿಂದಲೂ, ಸಂಘಟನಾಶಕ್ತಿಯಿಂದಲೂ ಇಷ್ಟು ಪ್ರೇಕ್ಷಣೀಯವಾಗಿ ಪ್ರಬಲರಾದ್ದು ನಿಜಕ್ಕೂ ಪವಾಡವೇ.

ಇತಾಲಿಯದ ರಾಜಕೀಯರಂಗ ಬಹಳ ಸಂಕೀರ್ಣ, ಕಂಟಕಾಕೀರ್ಣ.

ಪ್ರಜಾಪ್ರಭುತ್ವ ಅಲ್ಲಿ ಇನ್ನೂ ಒಂದು ಹೀಚು ಪ್ರಯೋಗ ಮಾತ್ರ. ಅದರಲ್ಲಿ ಫಾಸಿಸ್ಟ್ ಯುಗದ 20 ವರ್ಷ ಒಂದು ದುಃಸ್ವಪ್ನ – ದೇಶವನ್ನು ಪತನದ ಹಾದಿಗೊಯ್ದ ಸರ್ವಾಧಿಕಾರಿಯೊಬ್ಬನ ಸುದೀರ್ಘ ಕಾಟ. ಇದರ ನಡುವೆಯೂ ಇತಾಲಿಯದ ಜನ ಎಚ್ಚತ್ತಿದ್ದಾರೆ. ಪ್ರಾಯಃ ಯಾವ ಪಕ್ಷದ ಗುಲ್ಲು, ಘೋಷಣೆಯನ್ನೂ ನಂಬಲಾರದ ಇತಾಲಿಯನ್ ಪ್ರಜೆ ರಾಜಕೀಯದಲ್ಲಿ ಅನಿರೀಕ್ಷಿತ ಪ್ರಸಂಗಗಳನ್ನು ತನ್ನ ತಲೆಯ ಮೇಲೆ ಹೊರಿಸಿಕೊಂಡರೂ, ಆರ್ಥಿಕ ರಂಗದಲ್ಲಿ ಯೋಜನಾಪರವಶನಾಗಿಯೇ ಕೆಲಸ ಮಾಡುತ್ತಾನೆ. ಅಲ್ಲಿ ಅವನ ಸ್ವಭಾವ ಅಚಂಚಲ, ಸ್ಥಿರ; ಸರ್ಕಾರಿ ಕ್ಷೇತ್ರ, ಖಾಸಗೀ ಕ್ಷೇತ್ರಗಳ ಭೇದದ ಗೊಡವೆಗೆ ಆತ ಹೋಗುವುದಿಲ್ಲ. ಎರಡೂ ಕ್ಷೇತ್ರಗಳಲ್ಲಿ ಅವನ ದುಡಿಮೆ ಏಕರೂಪ. ಸಮಾನನಿಷ್ಠೆಯಿಂದ ದುಡಿಯುವ ಅಧಿಕಾರಿವರ್ಗ ಅಲ್ಲೂ, ಇಲ್ಲೂ. ಭಾರತದ ಸರ್ಕಾರಿ ಕಾರ್ಯ ಕ್ಷೇತ್ರದ ಅಧಿಕಾರಸಂಪನ್ನರ ಸ್ವಾರ್ಥಪರಾಯಣತೆ, ಅದಕ್ಷತೆ, ಭ್ರಷ್ಟಾಚಾರಗಳ ಇತಿಹಾಸವನ್ನು ಕೇಳಿ ಕೇಳಿ ಸಾಕಾದ ನನಗೆ ಇತಾಲಿಯದ ಸರ್ಕಾರಿ ಕ್ಷೇತ್ರದ ಅಧಿಕಾರಿಗಳ ದೇಶಪ್ರೇಮ, ತಾದಾತ್ಮ್ಯ, ಉತ್ಸಾಹ ವೈಶಿಷ್ಟ್ಯಪೂರ್ಣವಾಗಿ ಕಂಡದ್ದುಂಟು. ಇದಕ್ಕೆ ಯುದ್ಧವೂ ಒಂದು ರೀತಿಯಲ್ಲಿ ಸಹಾಯ ಮಾಡಿದೆ. ಹಳಬರೆಲ್ಲ ಯುದ್ಧದಲ್ಲಿ ಸತ್ತ ಮೇಲೆ ತರುಣರದೇ ಮೇಲುಗೈ ಆಯಿತು. ಭಾರತದಂತೆ ಆರ್ಥಿಕ ಸಂಸ್ಥೆಗಳಲ್ಲಿ, ಯೋಜನಾ ರಂಗದಲ್ಲಿ – ಹಳಬರ 'ಅನುಭವ'ದ ಒಜ್ಜೆ ಇಲ್ಲದಿರುವುದರಿಂದ ತರುಣ ಸಾಹಸಿಗಳು ಸ್ವತಂತ್ರವಾಗಿ ಧೋರಣೆ ರೂಪಿಸಿಕೊಳ್ಳಲು ಅನುಕೂಲವಾಯಿತು. ಇತಾಲಿಯದ ಅತಿ ದೊಡ್ಡ ಸರಕಾರಿ ಹೊಲ್ಡಿಂಗ್ ಕಂಪೆನಿಯ ವರಿಷ್ಠನನ್ನು ರೋಮ್ ನಗರದ ಅವರ ಕೇಂದ್ರ ಕಚೇರಿಯಲ್ಲಿ ನಾವು ಭೆಟ್ಟಿಯಾಗಬೇಕಾಗಿತ್ತು. ನಾವೆಲ್ಲ ಆಸೀನರಾಗಿ ಅವನ ಆಗಮನವನ್ನೇ ಕಾಯುತ್ತಿದ್ದೆವು. ಪಕ್ಕದ ಬಾಗಿಲು ತೆರೆದು ಒಬ್ಬ 40 ವರ್ಷದ ತರುಣ ಪ್ರವೇಶ ಮಾಡಿದ. ಈತ ಕಾರ್ಯದರ್ಶಿ ಇರಬೇಕು, ಇನ್ನೇನು ನರೆಗೂದಲಿನ ಯಾರೋ ಸ್ಥೂಲಕಾಯ, ಅತಿಕಾಯ ಬರುತ್ತಾನೆ ಎಂದು ನಾವು ನಿರೀಕ್ಷೆ ಮಾಡುತ್ತಿದ್ದಂತೆ ಈತನೇ ಬಿಲಿಯಗಟ್ಟಲೆ ವ್ಯವಹಾರ ಮಾಡುವ 130 ಉಪ ಕಂಪೆನಿಗಳ ಸಂಘಕ್ಕೆ ಒಡೆಯನೆಂದು ಪರಿಚಯ ಪ್ರಕರಣ ಆರಂಭವಾಯಿತು.

ತಾರುಣ್ಯದ ಉತ್ಸಾಹಕ್ಕೆ ಅನುಭವದ ಭಾರಕ್ಕಿಂತ ಹೆಚ್ಚು ಗಮನ ಕೊಟ್ಟದ್ದರಿಂದಲೂ, ಅಮೆರಿಕದ ಸಂಘಟನೆಯ ಮೇಲ್ಪಂಕ್ತಿ ಅನುಸರಿಸಿದ್ದ ಸಿದ್ದರಿಂದಲೂ, ಸುಲಭ ದರಕ್ಕೆ–1962ರ ವರೆಗಂತೂ ಈ ಮಾತು ನಿಜ–ಕೂಲಿಕಾರರು ದೊರಕಿದ್ದರಿಂದಲೂ ಇತಾಲಿಯನ್ ಉದ್ಯಮಕ್ಕೆ ಇತರ ಐರೋಪ್ಯ ದೇಶಗಳಿಗಿಂತಲೂ ಕಡಮೆ ವೆಚ್ಚದಲ್ಲಿ ಸರಕನ್ನು ಉತ್ಪಾದಿಸಲು ಶಕ್ಯವಾಯಿತು. ಆದ್ದರಿಂದ ಅಂತಾರಾಷ್ಟ್ರೀಯ ಮಾರುಕಟ್ಟೆಯಲ್ಲಿ ಮುಖ್ಯವಾಗಿ ಐರೋಪ್ಯ ಕಾಮನ್ ಮಾರ್ಕೆಟ್' ದೇಶಗಳಲ್ಲಿ ಇತಾಲಿಯನ್ ಸರಕುಗಳು ಸ್ಥಾನವನ್ನು ಭದ್ರಗೊಳಿಸಿಕೊಂಡವು. ಕೆಲವೊಂದು ಸರಕುಗಳಂತೂ ಇತರ ತಯಾರಿಗಳನ್ನು ಮಾರ್ಕೆಟಿನಿಂದ ಗುಡಿಸಿ ಓಡಿಸಿ ಬಿಡುವಷ್ಟು ಅಗ್ಗ ಬೆಲೆ ಸಾಧಿಸಿದುವು.

## □ □ ಸರ್ಕಾರೀ ಕ್ಷೇತ್ರ

ರೈಲ್ವೆ, ಪೋಸ್ಟಾಫೀಸ್, ಹೈವೇ, ಅರಣ್ಯ–ಇವು ಸ್ವಾಯತ್ತ ರಾಷ್ಟ್ರೀಕೃತ ಕಾರ್ಪೊರೇಶನ್‌ಗಳು. ಬಾಳೆಹಣ್ಣಿನ ರಾಷ್ಟ್ರೀಕರಣ ಇತಾಲಿಯದ ಒಂದು ವೈಶಿಷ್ಟ್ಯ. ತನ್ನ ಹಿಂದಿನ ವಸಾಹತುಗಳಾದ ಆಫ್ರಿಕದ ಕೆಲ ದೇಶಗಳಿಂದ ಮಾತ್ರವೇ ಬಾಳೆಹಣ್ಣು ತರಿಸಿಕೊಳ್ಳುವುದರಿಂದ ಬಾಳೆ ಹಣ್ಣಿನ ಬೆಲೆ ದುಬಾರಿಯಾದರೂ ಆ ವಸಾಹತುಗಳ ಹಿತಸಾಧನೆಗಾಗಿ ಏಕಸ್ವಾಮ್ಯ ಅಗತ್ಯವೆನಿಸಿದೆ. ಎಷ್ಟೋ ಖಾಸಗಿ ಕಂಪೆನಿಗಳಲ್ಲಿ ರಾಷ್ಟ್ರಕ್ಕೆ ಶೇರುಗಳಿವೆ; ಶೇರು ಒಡೆತನದ ಮೂಲಕ ಸರ್ಕಾರಕ್ಕೆ ಸರಿ ಕಂಡ ಧೋರಣೆಯನ್ನು ಈ ಕಂಪೆನಿಗಳ ಮೇಲೆ ಹೊರಿಸಬಹುದು. ಆದರೆ ಆಧುನಿಕ ಇತಾಲಿಯದ ಸರ್ಕಾರಿ ಕ್ಷೇತ್ರದ ಪ್ರಮುಖ ಸಂಸ್ಥೆಗಳೆಂದರೆ 'ಈರಿ' (Iri) ಮತ್ತು 'ಏನಿ'. ಔದ್ಯಮಿಕ ಪುನಾರಚನೆಯ ಸಂಸ್ಥೆ ಎಂಬುದರ ಹ್ರಸ್ವ ನಾಮವೇ 'ಈರಿ'; ರಾಷ್ಟ್ರೀಯ ಖನಿಜ ತೈಲದ ಘಟಕವೇ 'ಏನಿ'. ಈ ಎರಡು ಸಂಸ್ಥೆಗಳಿಗೂ ಆದರದರ ಇತಿಹಾಸವುಂಟು. ಆದರೆ ಇತಿಹಾಸಕ್ಕಿಂತ ಸ್ವಾರಸ್ಯದಾದದ್ದು ಅವುಗಳ ವರ್ತಮಾನ ಮತ್ತು ಭವಿಷ್ಯ. ಹೆಚ್ಚು ಕಡಮೆ ಇತಾಲಿಯನ್ ಖಾಸಗೀ ಕ್ಷೇತ್ರದ ಭವಿಷ್ಯವೂ ಅವುಗಳ ಒಲವು ನಿಲವನ್ನು ಹೊಂದಿರುವುದರಿಂದ ಅವನ್ನು ಸ್ವಲ್ಪ ವಿವರವಾಗಿ ವರ್ಣಿಸಬೇಕು.

1934–'36ರಲ್ಲಿ ಇತಾಲಿಯದ ಮೂರು ಮುಖ್ಯ ಬ್ಯಾಂಕುಗಳು ದಿವಾಳಿಹೋಗುವ ಹೊತ್ತು ಬಂದಾಗ ಮುಸಲಿನಿ ಅವುಗಳ ಲಾಭ ನಷ್ಟ ವನ್ನು ವಹಿಸಿಕೊಂಡು ನಡೆಸಲು ಸರ್ಕಾರದ ಒಂದು ಕಂಪನಿಯನ್ನು ರಚಿಸಿ ಸಿದ. ದಿವಾಳಿಹೊರಟ ಬ್ಯಾಂಕುಗಳ ಲೇಣದೇಣ ವ್ಯವಹಾರವನ್ನು ಸ್ತಿಮಿ ತಕ್ಕೆ ತರುವುದಕ್ಕೆಂದೇ ನಿಯುಕ್ತವಾದ 'ಈರಿ' ಕಾಲಕ್ರಮೇಣ ಬಟ್ಟೆ, ಗೃಹನಿರ್ಮಾಣ, ಪರದೇಶೀ ಉದ್ಯಮಗಳಲ್ಲಿಯೂ ಶೇರು ಪಡೆದು ಸ್ವಂತ ವ್ಯವಹಾರ ಆರಂಭ ಮಾಡಿತು. 1962ರ ಸುಮಾರಿಗೆ ವಿದ್ಯುತ್ತು, ಟೆಲಿಫೋನ್, ಸಮುದ್ರ ಸಾರಿಗೆ, ಉಕ್ಕು ಮತ್ತು ಇಂಜಿನಿಯರಿಂಗ್ ಕ್ಷೇತ್ರದ 130 ಕಂಪೆನಿಗಳಲ್ಲಿ ಈರಿ ನಿಯಂತ್ರಿಸುವ ಬಂಡವಾಳದ ಮೊತ್ತ 600 ಮಿಲಿಯಾರ್ಡ್ ಲೀರೆಗೂ ಮಿಕ್ಕಿದೆ. ಈರಿ ಗುಂಪಿನ ಉದ್ಯೋಗಿಗಳ ಸಂಖ್ಯೆ ಮೂರು ಲಕ್ಷ ಮುಟ್ಟಿದೆ. ಇತಾಲಿಯದ ಉಕ್ಕಿನ ಉತ್ಪಾದನೆ ಯಲ್ಲಿ ಅರ್ಧಾಂಶ, ವ್ಯಾಪಾರಿ ಹಡಗು ಸಾರಿಗೆಯ 20%, ಹಡಗು ತಯಾರಿಯಲ್ಲಿ 80%, ವಿದ್ಯುಚ್ಛಕ್ತಿ ಉತ್ಪಾದನೆಯಲ್ಲಿ 25%, ಟೆಲಿ ಫೋನ್, ಟೆಲಿವಿಶನ್, ಆಕಾಶವಾಣಿ, ಆಕಾಶಯಾನ (100%) – ಇಷ್ಟ ರಲ್ಲಿ 'ಈರಿ' ಪ್ರವರ್ತಿಸುತ್ತಿದೆ. ಪ್ರತಿನಿತ್ಯ 'ಈರಿ' ಕಂಪನಿಗಳ ಮಾರಾಟದ ಮೌಲ್ಯ 4 ಬಿಲಿಯ ಲೀರೆ. ಕಾಮನ್ ಮಾರ್ಕೆಟ್ ದೇಶಗಳಲ್ಲಿ ಈ ಸಂಸ್ಥೆಗೆ ನಾಲ್ಕನೆಯ ಸ್ಥಾನ ಲಭಿಸಿದೆ.

'ಎಡ' ರಾಜಕೀಯವನ್ನು ಜನಾಭಿಪ್ರಾಯದಲ್ಲಿಯೂ, ಮತದಾರರ ಬೆಂಬಲದಲ್ಲಿಯೂ, ಪಾರ್ಲಿಮೆಂಟಿನ ಪ್ರಾತಿನಿಧ್ಯದಲ್ಲಿಯೂ ಬಿಂಬಿಸುತ್ತಿ ರುವ ಇತಾಲಿಯದ 'ಈರಿ'ಗೆ ಖಾಸಗಿ ಕಂಪೆನಿಯಂತೆಯೇ ವ್ಯವಹರಿಸುವ ಸ್ವಾತಂತ್ರ್ಯ ದೊರಕಿದೆ. 'ಈರಿ' ಸಾರ್ವಜನಿಕ ಕ್ಷೇತ್ರಕ್ಕೆ ಸಂಬಂಧಿಸಿದ ಸಂಸ್ಥೆ ನಿಜ; ಆದರೆ ಅದಕ್ಕೆ ಅಧೀನವಾದ ಸಂಸ್ಥೆಗಳೆಲ್ಲ ಕೂಡುಬಂಡವಾಳದ ಖಾಸಗೀ ಸಂಸ್ಥೆಗಳ ಕಾಯಿದೆಯಂತೆ ಸಂಘಟಿಸಲ್ಪಟ್ಟಿವೆ. ಅಂದರೆ ಲಾಭ ಗಿಟ್ಟಿಸುವುದು ಅವುಗಳ ಕರ್ತವ್ಯ. ಆಂತರಿಕ ಧೋರಣೆಯಲ್ಲಿ ಅವು ತಂತಮ್ಮ ಖಯಾಲಿಯಂತೆ ನಡೆಯಬಹುದು. ಒಟ್ಟಂದದಲ್ಲಿ ಮಾತ್ರ ಈರಿಯ ನಿಯಂತ್ರಿತ ವ್ಯವಸ್ಥೆಯನ್ನು ಅವು ಒಪ್ಪಿಕೊಳ್ಳಬೇಕು. ಶೇರು ದಾರರಿಗೆ ಹೊಣೆಯಾಗಿರುವುದರಿಂದ ಅಧೀನ ಕಂಪೆನಿಗಳು ಸದಾ ಜಾಗ್ರತ ವಾಗಿರಬೇಕಾಗುತ್ತದೆ. ಎಲ್ಲಾ ಕಂಪೆನಿಗಳೂ ಸ್ವಾಯತ್ತ ಆಡಳಿತವನ್ನು

ಹೊಂದಿ ಕಾರ್ಯ ಮಾಡಿ ಲಾಭ ಗಳಿಸುವುದರಿಂದಲೂ, ಅನೇಕ ವಿಧವಾದ ಉದ್ಯಮಗಳಲ್ಲಿ ಈರಿ ಹಣವೇರ್ಪಡಿಸಿರುವುದರಿಂದಲೂ. ಐರೋಪ್ಯ ಹಣದ ಪೇಟೆಯಲ್ಲಿ ಈರಿಗೆ ಒಳ್ಳೆಯ ಹೆಸರಿದೆ. ಭಾರತದಂತೆ ತೆರಿಗೆ ಯಿಂದಲೂ, ಸಾಲದಿಂದಲೂ ಎತ್ತಿದ ಹಣವನ್ನೆಲ್ಲ ಸರ್ಕಾರಿ ಉದ್ದಿಮೆ ದಾರರ ವಶ ಕೊಟ್ಟಾಗ ಅವರು ಅಸಲನ್ನೂ – ಬಡ್ಡಿಯನ್ನೂ ಜತೆಜತೆ ಯಾಗಿ ಮುಳುಗಿಸುವ ಸಾಮಾನ್ಯ ನೋಟ ಇತಾಲಿಯದಲ್ಲಿ ಕಾಣುವು ದಿಲ್ಲ. ಈರಿಯ ಪ್ರತಿ ಹತ್ತು ಲೀರೆ ಬಂಡವಾಳದಲ್ಲಿ 9 ಖಾಸಗೀ ಹಣದ ಪೇಟೆಯಿಂದ ಎತ್ತುಗಡೆಯಾದದ್ದು; 1 ಲೀರೆ ಸರ್ಕಾರದ ಖಜಾನೆಯಿಂದ ಒದಗಣೆ ಆದದ್ದು.

ತೆಂಕ ಇತಾಲಿಯದ ಅಭಿವೃದ್ಧಿಯಲ್ಲಿ 'ಈರಿ' ತನ್ನ ಅನುಭವವನ್ನು ಸಂಪೂರ್ಣ ಧಾರೆ ಎರೆಯಿತು. ನಾನಾ ತೆರನ ಉದ್ಯಮಗಳ ಲಾಭಾ ಲಾಭಗಳನ್ನೂ, ಇಷ್ಟಾನಿಷ್ಟಗಳನ್ನೂ ಬಲ್ಲ ಒಂದು ಸಂಸ್ಥೆ ತೆಂಕದ ಸನ್ನಿವೇಶ ದಲ್ಲಿ ಪ್ರವರ್ತಿಸಲು ಅಗತ್ಯವಾಗಿತ್ತು. ಅಲ್ಲಿಯೂ 'ಈರಿ' ಧುರೀಣತ್ವ ವನ್ನು ವಹಿಸಿ, ಎಂತೆಂಥ ದೊಡ್ಡ ಖಾಸಗೀ ಉದ್ದಿಮೆದಾರರನ್ನು ತನ್ನ ವರ್ಚಸ್ಸಿನ ಬಲದಿಂದ ದಕ್ಷಿಣಾಭಿಮುಖವಾಗಿ ಅಟ್ಟಿತು.

1959ರಲ್ಲಿ 'ಈರಿ' ವಶದಲ್ಲಿರುವ ಬಂಡವಾಳದ ವಿಂಗಡಣೆ ಹೀಗಿದೆ:

| ಉದ್ಯಮ | ಮಿಲಿಯಾರ್ಡ್ ಲೀರೆ |
|---|---|
| ಬ್ಯಾಂಕಿಂಗ್ ... | 28.0 |
| ವಿದ್ಯುತ್ ... | 77.9 |
| ಟೆಲಿಫೋನ್ ... | 99.1 |
| ರೇಡಿಯೋ ಟೆಲಿವಿಷನ್ ... | 6.3 |
| ಹಡಗು ಸಾರಿಗೆ – ತಯಾರಿ ... | 35.2 |
| ವಿಮಾನ ಯಾನ ... | 18.4 |
| ಉಕ್ಕು ... | 91.2 |
| ಖನಿಜಗಳು ಮತ್ತು ರಾಸಾಯನಿಕಗಳು ... | 28.9 |

| | | |
|---|---|---|
| ಆಟೋಸ್ಕಾದ | ... | 40.1 |
| ಇತರ | ... | 12.7 |
| | | 437.8 |
| ಇಂಜಿನೀರಿಂಗ್ | ... | 149.5 |
| | | 587.3 |

'ಏನಿ' ಕೂಡ 'ಈರಿ'ಯಂತೆಯೆ ಹಳೇ ಒಂದು ಸಂಸ್ಥೆಯ ಸ್ಥಾನದಲ್ಲಿ ಕಾರ್ಯಾರಂಭ ಮಾಡಿತು. ಪೋ ನದಿಯ ಕಣಿವೆಯಲ್ಲಿ ಖನಿಜ ತೈಲದ ಶೋಧನೆಗಾಗಿ 1926ರಲ್ಲಿ ಸಂಘಟಿತವಾದ ಆಜಿಪ್ (Agip) ಕಂಪೆನಿಯ ಹೆಸರು ಈಗ ಇತಾಲಿಯದ ಪೆಟ್ರೋಲ್ ಬಂಕ್‌ಗಳಲ್ಲಿ ಮಾತ್ರ ಕಂಡುಬರುತ್ತಿದೆ. ವಿತರಣೆ ಹೊರತು ಇತರ ಆಜಿಪ್ ಕಾರ್ಯಭಾರವನ್ನೆಲ್ಲ 'ಏನಿ' ವಹಿಸಿಕೊಂಡುಬಿಟ್ಟಿದೆ. ಇತಾಲಿಯದ ಅಗ್ನಿಶಕ್ತಿಯ 60% 'ಏನಿ'ಯ ಕೊಡುಗೆ. 'ಏನಿ' ಇತಾಲಿಯದಲ್ಲಿ ಮಾತ್ರವಲ್ಲದೆ ಆಫ್ರಿಕ ಮತ್ತು ಏಶಿಯದ ದೇಶಗಳಲ್ಲಿಯೂ ಖನಿಜತೈಲ ಶೋಧದಲ್ಲಿ ಪ್ರಮುಖ ಪಾತ್ರ ವಹಿಸಿದೆ. ನಮ್ಮ ಅಸ್ಸಾಮಿನ ನಹಾರ್‌ಕಟಿಯಾ ತೈಲಶೋಧನೆಗೆ 'ಏನಿ' ನೆರವು ನೀಡಿದ್ದನ್ನು ಇಲ್ಲಿ ಸ್ಮರಿಸಬೇಕು. ಎನ್ರಿಕೋ ಮತ್ತೇಯಿ ಒಬ್ಬ ಅಸಾಧಾರಣ ಸಾಹಸಿ. ಉತ್ತರ ಆಫ್ರಿಕ, ಸುಡಾನ್, ಇರಾಣಗಳಲ್ಲಿ ಹಿಂದಿನಿಂದಲೂ ಪಟ್ಟಭದ್ರವಾದ ಬೃಹತ್ ಅಮೆರಿಕನ್ – ಬ್ರಿಟಿಷ್ – ಡಚ್ ತೈಲ ಕಂಪೆನಿಗಳ ಹತ್ತಿರ ಧೀರ ಮತ್ತೇಯಿ ಗುದ್ದಾಟಕ್ಕೆ ನಿಂತ. ಮತ್ತೇಯಿ ಎಂದರೆ ಅವರಿಗೊಂದು ಸಿಂಹಸ್ವಪ್ನವಾಗುವಂತೆ ಕೆಲವರ್ಷ ಹೋರಾಡಿದ. ರಶಿಯಾದಿಂದಲೂ ಕಚ್ಚಾ ತೈಲ ಆಮದು ಮಾಡುವ ಒಪ್ಪಂದಕ್ಕೆ ಸಹಿ ಹಾಕಿ ಸರ್ಕಾರದ ಅವಕೃಪೆಗೆ ಪಾತ್ರನಾದ. ಆದರೂ ಹೊಂಚುಹಾಕಿ ವ್ಯಾಪಾರ ಕುದುರಿಸುವಲ್ಲಿ, ಲಾಭದಾಯಕವಾದ ನಿರ್ಣಯಗಳನ್ನು ಕೈಗೊಳ್ಳುವಲ್ಲಿ ಮತ್ತೇಯಿ ಅಳಿಯಲಾರದ ಹೆಸರನ್ನು ಬಿಟ್ಟುಹೋದ. ದುರ್ದೈವವಶಾತ್ ಎಳವೆಯಲ್ಲೇ ವಿಮಾನ ಅಪಘಾತದಲ್ಲಿ ತೀರಿಕೊಂಡ ಈ ಔದ್ಯಮಿಕ ವೀರನ ಹೆಸರು ಅಲ್ಲಿ ಈಗ ಮಸಕಾಗಿದೆಯಾದರೂ ಆಜಿಪ್ ಪೆಟ್ರೋಲ್

ಬಂಕಿನಲ್ಲಿ ಹೊಳೆಯುವ ಷಟ್ಪದಿಶ್ವಾನದ ಚಿತ್ರದ ಹಿಂದೆ ಮತ್ತೇಯಿಯ ನೆನಪು ಇತಾಲಿಯದ ಜನಕ್ಕೆ ಬಂದೇಬರುತ್ತದೆ.

1959ರಷ್ಟು ಹೊತ್ತಿಗೆ ಏನಿ 58 ಕಂಪನಿಗಳಲ್ಲಿ 50%ನಿಂದ 100% ವರೆಗೆ ಸ್ವಾಮ್ಯ ಸಂಪಾದಿಸಿಕೊಂಡಿತ್ತು. ತೈಲಶೋಧನೆ, ವಿತರಣೆ; ತೈಲ ಶುದ್ಧೀಕರಣ, ವಿತರಣೆಯ ಕೇಂದ್ರಗಳು, ಮೋಟೇಲಗಳು; ಗನಿಗಾರಿಕೆಗೆ ಸಂಬಂಧಪಟ್ಟ ಯಂತ್ರಗಳ ತಯಾರಿ; ಸಿಂಥೆಟಿಕ್‌ರಬ್ಬರು, ಕೃತಕ ಗೊಬ್ಬರ, ಪೆಟ್ರೋ ಕೆಮಿಕಲ್ಸ್; ಥರ್ಮಲ್ ವಿದ್ಯುತ್ತು; ಆಟಮಿಕ್ ವಿದ್ಯುತ್ತು – ಮುಂತಾದ ಕ್ಷೇತ್ರಗಳನ್ನು 'ಏನಿ' ಆವರಿಸಿಕೊಂಡಿತ್ತು. ನಾಪೊಲಿಯಿಂದ ರೋಮಾಕ್ಕೆ ಹೋಗುವ ದಾರಿಯಲ್ಲಿ ಗಯೇತಾ ಬಳಿ ಹರಿಯುವ ಗರಿಲ್ಯಾನೋ ನದಿಯ ಸಮೀಪ ಇತಾಲಿಯದ ಪ್ರಥಮ ಅಣು ವಿದ್ಯುತ್ ಕೇಂದ್ರ ರಚನೆ ಆಗುತ್ತಿತ್ತು. ರೋಮ್ ನಗರದ ತೆಂಕದಲ್ಲಿ ಇನ್ನೊಂದು ಮೇಲಕ್ಕೇಳುತ್ತಿತ್ತು. ಇತಾಲಿಯದ ಕಣ್ಣು ಭವಿಷ್ಯವನ್ನು ಜಾಗ್ರತೆಯಿಂದ ಪರಿಶೀಲಿಸುತ್ತಿರುವುದಕ್ಕೆ ಇಂಥ ಸ್ಥಾವರಗಳು ಸಾಕ್ಷಿ. ಯಾವುದೇ ದೇಶದ ಔದ್ಯಮಿಕ ಉತ್ಕರ್ಷ ಅಲ್ಲಿ ಲಭ್ಯವಾಗುವ ಶಕ್ತಿ ಸಾಮಗ್ರಿಗಳನ್ನು ಹೊಂದಿದೆ. ಕಲ್ಲಿದ್ದಲು ಇಲ್ಲವಾದರೆ, ವಿದ್ಯುತ್ತು ಅದೂ ಇಲ್ಲವಾದರೆ ತೈಲಶಕ್ತಿ, ಗ್ಯಾಸ್ ಶಕ್ತಿ. ಕೊನೆಗೆ ಅಣುಶಕ್ತಿ – ಎಲ್ಲವನ್ನೂ ಬಳಸಬೇಕು. ಅಣುಶಕ್ತಿ ಬಿಟ್ಟರೆ ಉಳಿದೆಲ್ಲವಕ್ಕೆ ನಿಸರ್ಗ ಮಿತಿಯನ್ನು ಹೇರಿದೆ. ಆದ್ದರಿಂದ ನಿಸರ್ಗ ನೀಡುವ ಶಕ್ತಿ ಸಂಪದವನ್ನು ಜಾಗರೂಕತೆ ಮತ್ತು ಮಿತವ್ಯಯದಿಂದ ಬಳಸುವುದರ ಜತೆಗೆ, ಹೊಸ ಹೊಸ ಶಕ್ತಿಮೂಲಗಳನ್ನು ಊರ್ಜಿತಗೊಳಿಸಬೇಕು – ಇದು ಇತಾಲಿಯದ ಧೋರಣೆ.

## ○ ○ ಖಾಸಗೀವಲಯ; ಫಿಯಾತ್, ಒಲಿವೆತ್ತಿ

ಫಾಬ್ರಿಕಾ ಇತಲಿಯಾನಾ ಒತೊಮೊಬೀಲಿ ತೋರಿನೋ Fabrica Italiana Automobilio Torino ಇದರ ಪ್ರಥಮಾಕ್ಷರಗಳನ್ನು ಸೇರಿಸಿದರೆ ಫಿಯತ್ (Fiat) ಆಗುತ್ತದೆ. ಇಂಡಿಯದಲ್ಲಿ ಫಿಯೆಟ್ ಚಿಕ್ಕ ಕಾರಿನ ಇನ್ನೊಂದು ಹೆಸರು. ಇಂಡಿಯಕ್ಕೆ ಗೊತ್ತಿರುವುದು ಕಾರು ತಯಾರಿಸುವ ಕಂಪೆನಿ. ಫಿಯತ್ ಇತಾಲಿಯನ್ ಸಂಯೋಗದಿಂದ. ಮುಂಬಯಿ

ಯಲ್ಲಿ ತಯಾರಾಗುವಂಥದ್ದು ಇದರ ಒಂದೇ ಒಂದು ಮಾದರಿ, ಒಂದೇ ಒಂದು ವರ್ಗ – ಅಂದಿನಿಂದ ಇಂದಿನ ವರೆಗೂ – ಫಿಯತ್ ಮಿಲ್ಲೆ ಶೆಂತೋ (=1100). ಇದಕ್ಕಿಂತ ಸಣ್ಣದು ಚಿಂಕ್ವೆಶೆಂತೋ (500), ಸೇಶೆಂತೊ (600), ಇದಕ್ಕಿಂತ ದೊಡ್ಡದು 1300, 1600, 1800, 2100, 2300 – ಹೀಗೆ ಒಂದಕ್ಕಿಂತ ಒಂದು ದೊಡ್ಡದು ಮಾದರಿ. ಯಾವುವೂ ನಮ್ಮ ದೇಶದಲ್ಲಿ ತಯಾರಾಗುವುದಿಲ್ಲ. ತೋರಿನೋ ನಗರ ದಲ್ಲಿ ಕೇಂದ್ರ ಕಚೇರಿ ಇರುವ ಫಿಯತ್ ಭೂಮಿ, ಸಾಗರ, ವ್ಯೋಮ ಸಂಚಾ ರಕ್ಕೆ ಯೋಗ್ಯವಾದ ಯಂತ್ರಗಳನ್ನು ತಯಾರಿಸುತ್ತದೆ. 1899ರಲ್ಲಿ ತೊರಿನೊದಲ್ಲಿ ಪೋ ನದಿದಂಡೆಯ ಎರಡೂವರೆ ಎಕರೆ ಸ್ಥಳದಲ್ಲಿ 50 ಕೆಲಸಗಾರರಿಂದ ತೊಡಗಿದ ಫಿಯತ್ ಇಂದು ಇತಾಲಿಯನ್ನ ಜನರ ದೃಷ್ಟಿ ಯಲ್ಲಿ ಬರಿಯ ಕಾರಿನ ಕಾರ್ಖಾನೆಯಲ್ಲ; ಬೈಬಲಿನಲ್ಲಿ ಉಕ್ತವಾದ 'ಫಿಯತ್' ಪದ ಹೇಗೆ ಬೆಳಕಿಗೆ ಕಾರಣವೋ ಹಾಗೆ ಇತಾಲಿಯದ ಆರ್ಥಿಕ ಇತಿಹಾಸದಲ್ಲಿ ಈ ಫಿಯತೂ ಸಾವಿರಾರು ಜನರ ಬದುಕಿನ ದಾರಿದೀಪ ವಾಗಿದೆ, ಇತಾಲಿಯನ್ ಉದ್ಯಮಶೀಲತೆಯ ದೀಪಸ್ತಂಭವಾಗಿ ಜಗ ದ್ವಿಖ್ಯಾತವಾಗಿದೆ.

ಜೊವನಿ ಆನೆಲ್ಲಿ (1866–1945) ಕಂಪೆನಿ ಹುಟ್ಟಿದಾರಭ್ಯ ಆಮರಣ ಅದರ ಅಧ್ಯಕ್ಷನಾಗಿ ಸಂಸ್ಥೆಯ ಬೆಳವಣಿಗೆಗೆ ಕಾರಣನಾದ. ನಮ್ಮ ತಾತಾ ಸಂಸ್ಥೆಯಂತೆ ಖಾಸಗೀವಲಯದಲ್ಲಿ ಪ್ರವರ್ತಿತವಾದರೂ, ಸರ್ಕಾರದ ಆದೇಶ ಬರುವುದರ ಮೊದಲೇ ಸಾಕಷ್ಟು ಉದಾರವಾದ ಕೂಲಿಕಾರ ಧೋರಣೆಯನ್ನು ಆನೆಲ್ಲಿ ತನ್ನ ಕಾರ್ಖಾನೆಯಲ್ಲಿ ಅನ್ವಯಿಸಿದ್ದ. ಸೆನಟೋರಿ ಯಮ್, ಶಿಶುವಿಹಾರ, ಶಾಲೆ ಮುಂತಾದ ಕಲ್ಯಾಣಯೋಜನೆಯನ್ನು ಪಾಲಿಸಿ ದೂರದರ್ಶಿತ್ವವನ್ನೂ ಕಲ್ಯಾಣರಾಷ್ಟ್ರದ ಗುರಿಯನ್ನೂ ಸ್ವಕ್ಷೇತ್ರ ದಲ್ಲಿ ಮುಟ್ಟಲು ಪ್ರಯತ್ನ ಮಾಡಿದ ಆನೆಲ್ಲಿಯ ಮೊಮ್ಮಕ್ಕಳಾದ ಡಾ. ಜೊವನ್ನಿ ಆನೆಲ್ಲಿ – ಅಮೆರಿಕನ್ ಪರಿಭಾಷೆಯಲ್ಲಿ ಆನೆಲ್ಲಿ ಜೂನಿಯರ್ – ಮತ್ತು ಡಾ. ಇಂಜಿನೀರ್ ಜೊವನ್ನಿ ನಾಸಿ – ಈಗ ಫಿಯತ್‌ನ ಉಪಾಧ್ಯಕ್ಷ ಸ್ಥಾನದಲ್ಲಿದ್ದಾರೆ.

ಫಿಯತ್ ಉತ್ಪಾದನೆಯ ಕ್ರಮ 'ಊರ್ಧ್ವಮುಖಿ' – ಅಂದರೆ ಒಂದು ಪದಾರ್ಥಕ್ಕೆ ಬೇಕಾಗುವ ಕಚ್ಚಾ ಮಾಲಿಂದ ಹಿಡಿದು, ಪೂರ್ತಿ

ಸರಕು ಸಿದ್ಧವಾಗುವ ವರೆಗಿನ ಎಲ್ಲ ವಸ್ತುಗಳನ್ನೂ ಫಿಯತ್ ತಾನೇ ತಯಾರು ಮಾಡುತ್ತದೆ. ರಾಷ್ಟ್ರಹಿತವನ್ನು ನದರಿನಲ್ಲಿಟ್ಟುಕೊಂಡು ಫಿಯತ್ ಮೈಗೂಡಿಸಿಕೊಂಡ ಸಾಧನೆ ಸಾಮಾನ್ಯವಲ್ಲ: (1) ಮೋಟರ್ ಉತ್ಪಾದನೆ ಪ್ರತಿಯೊಂದು ತರದ ವಾಹನಕ್ಕೂ ಅನುಕೂಲವಾಗುವಂತೆ ವೈವಿಧ್ಯಮಯವಾಗಿ ನಡೆಯಿತು. (2) 1962ರಲ್ಲಿ 1,12,000 ಜನರಿಗೆ ಉದ್ಯೋಗ ದೊರೆಯಿತು. (3) ಮಜೂರಿ ಮತ್ತು ಸಂಬಳದ ನಿಜಮೌಲ್ಯ ಇಮ್ಮಡಿಯಾಯಿತು. (4) ಕಂಪನಿಯ ಸಮಾಜಕಲ್ಯಾಣ ಯೋಜನೆ ಗುಣ ಮತ್ತು ಪ್ರಮಾಣಗಳೆರಡರಲ್ಲೂ ವೃದ್ಧಿ ಹೊಂದಿದುವು (5) ಸಂಶೋಧನೆ ಗಾಗಿ, ಗುಣವೃದ್ಧಿಗಾಗಿ ಫಿಯತ್ ತನ್ನದೇ ಆದ ಕೇಂದ್ರ ಸಂಶೋಧನ ಮತ್ತು ಪ್ರಯೋಗಶಾಲೆಗಳನ್ನು ಕಟ್ಟಿತು.

ತೋರಿನೊ ನಗರ ನಿಜವಾಗಿ ನೋಡಿದರೆ ಫಿಯತ್‌ನಗರ, ಅಲ್ಲಿ ಫಿಯತ್ ಸರ್ವವ್ಯಾಪಿ. ಯಾವ ದಿಕ್ಕಿಗೆ ತಿರುಗಿದರೂ ಫಿಯೆತ್‌ಗೆ ಸೇರಿದ ಕಾರ್ಖಾನೆ, ಶಾಲೆ, ಗೋದಾಮು ಇದ್ದೇ ತೀರಬೇಕು. 258 ಎಕ್ರೆ ಸ್ಥಳದಲ್ಲಿ 1,400,000 ಟನ್ ಕಬ್ಬಿಣ–ಉಕ್ಕು ತಯಾರಾಗುತ್ತದೆ. ಇನ್ನೊಂದು ಬೀದಿಯಲ್ಲಿರುವ 67 ಎಕರೆ ಸ್ಥಳದಲ್ಲಿ ಎಲ್ಯೂಮಿನಿಯಮ್ ಕಾರ್ಖಾನೆ. ಅಲ್ಲಿ ಇಲ್ಲಿ ಫೌಂಡ್ರಿಗಳು. ಎಲ್ಲಕ್ಕೂ ದೊಡ್ಡದು ಮಿರಾಫಿಯೋರಿ ಎಂಬಲ್ಲಿ 207 ಎಕರೆ ಹರಡಿರುವ ಕಾರು ಕಾರ್ಖಾನೆ. ಇಲ್ಲಿ 10,000 ಯಂತ್ರ ಗಳನ್ನಿಟ್ಟಿದ್ದಾರೆ. ಕಾರ್ಖಾನೆಯೊಳಗಡೆಯ ಸಾಗುಪಟ್ಟಿ (Conveyor Belt) 68½ ಮೈಲುಗಳಷ್ಟು ಉದ್ದವಾಗಿರುತ್ತದೆ. ಇದಲ್ಲದೆ 6–7 ಮೈಲುದ್ದ ಸಬ್‌ವೇ ಇದೆ. ಒಳಗಡೆಯ ರೈಲುದಾರಿ 14 ಮೈಲು. ರೈಲ್ವೇ ಡಬ್ಬಿಗಳನ್ನು ಕಟ್ಟುವ ಒಂದು ಕಾರ್ಖಾನೆಯೂ ಇದೆ. ಜಗತ್ತಿನಲ್ಲೆ ಅತಿ ದೊಡ್ಡದಾದ ಡೀಸೆಲ್‌ಯಂತ್ರಕಾರ್ಖಾನೆಗಳಲ್ಲಿ ಫಿಯತ್‌ನವರದೂ ಒಂದು. ಟ್ರ್ಯಾಕ್ಟರುಗಳನ್ನೂ, ವಿಮಾನ ಚಾಲನೆಯ ಇಂಜಿನುಗಳನ್ನೂ ಫಿಯತ್ ತಯಾರಿಸುತ್ತದೆ. ನೋವಾರಾ, ಮೊದೇನಾ, ಫ್ಲಾರೆನ್ಸ್, ಪೀಸಾ, ನಾಪೊಲಿ, ಬ್ರೆಶಿಯಾ – ಮುಂತಾದ ಊರುಗಳಲ್ಲಿ ಫಿಯತ್ ಬಿಡಿಭಾಗ ತಯಾರಿಸುವ ಅಥವಾ ಜೋಡಿಸುವ ಕಾರ್ಖಾನೆ ಸ್ಥಾಪಿಸಿದೆ. ಆಫ್ರಿಕದ ಪ್ರಖ್ಯಾತ ಕರೀಬಾ ಅಣೆಕಟ್ಟನ್ನು ನಿರ್ಮಿಸಿದ ಅಂತಾರಾಷ್ಟ್ರೀಯ ಗುಂಪಿ ನಲ್ಲಿ ಫಿಯೆತ್‌ಗೆ ಕೂಡ ಸ್ಥಾನ ಇದೆ. ರಶಿಯದಲ್ಲಿ ಫಿಯತ್ ಸಂಯೋಗ

ದೀಂದ ಬೃಹತ್ ಕಾರು ಕಾರ್ಖಾನೆ ರಚಿತವಾಗುತ್ತಾ ಇದೆ. ಇಂದು ಫಿಯತ್‌ನ ಕಾರ್ಯಕ್ಷೇತ್ರ ಜಗದಗಲ ವ್ಯಾಪಿಸಿದೆ. ಸಾಹಸ, ಸಂಘಟನೆ, ಸ್ಪರ್ಧೆಗಳಿಗೆ ಇನ್ನೊಂದು ಹೆಸರು ಫಿಯತ್.

ಪ್ರಾಚೀನ ಪರಂಪರೆಯ ಕರಕೌಶಲವನ್ನೆಲ್ಲ ವಿನಿಯೋಗಿಸಿ ಬುದ್ಧಿವಂತಿಕೆಯ ಬಂಡವಾಳದಿಂದ ನಡೆಯಿಸುವ ಒಂದು ಉದ್ಯಮವೆಂದರೆ ಒಲಿವೆತ್ತಿ ಟೈಪ್‌ರೈಟರ್ ಮತ್ತು ಕ್ಯಾಲ್ಕುಲೇಟರ್‌ನ ಉದ್ಯಮ. 1908 ಇಂಜಿನಿಯರ್ ಕಮಿಲ್ಲೊ ಒಲಿವೆತ್ತಿ ಎಂಬವನು ಈ ಕಂಪೆನಿಯನ್ನು ಸ್ಥಾಪಿಸಿದನು. ಬರೇ ಟೈಪ್‌ರೈಟರುಗಳನ್ನು ಮಾತ್ರ ತಯಾರಿಸುತ್ತಿದ್ದ ಒಲಿವೆತ್ತಿ 1940ರಲ್ಲಿ ಕ್ಯಾಲ್ಕುಲೇಟರಗಳನ್ನು ತಯಾರಿಸಲು ತೊಡಗಿತು. ಈಗ ಕ್ಯಾಲ್ಕುಲೇಟರುಗಳು ಒಟ್ಟು ಉತ್ಪಾದನೆಯ 70%ನಷ್ಟು ಭಾಗ ಆಕ್ರಮಿಸಿಕೊಂಡು ಟೈಪರೈಟರುಗಳನ್ನು ಹಿಂದಕ್ಕೆ ನೂಕಿಬಿಟ್ಟಿವೆ. ಕಾರ್ಖಾನೆಯಲ್ಲಿ 1908ರಲ್ಲಿ 40 ಮಂದಿ ಕೆಲಸಗಾರರು, 1947ರಲ್ಲಿ 4700, 1957ರಲ್ಲಿ 8300. ಇತಾಲಿಯದ ಬೇರೆ ಬೇರೆ ಕಡೆ ಇರುವ ಒಲಿವೆತ್ತಿ ಕೆಲಸಗಾರರನ್ನೂ, ಮಾರಾಟದ ವಿಭಾಗದ ಜನರನ್ನೂ, ವಿದೇಶದಲ್ಲಿ ಒಲಿವೆತ್ತಿ ಸಹಯೋಗದಲ್ಲಿರುವ ಘಟಕಗಳನ್ನೂ ಸೇರಿಸಿಕೊಂಡಲ್ಲಿ ಕೆಲಸಗಾರರ ಸಂಖ್ಯೆ 56,000ಕ್ಕೆ ಏರುತ್ತದೆ ಇತಾಲಿಯದಲ್ಲೆ ಎಂಟು ಕಾರ್ಖಾನೆಗಳಲ್ಲಿ 27,000 ಕೆಲಸಗಾರರು (ಇವ್ರೆಯಾದ ಘಟಕದಲ್ಲಿ 15,000) ದುಡಿಯುತ್ತಾರೆ; ಹೊರದೇಶಗಳಲ್ಲಿರುವ 7 ಕಾರ್ಖಾನೆಗಳಲ್ಲಿ 29,000 ಮಂದಿ ದುಡಿಯುತ್ತಾರೆ: ಗ್ಲಾಸ್ಗೊ (ಇಂಗ್ಲಂಡ್), ಬರ್ಸಿಲೋನ(ಸ್ಪೆಯಿನ್), ಬೊನಸಾರೆ (ಆರ್ಜಂಟಿನಾ), ಜೋಹಾನ್ನೆಸ್‌ಬರ್ಗ್ (ದ. ಆಫ್ರಿಕ), ಸಾವೊಪೌಲೊ (ಬ್ರೆಜಿಲ್) ಬೊಗೊಟ (ಕೊಲಂಬಿಯ), ಮೆಕ್ಸಿಕೊ ಸಿಟಿ, (ಮೆಕ್ಸಿಕೊ)–ಒಲಿವೆತ್ತಿಯ ವಿದೇಶಾಂಗ ಕೇಂದ್ರಗಳು. ನಮ್ಮ ದೇಶದಲ್ಲಿ ಮದರಾಸಿನಲ್ಲಿ ತಯಾರಾಗುವ ಹಿಂದುಸ್ಥಾನ್ ಟೆಲಿಪ್ರಿಂಟರ್ಸ್‌ಗೆ ಒಲಿವೆತ್ತಿಯೇ ತಾಂತ್ರಿಕ ಸಲಹೆಗಾರರು. ಒಲಿವೆತ್ತಿ ಹನ್ನೊಂದು ಬಗೆಯ ಪದಾರ್ಥಗಳನ್ನು ತಯಾರಿಸುತ್ತದೆ. (1) ಟೈಪ್‌ರೈಟರು – ನಾಲ್ಕು ಮಾದರಿ. (2) ಕ್ಯಾಲ್ಕುಲೇಟರ್ – 10 ಮಾದರಿ. (3) ಆಚೆ ಈಚೆ ಓಡುವ ಅಂಗಭಾಗವುಳ್ಳ ಕಾಲ್ಕುಲೇಟರ್ – 5 ಮಾದರಿ. (4) ಲೆಕ್ಕಾಚಾರ ಮಾಡುವ ಯಂತ್ರ – 13 ಮಾದರಿ. (5) ಇನ್‌ವಾಯ್ಸ್ ಬರೆವ

ಯಂತ್ರ – 3 ಮಾದರಿ. (6) ಟ್ಯಾಪ್ ರಿಕಾರ್ಡರ್ ಮೂರು ಮಾದರಿ (7) ಡೇಟಾ ಪ್ರೊಸೆಸ್ಸಿಂಗ್‌ಗೆ ಬೇಕಾದ ಇಲೆಕ್ಟ್ರಾನಿಕ್ ಸಾಧನ (8) ಇಲೆಕ್ಟ್ರಾನಿಕ್ ಕಂಪ್ಯೂಟರು (9) ಲೋಹದ ಆಫೀಸ್ ಪೀಠೋಪಕರಣ (10) ಟೆಲಿಪ್ರಿಂಟರ್ (11) ಯಂತ್ರಗಳಿಗೆ ಬೇಕಾದ ಹತ್ಯಾರು (machine tools). 60 ಬಿಲಿಯ ಲೀರೆ ಬಂಡವಾಳದ ಒಲಿವೆತ್ತಿಯ ಉತ್ಪಾದನೆಯಲ್ಲಿ 70% ನಿರ್ಯಾತಕ್ಕಾಗಿಯೇ ಮೀಸಲು.

ಒಲಿವೆತ್ತಿಯ ಒಂದು ಶಾಖೆ ನಾಪೊಲಿಯ ಪೂಜ್ಯೋಲಿ ಪ್ರದೇಶದಲ್ಲಿ ಕೆಲಸ ಮಾಡುತ್ತಿತ್ತು. ಅಲ್ಲಿಗೆ ಒಂದು ಸಾರಿ ಹೋಗಿದ್ದೆ. ಕಾರ್ಖಾನೆಗಳ ಸುತ್ತಲೂ ಬಹಳ ಸ್ವಚ್ಛತೆ. ಉಪವನ, ಸಿಮೆಂಟು ಹಾಕಿದ ಕಾಲುದಾರಿ. ವರ್ಕ್‌ಶಾಪಿನಲ್ಲಿ ಮಿದುವಾಗಿ ಸಂಗೀತದ ಶ್ರವಣ. ಕೆಲಸಗಾರರೆಲ್ಲ ನಮ್ಮ ಕಡೆಗೆ ತಲೆಯೆತ್ತಿ ಒಮ್ಮೆ ನೋಡಿ ತದನಂತರ ಕಾರ್ಯಮಗ್ನರು. ಕಾರ್ಯವಾದರೂ ಎಂಥದು – ಟೈಪ್‌ರೈಟರಿನ ನೂರಾರು ಬಿಡಿಭಾಗಗಳಲ್ಲಿ ಯಾವುದೋ ಒಂದು ಭಾಗ ಒಬ್ಬನ ಹತ್ತಿರ ಇರುತ್ತದೆ. ತಲೆಯ ಮೇಲ್ಗಡೆ ಸಾಗುಪಟ್ಟಿಯಿಂದ ಟೈಪರೈಟರ್ ಅಸ್ಥಿಪಂಜರ ಬರುತ್ತದೆ, ಅದಕ್ಕೆ ಅವನ ಹತ್ತಿರ ಇರುವ ಭಾಗವನ್ನು ತಿರುಗಿಸಿಯೋ, ಒತ್ತಿಯೋ, ಅಂಟಿಸಿಯೋ, ಮೆತ್ತಿಯೋ ಬಿಟ್ಟರೆ ಆಯಿತು. ನಿಜಕ್ಕೂ ತಲೆಬೇಸರ – ಏಕನಾದ. ಅದಕ್ಕೆಂತಲೇ ವರ್ಕ್‌ಶಾಪ್ ತುಂಬಾ ಸಂಗೀತದ ಹಿನ್ನೆಲೆ ಹಚ್ಚಿದ್ದಾರೆ. ಸಂಗೀತದಿಂದಲೂ ಕೆಲಸಗಾರರ ಉತ್ಪಾದಕಶಕ್ತಿ ಹೆಚ್ಚುವುದಂತೆ.

ತೋರಿನೋಕ್ಕೆ 16 ಮೈಲು ದೂರದ ಇವ್ರೆಯಾದ ಕಾರ್ಖಾನೆ ಪೊಜ್ಯೊರಿ ಘಟಕಕ್ಕಿಂತಲೂ ಬಹಳ ದೊಡ್ಡದು. ಅದೊಂದು ಚಕ್ರವ್ಯೂಹ. ಎಲ್ಲಿ ನೋಡಿದರೂ ಕ್ಯಾಲ್ಕುಲೇಟರ್‌ಗಳು ನಾನಾ ವೇಷ ಧರಿಸಿ ಓಡಾಡುತ್ತಿವೆ. ಕೆಲಸಗಾರರಿಗೆ ಮನೆಗಳು, ಅಂಗಡಿಗಳು, ಶಾಲೆಗಳು, ಕ್ರೀಡಾ ಕೇಂದ್ರಗಳು – ಎಲ್ಲವನ್ನೂ ಕಾರ್ಖಾನೆಯೇ ಒದಗಿಸಿದೆ. ಒಮ್ಮೆ ಸೇರಿ ಕೊಂಡರೆ ಜೀವನ ಭದ್ರವಾಯಿತು ಎಂಬಂತೆ ಒಲಿವೆತ್ತಿ ಸಂಸ್ಥೆ ಹೆಸರು ಗಳಿಸಿದೆ.

ಫಿಯೆತ್ ನಡೆಸುತ್ತಿದ್ದ ತಾಂತ್ರಿಕ ತರಬೇತಿ ಶಾಲೆಯನ್ನು ಸಂದರ್ಶಿಸಿದಾಗ ಅಲ್ಲಿ ನಮಗೆ ಇನ್ನೊಂದು ವೈಚಿತ್ರ್ಯ ಕಾಣಸಿಕ್ಕಿತು. ಸುಮಾರು 300 ಹುಡುಗರನ್ನು ತೆಗೆದುಕೊಳ್ಳುತ್ತಾರೆ – ಹೆಚ್ಚಾಗಿ ಕಾರ್ಖಾನೆ ಕೆಲಸಗಾರರ

ಹುಡುಗರನ್ನೇ ಆಯುತ್ತಾರೆ – ಅವರಿಗೆ ಪ್ರತ್ಯೇಕ ಟೋಲ್ ಕಪಾ ಟಿದೆ – ಆದರೆ ಆದರ ಬಾಗಿಲಿಗೆ ಬೀಗವೇ ಇಲ್ಲ. ನಂಬಿಕೆ – ವಿಶ್ವಾಸ ಹುಟ್ಟಿಸುವ ನೂತನ ಉಪಾಯ ಇದು. ಕಾರ್ಖಾನೆಯಲ್ಲಿ ತಯಾರಾದ ನಾನಾ ಮಾದರಿ ಕಾರುಗಳನ್ನು ಇಡಲು ಜಾಗವಿಲ್ಲ. ಪ್ರತಿನಿತ್ಯ ಸಾವಿರಾರು ತಯಾರಾದರೆ ಆದರ ದಾಸ್ತಾನು – ವಿತರಣೆ ಎರಡೂ ಸಮಸ್ಯೆಯೇ. ವಿತರಣೆ ಆಗಲೇಬೇಕು–ರೈಲಿನಲ್ಲಿ, ಲಾರಿಯಲ್ಲಿ, ಹಡಗಿನಲ್ಲಿ. ತಯಾರಾದ ಕಾರು ದೇಶದೊಳಗೂ ಹೊರಗೂ ಬಟವಾಡೆ ಆಗಲೇಬೇಕು. ಇಲ್ಲ ವಾದರೆ ದಾಸ್ತಾನು ಅಸಾಧ್ಯ. ಮಾರ್ಕೆಟು ಸ್ವಲ್ಪ ಹಿಂದೇಟು ಹೊಡೆ ಯಿತೋ ದಾಸ್ತಾನಿನ ಅಶಕ್ಯತೆಗಾಗಿ ಉತ್ಪಾದನೆ ಹಿಡಿದಿಡಬೇಕಾಗಿ ಬರು ತ್ತದೆ. ಬೃಹತ್ ಉತ್ಪಾದನೆಯ ಜತೆಗೆ ಬೃಹತ್ ಮಾರುಕಟ್ಟೆಯಲ್ಲಿ ಬೃಹ ತ್ತಾಗಿ, ಶೀಘ್ರಾತಿಶೀಘ್ರವಾಗಿ ವಿತರಣೆಯೂ ಆಗತಕ್ಕದ್ದು ಎಂಬ ಕಾಳಜಿ, ಉತಾವಳಿ ಉದ್ದಿಮೆದಾರರಲ್ಲಿ ಮೂಡಬೇಕು. ಅಂತಾರಾಷ್ಟ್ರೀಯ ಮಾರ್ಕೆ ಟಿನ ಪೈಪೋಟಿಯ ಒತ್ತಡ ಎಂಥದೆಂಬುದನ್ನು ಅನುಭವಿಸಿದ ಯಾವ ಉದ್ಯಮವೂ ನವೋನವವಾಗಿ ತನ್ನ ಉತ್ಪಾದನೆ ಮತ್ತು ವಿತರಣೆಯ ಪದ್ಧತಿಗಳನ್ನು ಆವಿಷ್ಕಾರ ಮಾಡುತ್ತಲೇ ಇರಬೇಕು, ಬದಲಾಯಿಸು ತ್ತಲೇ ಇರಬೇಕು. ಇಂಥ ನವೀಕರಣ ಧೋರಣೆ ಮನೋವೃತ್ತಿ ಇತಾಲಿ ಯದ ಉದ್ದಿಮೆದಾರರಲ್ಲಿಯೂ, ವ್ಯಾಪಾರಿಗಳಲ್ಲಿಯೂ ಈಗ ರೂಢವಾಗಿ ಅವರು ತಮ್ಮ ಉದ್ಯಮಗಳ ಸ್ನಾಯು ಬಲಸಂವರ್ಧನೆ ಮಾಡಿಕೊಂಡಿ ದ್ದಾರೆ.

○ ○ ಉತ್ತರೋತ್ತರ

1963ರ ಮೇ 1, ಎಲ್ಲೆಲ್ಲೂ ಮೇ ದಿನಾಚರಣೆ. ಅಂದು ನಾನು ಇತಾಲಿಯದ ಶ್ರಮಜೀವಿಗಳ ಜತೆಗೆ ಎರಡು ಮೂರು ಫರ್ಲಾಂಗ್ ಮೆರ ವಣಿಗೆಯಲ್ಲಿ ನಡೆದು ಮೇ ದಿನಾಚರಣೆಯಲ್ಲಿ ಭಾಗವಹಿಸಿದಂತಾಯಿತು. ತೆಂಕ ಇತಾಲಿಯದಿಂದ–ಪ್ರಾಯಃ ನಾಪೊಲಿಯಿಂದಲೇ ರೋಮ್‌ನಗರದ ಕೇಂದ್ರ ಪಾರ್ಲಿಮೆಂಟಿಗೆ ಆರಿಸಿ ಹೋದ ಮೂರು ಜನ ಕಮ್ಯೂನಿಸ್ಟ್,

ಸದಸ್ಯರು ಮೆರವಣಿಗೆಯ ಮುಂಭಾಗದಲ್ಲಿದ್ದರು. ನಾನು ರೈಲು ನಿಲ್ದಾಣಕ್ಕೆ ಹೋಗಿ ಹಿಂದಿರುಗುವಾಗ ಈ ಮೆರವಣಿಗೆಯ ನಡುವೆ ಸಿಕ್ಕಿಕೊಂಡೆ. ತಪ್ಪಿಸಿಕೊಳ್ಳುವಷ್ಟು ಹೊತ್ತಿಗೆ ನಾನು ಅರ್ಧ ದಾರಿ ದಾಟಿಬಿಟ್ಟಿದ್ದೆ. ಮೇಯಲ್ಲಿ ಎರಡು ವಾರ ವರ್ಗಗಳು ನಡೆಯುತ್ತಿರುವಾಗಲೂ ನಮಗೆ ಇನ್ನೇನು ನಾಪೋಲಿ ಬಿಡುವ ಸಮಯ ಬಂತಲ್ಲಾ ಎಂಬ ಚಿಂತೆ. ಕೊನೆಯ ಭಾನುವಾರ ಆಪನ ಮನೆಯಲ್ಲಿ ನನಗೆ ವಿದಾಯಸತ್ಕಾರ. ಮಧ್ಯಾಹ ದ ಭೋಜನ – ನನಗೊಂದು ಸುಂದರವಾದ ಡೈರಿ, ಮತ್ತು ಎರಡು ತಲೆಗೆ ಕಟ್ಟುವ ಶಿರವಸ್ತ್ರ. ನನ್ನ ಮಗಳಿಗೆ, ಹೆಂಡತಿಗೆ ಎಂದು ಆಪಾ ಆಜ್ಞೆ ಆಯಿತು. ಮಕ್ಕಳ ಹತ್ತಿರ ಕೈ ಕುಲುಕಿದ್ದಾಯಿತು. ಆಪಾನನ್ನು ತಬ್ಬಿಕೊಂಡದ್ದಾಯಿತು. ಲೇಪ್ರೊಂತಾನೆ ವರೆಗೂ ಬಂದು 'ಅರ್ರಿವೆದೆರ್ಚಿ' ಮೂರು ಮೂರು ಸಲ ಹೇಳಿ ಆಪಾ ಬೀಳ್ಕೊಟ್ಟ. ನಾನು ಅವನ ಕಾರಿನ ಸದ್ದು ನಿಲ್ಲುವ ವರೆಗೂ ಆಲಿಸುತ್ತ ನಿಂತೆ. ಆ ಸದ್ದು ನಿಂತರೂ ಆತನ ಹೃದಯದ ಸದ್ದು ನಿಲ್ಲದು; ನನ್ನ ವ್ಯಕ್ತಿತ್ವದ ಯಾವುದೋ ಒಂದು ಮೂಲೆಯಲ್ಲಿ ಈ ಸದ್ದು ಅನಂತ ಕಾಲದವರೆಗೂ ತುಡಿಯುತ್ತದೆ.

ಒಳ್ಳೆ ಹವಾಮಾನ ತೊಡಗುವ ಮುಹೂರ್ತದಲ್ಲೇ ನಾಪೋಲಿಯ ವಾತಾವರಣವನ್ನು ನಾವು ಬಿಡಬೇಕಾಗಿ ಬಂದಿದೆ. ಏಪ್ರಿಲ್ ವರೆಗೂ ಆ ವರ್ಷ ಚಳಿ ಮಳೆ ಇತ್ತು; ಯಾಕೆ ಫೆಬ್ರುವರಿಯಲ್ಲೊ ಮಾರ್ಚಿನಲ್ಲೋ ಹಿಮಪಾತವೂ ಆಯಿತು; ಆದರೆ ಬಹಳ ತೆಳುವಾದ ಹಿಮ (Snow). ಇಂಗ್ಲಿಷ್ ಗ್ರಂಥಗಳಲ್ಲಿ ಓದಿ ಓದಿ ಬೇಸರ ಬಂದಿದ್ದರೂ ನಿಜವಾಗಿಯೂ ಹಿಮಪಾತದ ಸೊಗಸು ಅವರ್ಣನೀಯ. ಒಂದುದಿನ ಇಸ್ವೇ ಪಾಠ ನಡೆಯುತ್ತಿರುವಾಗಲೇ ಹೊರಗಿಂದ ಹತ್ತಿ ಚೆಲ್ಲಿದ ಹಾಗೆ ಹಿಮ ಬೀಳಲಾರಂಭಿಸಿತು. ಪಾಠ ಅಲ್ಲಿಗೇ ನಿಲ್ಲಬೇಕಾಯಿತು. 10–15 ಮಿನಿಟು ಎಲ್ಲರೂ ಗಾಜಿನ ಕಿಟಕಿಯ ಮೂಲಕ ಹಿಮ ಹರಡುವುದನ್ನು ನೋಡಲು ತೆರಳಿದರು. ಮರದ ಮೇಲೆ ಸುತ್ತಿಕೊಂಡ ಹಿಮ, ನೆಲದ ಮೇಲೆ ಬಿದ್ದು ಹಾಸಿಗೆ ಬಿಡಿಸಿಕೊಂಡಿತು. ಅಂದು ಮಧ್ಯಾಹ್ನ ಫುಟ್‌ಬಾಲ್ ಆಟದ ಬದಲು ಹಿಮದ ಚೆಂಡಾಟ. ಹಿಮವನ್ನು ಉಂಡೆಯಾಗಿ ಕಟ್ಟಿ ಒಬ್ಬರಿಗೊಬ್ಬರು ಎಸೆದುಕೊಂಡು ಒಂದು ಗಂಟೆ ಹೊತ್ತು ಆಟ ಆಡಿದೆವು. ಹಿಮ ಬೀಳದೆ ನೂರು ವರ್ಷವಾದರೂ ಆಗಿರಬೇಕು ನಾಪೋಲಿಯಲ್ಲಿ

ಎಂದರು ಯಾರೋ, ಹಾಗಾದರೆ ಆಗಲೂ ನಾನು ಇಲ್ಲಿಗೆ ಬಂದಿರಬೇಕು ಎಂದುಕೊಂಡೆ. ಅಂಥ ಅಪೂರ್ವ ದೃಶ್ಯ – ನನಗಾಗಿ ಮುದ್ದಾಂ ದೇಖಾವೆ.

ಹಿಮ ಹಿಂಜರಿಯಿತು, ಮಳೆ ಮಾಯವಾಯಿತು, ಲೇಪೋಂತಾನೆ ಕೊಠಡಿಯೊಳಗಿನ ಉಷ್ಣಕಾರಕ ಕೊಳವೆ ಬಂದಾಯಿತು, ಲೇಪೋಂತಾನೆ ಕಿಟಕಿ ನೋಟ ಹಗಲು ನಾಪೊಲಿ ಆಖಾತಕ್ಕೆ ಬರುವ ಹೋಗುವ ಹಡಗು ಗಳ ಲೆಕ್ಕ ಇಡುವಷ್ಟು ಸ್ವಚ್ಛವಾಯಿತು. ರಾತ್ರಿ ನಗರದ ನಿಯೋನ್ ಜಾಹೀರಾತುಗಳ ವರ್ಣರಂಜನೆ ನಮ್ಮನ್ನು ಬೀದಿಗಿಳಿಸಿಬಿಡುತ್ತಿತ್ತು. ಐದು ತಿಂಗಳು ರಾತ್ರಿ ಎಲ್ಲ ಚಳಿಚಳಿ ಎಂದು ಕಾಲಹರಣ ಮಾಡುತ್ತಿದ್ದವರು ಈಗ ರಾತ್ರಿ ಹತ್ತಾದರೂ, ಹನ್ನೊಂದಾದರೂ ಸುಳಿವಿಲ್ಲ. ಊಟ ಇಲ್ಲ ದಿದ್ದರೂ ಚಿಂತಿಲ್ಲ – ಇಂಥ ನೋಟ ಇನ್ನೆಲ್ಲಿ ಸಿಕ್ಕೀತು ಎಂದು ಎಲ್ಲರೂ ಬಹಳ ಹೊತ್ತಿನ ವರೆಗೆ 'ಕೇರಾಫ್ ಫುಟ್‌ಪಾತ್' ಆಗಿಬಿಡುತ್ತಿತ್ತು. ಜೊಸೆಪ್ಪಗೆ ಅವರಿಗಾಗಿ ಊಟದ ಮನೆಯಲ್ಲಿ ಕಾಯುವ ಕೆಲಸ.

ಹೊರಡುವಾಗ ಏನಾದರೂ ಕೊಡಬೇಕಲ್ಲಾ ಜೊಸೆಪ್ಪಗೆ? – ಯಾರೂ ಶ್ರೀಮಂತರಲ್ಲ; ಅಲ್ಲದೆ ಉತ್ತರ ಇತಾಲಿಯಕ್ಕೆ ಹೋಗುವಾಗ ಎಷ್ಟು ದುಡ್ಡಿದ್ದರೂ ಸಾಲದು–ಎಂಬ ಚಿಂತೆ ಬೇರೆ. ಅಂತೂ ಒಬ್ಬೊಬ್ಬರು 1000 ಲೀರೆ ಪ್ರಕಾರ ಆತನಿಗೇನು 15–20 ಸಾವಿರ ಲೀರೆ ಉಡುಗೊರೆ 'ಟಿಪ್' ಸಿಕ್ಕಿತೋ ಏನೋ. ನನ್ನ ಉಡುಗೊರೆ ಕ್ಯಾಶ್ ಮತ್ತು ಕೈಂಡ್ ಎರಡೂ ಮಾಡಿದೆ. ನನ್ನ ಬೃಹತ್ ಟ್ರಂಕನ್ನು ಅವನಿಗೇ ಕೊಟ್ಟೆ. ಇದ ರಿಂದಲೂ ಆತನಿಗೆ ಸಂತೋಷವಾಗುವಂತಿರಲಿಲ್ಲ. ಅವನು ನಮಗೆ ಮಾಡಿದ ಸೇವೆಗೆ ಕಡಮೆ ಎಂದರೆ ನಾವು 100,000 ಲೀರೆ (=800 ರೂಪಾಯಿ) ಆದರೂ ಕೊಡಬೇಕಾಗಿತ್ತು. ಆದರೆ ಎಲ್ಲಿಂದ ತರೋಣ?

ಮೇ 17 ನಾಪೊಲಿಯಲ್ಲಿ ನಾವು ಕಳೆದ ಪೂರ್ತಿ ದಿನ. ಅಂದು ಮುಂಜಾನೆಯಲ್ಲಿ ಹೊರಡುವ ಸಿದ್ಧತೆ ಮಾಡಬೇಕು. ಇಸ್ಪೇ ಒದಗಿಸಿದ ನೋಟ್ಸಿನ ಕಂತೆಯ ಮೇಲೆ, ತೆಂಕದ ಸಂಚಾರದಲ್ಲಿ ನಾವು ಸಂಗ್ರಹಿಸಿದ ಹಲವಾರು ಪುಸ್ತಿಕೆಗಳು, ಸ್ವಿಝರ್ಲೆಂಡಿಂದ ನಾನು ತಂದ ಪುಸ್ತಿಕೆಗಳು ರಾಶಿ ಬಿದ್ದಿದ್ದುವು. ಮನಸ್ಸಿಲ್ಲದ ಮನಸ್ಸಿಂದ ಪ್ರವಾಸಕಥೆ ಬರೆಯುವಾಗ ಯಾವುದು ಅನಿವಾರ್ಯವಾಗಬಹುದೋ ಅಂಥವನ್ನು ಮಾತ್ರ ಆರಿಸಿ ಉಳಿದ ಮುಕ್ಕಾಲು ಭಾಗ ವಿಸರ್ಜನೆ ಮಾಡಿದೆ. ಎಷ್ಟೋ ಬಟ್ಟೆಬರೆ,

ಬೂಟ್ಸು ಅವನ್ನೂ ಬಿಟ್ಟೆ. ಹಡಗಿನಲ್ಲಿ ಮಣ ಭಾರ ಸಾಮಾನು ತರ ಬಹುದು, ವಿಮಾನದ ಟೂರಿಸ್ಟ್ ಕ್ಲಾಸಿಗೆ ಪುಕ್ಕಟೆ ಬಿಡುವ 20 ಕೇಜಿಗೆ ಸರಿಯಾಗಿ ನಮ್ಮ ಪೆಟ್ಟಿಗೆಯ ತೂಕ ಹೊಂದಿಸಿಕೊಳ್ಳುವುದು ಬಲು ಪ್ರಯಾಸದ ಕೆಲಸವೇ ಸರಿ ಎನಿಸಿತು; ಮನೆಯೊಡತಿಯನ್ನು ನೋಡಿ ಉಪಕಾರ ಸ್ಮರಿಸಿ– ಉಂಬರ್ತೋ ಗೆಲರಿಯ ಫೋಟೋಗ್ರಾಫರನ ಅಂಗಡಿ, ಕಫೆ, ಪುಸ್ತಕದಂಗಡಿ, ರೈಲ್ವೆ ಸ್ಟೇಶನ್, ಕಳ್ಳ ಸರಕಿನ ಓಣಿ, ವಿಯಾರೋಮಾ, ವಿಲಾಕಮ್ಯುನಾಲೆ – ದಿನನಿತ್ಯದ ಸಂಚಾರ ಸ್ಥಾನಗಳನ್ನೆಲ್ಲ ಮತ್ತೆ ಮತ್ತೆ ಮನಸ್ಸಿನಿಂದ ಮುಟ್ಟಿ ನೋಡುವಂತೆ ಅಂತಿಮ ಸಂದರ್ಶನ ನೀಡಿದೆ. ಪರದೇಶವಾಸದ ನನ್ನ ತಾರುಣ್ಯದ ಆಸೆಯನ್ನು ಕಂಠಪೂರ್ತಿ ಉಣಿಸಿದ ನಾಪೊಲಿಗೆ ನನ್ನ ಋಣ ಸೂಚನೆಯನ್ನು ಮೌನವಾಗಿ ಮಾಡಿ ಲೇಪೋಂತಾ ನೆಗೆ ಮರಳಿದಾಗ ಸುಬ್ಬಯ್ಯ ನಿದ್ದೆಹೋಗಿದ್ದ. ಅವನನ್ನೆಬ್ಬಿಸದೆ ನಾಪೊಲಿಯ ಜಾನ ಮಾಡುತ್ತಾ ನಿದ್ದೆಹೋದೆ. ಬೆಳಗ್ಗೆ ಇಸ್ಪೇಯ ಕೆಂಪು ಬಸ್ಸು ಬಂದು ಕರೆ ನೀಡಿದಾಗಲೇ ನಮಗೆ ಎಚ್ಚರ. ದಡಬಡನೆ ಸಿದ್ಧರಾಗಿ ಊಟದ ಮನೆ ಯಲ್ಲಿ ಅಲ್ಪೋಪಹಾರ ಮುಗಿಸಿ ಎರಡು ಪೆಟ್ಟಿಗೆ ಎರಡು ಕೈಯಲ್ಲಿ ಹಿಡಿದುಕೊಂಡು, ಕೆಮರಾ ಕೊರಳಿಗೆ ತೂಗಿಸಿ, ಲೇಪೊಂತಾನೆಯ ಹೆಬ್ಬಾಗಿ ಲಿಂದಿಳಿದು ಬಸ್ಸು ಹತ್ತಿ ಕೂತುಬಿಟ್ಟೆ. ಎಲ್ಲರಿಗೂ ಅಂದು ಮಾತಿಗಿಂತ ಮೌನ ಲೇಸು ಎನಿಸಿತ್ತು. ಬಸ್ಸು ಉತ್ತರಇತಾಲಿಯದ ಪ್ರವಾಸಕ್ಕೆ ಹೊರಟುಬಿಟ್ಟಿತು. ನಾಪೊಲಿ–ರೋಮ್–ಪೀಸಾ–ಜನೋವ–ತೊರಿನೊ ಮಿಲಾನೊ. ವೆನಿಸ್, ಬೊಲೊಞ್ಞಾ. ಫ್ಲಾರೆನ್ಸ್ – ರೋಮ್. ರೋಮನ್ ಸಾಮ್ರಾಜ್ಯದ ಇತಿಹಾಸದಲ್ಲಿ, ಮಧ್ಯಯುಗದ ಚರಿತ್ರೆಯಲ್ಲಿ, ಐರೋಪ್ಯ ಬೌದ್ಧಿಕ–ರಾಜಕೀಯ ಸಾಮಾಜಿಕ ಸಾಹಿತ್ಯಕ ಜೀವನಕ್ಕೆ ಸ್ಫೂರ್ತಿಯ ನ್ನೊದಗಿಸಿದ ಮಹಾನ್ ಕೇಂದ್ರಗಳಿಗೆ ಯಾತ್ರೆ. ಐರೋಪ್ಯ ಇತಿಹಾಸ ವನ್ನು ಓದಿದ ಯಾರಿಗೆ ತಾನೇ ಈ ಯಾತ್ರೆ ರೋಮಾಂಚನವುಂಟು ಮಾಡದು? ನಿಜವಾಗಿ ಉತ್ತರ ಇತಾಲಿಯದ ಯಾತ್ರೆ ರೋಮಿನಿಂದ ಆರಂಭ – ರೋಮಿನಲ್ಲಿ ಕೊನೆ. ರೋಮ್ ಏಳು ಬೆಟ್ಟಗಳ ನಗರ–ಏಳು ಸುತ್ತಿನ ಕೋಟೆ. ಮನುಷ್ಯನ ಇತಿಹಾಸ ಏಳು ಪದರಾಗಿ ಮಡುವು ಕಟ್ಟಿ ಇಲ್ಲಿ ನಿಂತಿದೆ. ಇದು ಏಳೂ ಹೌದು. ಬೀಳೂ ಹೌದು. ಬಾಳೂ ಹೌದು. ಬಾಳಿಕೆಯ ತತ್ತ್ವ ಯಾವುದು? ರಾಜಕೀಯದಲ್ಲಿ, ಸಮಾಜದಲ್ಲಿ, ಕಲೆಯಲ್ಲಿ.

ಸಾಹಿತ್ಯದಲ್ಲಿ, ಸೌಂದರ್ಯದಲ್ಲಿ? ರೋಮ್ ಪ್ರಶ್ನೆ ಕೇಳಬೇಕು, ರೋಮ್ ಉತ್ತರ ಹೇಳಬೇಕು. ಇತಿಹಾಸದಲ್ಲೂ ಹಾಗೆ, ವರ್ತಮಾನದಲ್ಲೂ ಹಾಗೆಯೇ. ಕ್ಯಾಥೊಲಿಕ್ ಧರ್ಮಾನುಯಾಯಿಗಳ ಪವಿತ್ರ ನಗರ ಕಲೆಯ ಆರಾಧಕರಿಗೂ ಪವಿತ್ರ ಸ್ಥಾನವೇ, ಇಟಾಲಿಯನ್ ಸಾಹಿತ್ಯಕ್ಕೂ ಕೇಂದ್ರವೇ ಆಗಿದೆ. ಕೊಲಿಸ್ಸಿಯಂ, ಸರ್ಕಸ್ ಮ್ಯಾಕ್ಸಿಮಸ್ ನೋಡಬೇಕು, ಸ್ಯೆಂಟ್ ಪೀಟರ್ಸ್ ಇಗರ್ಜಿಯನ್ನು, ವ್ಯಾಟಿಕನ್ ಚಿತ್ರ ಶಾಲೆ, ಸಿಸ್ಟೇನ್ ಚಾಪಲ್‌ನ ಸೌಂದರ್ಯ ಸವಿಯಬೇಕು, ವಿಯಾವಸೆತೋದಲ್ಲಿ ಕೆಲಕಾಲ ಕಳೆಯ ಬೇಕು, ಮಾಕಾಸ್ ಆರಿಲಿಸ್ ಅರಮನೆ ನೋಡಬೇಕು, – ತ್ರೆವಿ ಕಾರಂಜಿಗೆ ನಾಣ್ಯ ಎಸೆದು ಮತ್ತೊಮ್ಮೆ ಇತಾಲಿಯದ ಯಾತ್ರೆ ನೆರವೇರುವಂತೆ ಗ್ಯಾರಂಟಿ ಮಾಡಿಕೊಳ್ಳಬೇಕು – ಹೀಗೆ ಏನೇನೋ ಕಿರಿಯಾಸೆ, ಹಿರಿಯಾಸೆ. ಎಲ್ಲವೂ ಪೂರ್ತಿಯಾಗುವ ಸಂದರ್ಭ ಇರಲಿಲ್ಲ. ನನ್ನ ಸಂಸ್ಥೆಯ ಉದ್ದೇಶ ಮುಖ್ಯವಾಗಿ ಆರ್ಥಿಕವಾಗಿರುತ್ತ ನನ್ನ ಐತಿಹಾಸಿಕ ಪ್ರಜ್ಞೆಯನ್ನೂ, ಸೌಂದರ್ಯಾಸಕ್ತಿಯನ್ನೂ ವಿಶೇಷ ಕೆರಳಿಸಿಕೊಂಡರೆ ನಿರಾಶೆ ಕಟ್ಟಿಟ್ಟದ್ದು ಎಂದು ಒತ್ತಿ ಬರುವ ಆಶೋತ್ತರಗಳನ್ನು ಅದುಮಿ ಹಿಡಿಯುವುದೇ ನನ್ನ ಕರ್ತವ್ಯವಾಗಿತ್ತು. ಹಣವಿಲ್ಲದವನು ಪರದೇಶದಲ್ಲಿ ನಿಜವಾಗಿ ನೊಣ. ನಾನಂತೂ ಪರಾಧೀನ – ಕೈಕಾಲು ಬಾರದ ಮಗುವಿನಂತೆ. ತಾಯಿ ಕರೆದಲ್ಲಿ ಹೋಗಿ ತೋರಿಸಿದಷ್ಟು ಪ್ರಪಂಚವನ್ನೇ ನೋಡಿ ಆನಂದಿಸಬೇಕು. ಹಾಕಿದ ರಂಗೋಲಿಗಿಂತ ಆಚೆ ಈಚೆ ಕದಲಿದರೂ ಎಲ್ಲಿ ಬಸ್ಸು ತಪ್ಪಿ ಹೋಗಿ ಮಹಾನಗರದಲ್ಲಿ ತಬ್ಬಲಿಯಾಗಿಬಿಡುತ್ತೇನೋ ಎಂಬ ಭೀತಿ. ಇಂಥ ಅಸಹಾಯತೆಯ ಪರಾಕಾಷ್ಠೆ ಮಿಲಾನ್ ನಗರದಲ್ಲಿ ಮುಟ್ಟಿ ನನಗೆ ಅಳು ಬರುವಂತಾಯಿತು. 'ಏನಿ' ಕೇಂದ್ರ ಕಚೇರಿಯಲ್ಲಿ ಚಲನ ಚಿತ್ರ ತೋರಿಸುತ್ತಿದ್ದಾಗ ಹೊರಗೆ ಬಂದು ಕೈ ಹಿಸುಕಿಕೊಂಡೆ. ಲಿಯೋನಾರ್ದೊ ಡಾವಿಂಚಿಯ 'ಅಂತಿಮ ಭೋಜನ' (Last Supper) ಮಿಲಾನಿನ ಯಾವುದೋ ಇಗರ್ಜಿಯಲ್ಲಿದೆ ಎಂದು ಕೇಳಿದ್ದೆ. ಆದರೆ ಬಿಡುವಿಲ್ಲದ ಕಾರ್ಯಕ್ರಮದ ನಡುವೆ ಅದಕ್ಕೆ ವೇಳೆಯಿಲ್ಲ. ಯಾವುದನ್ನಾದರೂ ತಪ್ಪಿಸಿ ಹೋಗೋಣ ಎಂದರೆ ದಾರಿ ತಪ್ಪುವ ಅಂಜಿಕೆ. ರೋಮ್‌ನಲ್ಲಿ ಊರಿಗೆ ಹೋಗುವ ಸಾಮಾನಿನ ಬಹುಭಾಗವನ್ನು ಬಿಟ್ಟು, ಎರಡು ವಾರಗಳ ಪ್ರವಾಸಕ್ಕೆ ಬೇಕಾಗುವಷ್ಟು ಮಾತ್ರ ಹಿಡಿದುಕೊಂಡು ಬಸ್ಸು ಏರಿದೆವು.

ರೋಮ್ ಹೊರವಲಯದ ಆಜಿಪ್ ಮೋಟೆಲಲ್ಲಿ ಮಧ್ಯಾಹ್ನದ ಭೋಜನ ತೀರಿಸಿ ಅದೇ ರಾತ್ರಿ ನಾವು ಪೀಸಾ ಮುಟ್ಟಬೇಕೆಂದು ನಿಶ್ಚಯ ವಾಗಿತ್ತು. ಪೀಸಾ ಮುಟ್ಟಿದಾಗ ನಡು ರಾತ್ರಿ.

### ○ ○ ವಾಲುಗೋಪುರದಿಂದ ಜನೋವ

ಪ್ರಾತಃಕಾಲ ಪೀಸಾನಗರದ ಪ್ರಖ್ಯಾತ ವಾಲುಗೋಪುರವನ್ನು ನೋಡುವುದೇ ಮೊದಲ ಕಾರ್ಯಕ್ರಮ. 180 ಅಡಿ ಎತ್ತರದ ಈ ಗೋಪುರದ ಸುರುಳಿ ಮೆಟ್ಟಲೇರಿ ಇಡಿ ನಗರವನ್ನು ವೀಕ್ಷಿಸಬಹುದು. ಗೋಪುರದ ಸ್ಥಿತಿ ಮಾತ್ರ ಕೆಲವು ವರ್ಷಗಳಿಂದ ಚಿಂತಾಜನಕವಾಗಿದೆ. ಕೆಲವು ಸಹಸ್ರಾಂಶ ಮಿಲ್ಲಿಮೀಟರುಗಳಷ್ಟು ವಾಲುವುದಕ್ಕೆ ಆರಂಭಿಸಿ ಬಿಟ್ಟಿದೆ. ಇತಿಹಾಸದ ಕಾಲದಲ್ಲಿ ವೈಚಿತ್ರ್ಯಕ್ಕಾಗಿ, ವಾಸ್ತುವಿನಚಾತುರ್ಯ ಪ್ರ ದರ್ಶನಕ್ಕಾಗಿ ವಾಲಿಸಿ ಕಟ್ಟಿದ ಗೋಪುರದ ಅಡಿಪಾಯ ತುಸುತುಸುವೇ ಸಡಿಲಾಗುತ್ತ ಇನ್ನೂ ಕೆಲ ವರ್ಷಗಳಲ್ಲಿ ಅಡ್ಡ ಬೀಳುವ ಲಕ್ಷಣ ಕಾಣಿಸುತ್ತ ಇದೆ. ಇತಾಲಿಯದ ಬುದ್ಧಿಶಾಲಿ ಇಂಜಿನಿಯರುಗಳಿಗೂ ಇದನ್ನು ರಕ್ಷಿ ಸುವುದು ಹೇಗೆಂದು ಅರಿವಾಗುತ್ತಿಲ್ಲವಂತೆ. ಬಹುಶಃ ಬಿದ್ದಮೇಲೂ ಇದರ ಪ್ರವಾಸಿ ಆಕರ್ಷಣೆ ಕಡಮೆಯಾಗಲಾರದು ಎಂದು ನಾನಂದು ಕೊಂಡಿದ್ದೇನೆ. 'ಪತಿತವಾದ ವಾಲುಗೋಪುರ ನೋಡಲು ಬನ್ನಿ' ಎಂದು ಇತಾಲಿಯನ್ ಜಾಹೀರಾತು ಸಾರಿಬಿಟ್ಟರೆ ಬಿದ್ದ ಗೋಪುರವನ್ನು ನೋಡಲು ಅಮೆರಿಕದ ಅಲೆಮಾರಿ ಜೀವಗಳು ಮತ್ತೊಂದು ಬಾರಿ ಪೀಸಾಕ್ಕೆ ಬಂದಾರು. 'ನಾವು ಮೇಲಕ್ಕೆ ಹೋದಗಳಿಗೆಯಲ್ಲೇ ಬಿದ್ದರೆ ಹೇಗೆ?' ಅಂತ ನಮ್ಮ ಗುಂಪಿನ ಒಬ್ಬರು ಕೇಳಿಯೇಬಿಟ್ಟರು. ಅದಕ್ಕೆ ಫರ‍್ರೊಲ ಉತ್ತರ: 'ನಿಮ್ಮ ಹೆಸರು ಇತಾಲಿಯದ ಇತಿಹಾಸದಲ್ಲಿ ಅಜರಾಮರವಾಗಿ ನಿಂತುಬಿಡು ತ್ತದೆ'! ಈಗಂತೂ ವಾಲುಗೋಪರ ನೆಟ್ಟಗೆ – ಅಂದರೆ 90° ಅಲ್ಲ 89.00001° ಅಂತ ಇಟ್ಟುಕೊಳ್ಳಿ; ಮತ್ತದರ ಚಲನೆ ವರ್ಷಕ್ಕೆ ಸರಾಸರಿ 0.00001ರಂತೆ; ಅಡ್ಡಬೀಳುವ ಅಪಾಯರೇಖೆ ಇನ್ನೂ ದೂರವಿದೆ ಎನ್ನುವಾ – ನಿಂತೇ ಇದೆ. ಪೀಸಾದ ಹೊರವಲಯದಿಂದಲೇ ಕಣ್ಣನ್ನು

ಸೆಳೆದು ನೋಡದೆ ಹೋಗಬೇಡಿ, ಅವಾಯೆ (ಒಳಗೆ ಬನ್ನಿ) ಎಂದು ವಿನಯ ದಿಂದ ಪಿಸುಗುಟ್ಟುತ್ತದೆ. ಗೋಪುರದ ಸಮೀಪ ಸೋವನೀರ್ ಅಂಗಡಿ ಗಳ ಸಾಲು ಸಾಲು. ಗೋಪುರದ ಬಳಿ, ಹೊರಗೆ. ಬಯಲ ನಡುವಿನ ಚೆಲುವಾದ ಇಗರ್ಜಿಯ ಒಳಗೆ ಹೊರಗೆ, ಸೊವನೀರಂಗಡಿಗಳಲ್ಲಿ ಎಲ್ಲಿ ನೋಡಿದರೂ ನಿತ್ಯಜಾತ್ರೆ. ನಖಶಿಖಾಂತ ನೀವು ಧರಿಸುವ ಉಡುಗೆ. ಉಪಯೋಗಿಸುವ ವಸ್ತುಗಳು ಎಲ್ಲದರ ಮೇಲೂ ಪೀಸಾದ ಮಾಲು ಗೋಪುರದ ಅಚ್ಚು, ಚಿತ್ರ, ಸುನೇರಿ. ಚಿತ್ರದ ಕಾರ್ಡುಗಳಿಗಂತೂ ಗಡಿ ಮಿತಿ ಇಲ್ಲ. ನೂರು ಲೀರೆಯಿಂದ ಸಾವಿರಾರು ಲೀರೆಯ ವರೆಗೂ ಪೀಸಾದ ನೆನಪಿಗಾಗಿ ಅಲ್ಲಿನ ಗುಡಿಕೈಗಾರಿಕೆ ತಯಾರಿಸಿದ ಕುಶಲ ಸಾಮಗ್ರಿಗಳು: ಕೆಮರಾ ಹಿಡಿದುಕೊಂಡವರಿಗೆ ಪೀಸಾದ ಪರಿಸರದಲ್ಲಿ ಸುಗ್ಗಿ–ಎತ್ತ ನೋಡಿದರೂ ಸಂಭ್ರಮ. ವಾಸ್ತು, ಚಿತ್ರ, ವರ್ಣಚಿತ್ರ – ಪ್ರತಿ ಕೋನ ದಲ್ಲಿಯೂ ಆಕರ್ಷಕವೆನಿಸುವ ಭಿನ್ನ ಭಿನ್ನ ದೃಶ್ಯಾವಳಿ. ಸ್ಥಳದಲ್ಲೇ ಅವಸರ ದಿಂದ ಒಂದೆರಡು ರೋಲು ಮುಗಿಸಿ ಸ್ವಸ್ಥಚಿತ್ತನಾಗಿ ಬಸ್ಸಿನಲ್ಲಿ ಕೂತೆ. ಅಲ್ಲಿ ನಾನು ತೆಗೆದ ಮಾಲುಗೋಪುರದ ಒಂದು ಚಿತ್ರವಂತೂ ಬಹಳ ಸ್ವಾರಸ್ಯವಾಗಿದೆ – ಅದು ಮಾಲಿಕೊಂಡಿರಲಿಲ್ಲ – ನೆಟ್ಟಗೆ ಏರಿ ಊರ್ಧ್ವ ಮುಖಿ. ಚಿತ್ರದಲ್ಲಾದರೂ ಅನನ್ಯ ಸಾಧಾರಣ – ಎಂತೆಂಥ ಶಿಲ್ಪಿಗ ಗಳಿಂದಲೂ ಆಗದ ಕೆಲಸವನ್ನು ನನ್ನ ಮಾಲು ಕೆಮರಾ ಮಾಡಿಬಿಟ್ಟಿತ್ತು!

ಪೀಸಾದಿಂದ ಜನೋವದ ದಾರಿಯಲ್ಲಿ ಇತಾಲಿಯದ ಪ್ರಖ್ಯಾತ ರಿವೇರಾ ಭಾಗ ತೊಡಗುತ್ತದೆ. ಲಾಸ್ಪೆಜ್ಸಿಯಾ, ರಪಾಲ್ಲೊ, ಪೊರ್ತೊ ಫಿನೊ, ಸೆಸ್ತ್ರಿ, ಸವಾನೊ, ಸ್ಯಾನ್‌ರಿಮೊ – ಇವು ಇತಾಲಿಯದ ಲಿಗೂರಿ ಯನ್ ಕರಾವಳಿಯ ಪ್ರಖ್ಯಾತ ಬೀಚುಗಳು. 80 ಮೈಲಿನ ಈ ಕಡಲಕರೆ ಪ್ರಪಂಚದ ಅತ್ಯಂತ ಆಕರ್ಷಕವಾದ ವಿಲಾಸಭೂಮಿ. ಇಲ್ಲಿಗೆ ಬಾರದ ಶ್ರೀಮಂತರಿಲ್ಲ, ಬುದ್ಧಿಜೀವಿಗಳಿಲ್ಲ, ವರ್ಚಸ್ವಿಗಳಿಲ್ಲ. ಬ್ರಿಟಿಷ್ ಲೇಖಕ ಸಾಮರ್ಸೆಟ್ ಮಾಮ್ ಇಲ್ಲೇ ಬಂಗಲೆ ತೆಗೆದುಕೊಂಡಿದ್ದಾನೆ. ಇತಾಲಿ ಯದ ತರುಣ ಉದ್ದಿಮೆದಾರರಿಗೆಲ್ಲ ಇಲ್ಲಿ ವಿಲ್ಲಾಗಳಿವೆ.ಜರ್ಮನ್ ಪ್ರವಾಸಿ ಗಳಿಂತೂ ಗ್ರೀಷ್ಮಋತುವಿನಲ್ಲಿ ಇಲ್ಲಿಗೆ ತಂಡೋಪ ತಂಡವಾಗಿ ದಾಳಿ ಇಡು ತ್ತಾರೆ. ಇದಕ್ಕೆ ಇತಾಲಿಯನರು 'ಜರ್ಮನರ ಮೂರನೆ ದಾಳಿ' ಎಂದು ಕರೆ ಯುತ್ತಾರೆ. ಮೊದಲನೆಯದು ಕ್ರಿಸ್ತ ಶಕ ಐದನೇ ಶತಮಾನದ ಗೊಥಿಕ್

ಆಕ್ರಮಣ, ಎರಡನೆಯದು ನಾಝೀ ಜರ್ಮನಿಯ ದಾಳಿ, ಮೂರನೆ ಯದು ಇತಾಲಿಯನರಿಗೆ ಪ್ರಿಯವಾದ ಈ ಪ್ರವಾಸಿ ಸುಗ್ಗಿ. ಎರಡು ಲಕ್ಷ ಜರ್ಮನರು ವರ್ಷವರ್ಷವೂ ಇಲ್ಲಿನ ಬೀಚಿನ ಹೋಟೆಲುಗಳನ್ನೂ, ವಿಲ್ಲಗಳನ್ನೂ, ತುಂಬಿ ಇತಾಲಿಯನ್ ಸರ್ಕಾರದ ಬೊಕ್ಕಸ ತುಂಬಿಸು ತ್ತಾರೆ. 'ಮೊದಲು ಫೊಕ್ಸಾವೇಗನ್ (ಪೂರ್ವ ಜರ್ಮನ್ ಕಾರು)ನಲ್ಲಿ ಬರುತ್ತಾ ಇದ್ದರು, ಈಗ ಮರ್ಸಿಡಿಸ್‌ನಲ್ಲಿ ಬರುತ್ತಾರೆ' ಎಂದು ಬೀಚಿನ ಹೊಟೆಲಿಗರು ಜರ್ಮನ ಆರ್ಥಿಕ ಪ್ರಗತಿಯ ಲೆಕ್ಕ ಹಿಡಿಯುತ್ತಾರೆ. ಮರ್ಸಿಡಿಸ್ ಜಗತ್ತಿನ ಅತಿ ಗೌರವಾರ್ಹ ಮೋಟಾರುವಾಹನ – ಒಬ್ಬ ವ್ಯಕ್ತಿಯ ಅಂತಸ್ತನ್ನು ಅಳೆಯುವ ಮಾಪಕ, ಮಾನ. ಇದರ ಸ್ವಾಗತಕ್ಕೆ ಇತಾಲಿಯನ್ ಜನ ಸರ್ವದಾ ಸಿದ್ಧರು; ಜರ್ಮನ್ ಮಹಿಳೆಯರ ಉಪ ಚಾರಕ್ಕೆ 'ಗಿಳಿ'ಗಳನ್ನು ಸಾಕಿದ್ದಾರಂತೆ. ಅರಗಿಳಿಗಳಲ್ಲ, ನರಗಿಳಿಗಳು. ಈ ಪುರುಷವೇಶ್ಯೆಯರನ್ನು – ವಿಟರನ್ನು – 'ಪಪಾಗಲ್ಲೋ' ಎನ್ನುತ್ತಾರೆ. ಮರ್ಸಿಡಿಸ್‌ನಲ್ಲಿ ಆಲ್ಪ್ಸ್ ಬೆಟ್ಟ ದಾಟಿ ಬರುವ ವಿಧವೆಯರು, ವಿರಹಿಣಿ ಯರು, ಸ್ವೈರಿಣಿಯರು ಮುಂತಾದವರಿಗೆ ಬೇಡಿದ ಸೇವೆ ನೀಡುವುದನ್ನೆ ವೃತ್ತಿಯಾಗಿ ಮಾಡಿಕೊಂಡ ಸುಖಪುರುಷರಿಗೆ ಗ್ರೀಷ್ಮದಲ್ಲಿ ಸುಗ್ಗಿ. ಅದೇ ಅವರ ವಾರ್ಷಿಕ ಸಂಪಾದನೆಯ ಕಾಲ. ಮೇ ತಿಂಗಳಿಂದ ಅಕ್ಟೋಬರದ ವರೆಗಿನ ಆರು ತಿಂಗಳು ಇತಾಲಿಯನ್ ರಿವೇರಾದಲ್ಲಿ ವಿದೇಶ ವಿನಿಮಯ ಹುಚ್ಚುಹೊಳೆಯಾಗಿ ಹರಿಯುತ್ತದೆ. ಗಡಿಯಲ್ಲೇ ಫ್ರಾನ್ಸಿನ 'ಮೊಂತೆ ಕಾರ್ಲೊ' – ಜಗತ್ತಿನ ಅಗ್ರಗಣ್ಯ ಜೂಜುಕಟ್ಟೆ – ಬೇರೆ ಇದೆ. ಸ್ಪೆಜ್ಜಿಯಾ ದಿಂದ ಲಿಗೋರಿಯನ್ ಕರಾವಳಿಯನ್ನು ಬಳಸಿಕೊಂಡು ಬಸ್ಸು ಮುಂದು ವರಿಯುತ್ತಿದ್ದಂತೆ ಬೀಚಿನ ದೃಶ್ಯಗಳು ನೋಡಸಿಕ್ಕಿದುವು. ನೂರು ಮಾರಿ ಗೊಂದು ಬಟ್ಟೆ ಬದಲಾಯಿಸುವ ಗೂಡು. ಕರೆಯಲ್ಲಿ ಓಡಾಡುವ ಅರೆ ಬೆತ್ತಲೆ ಸ್ತ್ರೀರತ್ನಗಳು, ಪುರುಷವೈಡೂರ್ಯಗಳು, ಮಕ್ಕಳು, ಮರಿ. ಮೈಲು ಮೈಲು ಹರಡಿದ ಮಳಲ ರಾಶಿಯ ಮೇಲೆ ಸೂರ್ಯಸ್ನಾನ, ಉಪ್ಪುನೀರ ಸ್ನಾನ, ಮರಳಸ್ನಾನ – ಆಟ, ಊಟ, ನೋಟ, ಬೇಟ, ಕೂಟ. ಮನುಷ್ಯಜನಾಂಗದ ವಿಲಾಸಜೀವನದ ನಾನಾ ಮುಖಗಳನ್ನು ಏಕತ್ರ ಸೇರಿಸಿ ಅದನ್ನೇ ಒಂದು ಮಹೋದ್ಯಮವಾಗಿ ಬೆಳಸಿಕೊಂಡು ಇತಾಲಿಯನ್ ರಿವೇರಾ ಪ್ರವಾಸಿ ಉದ್ಯಮದ ಕೇಂದ್ರಸ್ಥಾನವಾಗಿಬಿಟ್ಟಿದೆ.

ಪ್ರವಾಸಿ ಋತುವಿನಲ್ಲಿ ಸಾನ್ ರೀಮೋದಲ್ಲಿ ಅಖಿಲ ಇತಾಲಿಯ ಸಂಗೀತ ಸ್ಪರ್ಧೆ ನಡೆಯುತ್ತದೆ, ವಿಶ್ವಸುಂದರಿ–ಕನಿಷ್ಠ ಇತಾಲಿಯನ್ ವಿಶ್ವ ಸುಂದರಿ–ಸ್ಪರ್ಧೆ ನಡೆಯುತ್ತದೆ. ಸಿನಿಮಾ, ನಾಟಕ, ಆಪೆರಾ, ಜಾನಪದ ಗೀತ, ಜೂಜು, ನೈಟ್ ಕ್ಲಬ್, ಮೋಟರ್ ರೇಸ್–ಯಾವುದು ನಿಮಗೆ ಆದನ್ನಾರಿಸಿಕೊಂಡು ಸಂತೋಷಪಡಿ. ಸಂಸಾರದ ದುಃಖಕ್ಕೆ ಇಲ್ಲಿ ಪ್ರವೇಶ ವಿಲ್ಲ (No admission) ಮನುಷ್ಯ ವ್ಯಕ್ತಿ ಕುಟುಂಬ ಕಟ್ಟಿದ್ದಾನೆ, ಅವನೇ ಅದನ್ನೊಡೆಯುತ್ತಾನೆ. ಒಡೆದ ಕುಟುಂಬ, ನೊಂದ ಜೀವ, ದುಡಿದು ಬೇಸತ್ತ ಸಿರಿವಂತ, ವಿಲಾಸಪ್ರಿಯ, ಕುತೂಹಲಿ, ಜ್ಞಾನಿ–ಎಲ್ಲರಿಗೂ ಇಲ್ಲಿ ಬೇಕಾದದ್ದು ಸಿಗುತ್ತದೆ. ಆರಾಮ ಇಲ್ಲಿ ಹರಾಮವಲ್ಲ; ಅದು ಇಲ್ಲಿನ ಉದ್ಯಮ, ಉದ್ಯೋಗ.

ಜನೋವಾ ಮುಟ್ಟಿದಾಗ ರಾತ್ರಿ 9.30. ಬೀಚಿನ ದೃಶ್ಯಗಳನ್ನು ನೋಡಿದ್ದರಿಂದಲೋ ಏನೋ, ಎಲ್ಲರೂ ಅತಿಶಯ ಉಲ್ಲಾಸದಿಂದಿದ್ದರು. ಊಟದ ಶಾಸ್ತ್ರ ಮುಗಿಸಿ ಅವರವರ ಅಭಿರುಚಿಗನುಸಾರವಾಗಿ ಜನೋವದ ರಾತ್ರಿ-ಜೀವನದ ಸವಿ ನೋಡಲು, ಅನುಭವಿಸಲು, ತೆರಳಿದರು. ನಾನು ಸುಬ್ಬಯ್ಯನ ಜತೆ ರೈಲ್ವೇ ನಿಲ್ದಾಣ ನೋಡಲು ಹೊರಟೆ. ಇದೊಂದು ಬಾಲ್ಯದಿಂದಲೂ ನನಗಂಟಿದ ಹವ್ಯಾಸ: ಯಾವ ಊರಿಗೆ ಹೋದರೂ ಅಲ್ಲಿನ ರೈಲ್ವೇ ಸ್ಟೇಶನ್ ನೋಡದಿದ್ದರೆ ತೃಪ್ತಿ ಇಲ್ಲ. ಅತಿ ಅಗ್ಗದ ಪ್ರವೇಶ ಸಿಗುವುದು ರೈಲ್ವೇ ಸ್ಟೇಶನಿಗೆ ತಾನೆ. ಅಲ್ಲಿನ ಜನಸಂಮರ್ದ ಚಲನೆ, ಗ್ರಂಥಾಲಯ, ಅಪ್ಪುಕಟ್ಟು ನನಗೆ ಪ್ರೇಕ್ಷಣೀಯ. ರೈಲು ತಡವಾಗಿ ಬಂದರೆ ನನಗೆ ಬೇಸರವಾದದ್ದಿಲ್ಲ. ಜನೋವದಲ್ಲೂ ಬೇಸರವಾಗಲಿಲ್ಲ. ರೈಲಿಗೆ ಕಾದು ನಿಂತವರಲ್ಲಿ ಲಂಡನ್ನಿಗೆ ಹೊರಟ ಭಾರತೀಯ ಸಡಗರಜೀವಿಗಳೂ ಇದ್ದರು. ಅವರ ಹತ್ತಿರ ಎರಡು ಕುಶಲ ಪ್ರಶ್ನೆ ಮಾಡಿ, ಎದುರುಗಡೆ ಇದ್ದ ಕೊಲಂಬಸನ ಪ್ರತಿಮೆಯ ಹತ್ತಿರ ಅರ್ಧತಾಸು ಕೂತೆ. ಜನೋವದಲ್ಲಿ ಕೊಲಂಬಸನ ಹುಟ್ಟಿದ ಮನೆಯನ್ನು ಆಮೇಲೆ ನನಗೆ ತೋರಿಸಿದರು. ನೂತನ ಪ್ರಪಂಚದ ಹರಿಕಾರನಾದ ಕೊಲಂಬಸನಿಗೆ ಊರಿನವರು ಪ್ರತಿಮೆ ಮಾಡದಿರುತ್ತಾರೆಯೆ? ರಾತ್ರಿಹೊತ್ತು–ಕೆಮರಾ ಇದ್ದಿದ್ದರೆ–ಒಂದು ಚಿತ್ರಸಂಪಾದನೆ ಮಾಡಬಹುದಿತ್ತು, ಎಂದುಕೊಂಡೆ.

20ನೇ ತಾರೀಕು ಸೋಮವಾರ ಪ್ರಾತಃಕಾಲ 9ರಿಂದ 11ರ ವರೆಗೆ

ಪ್ರೇಕ್ಷಣೀಯ ಸ್ಥಳ. ನಗರಸಭೆಯ ಪಕ್ಕದ ಒಂದು ವಸ್ತುಸಂಗ್ರಹಾಲಯದಲ್ಲಿ ಪಗನಿನಿ (ಇತಾಲಿಯದ ಪ್ರಖ್ಯಾತ ವಯೋಲಿನ್ ವಾದಕ) ಬಾರಿಸಿದ ವಯೋಲಿನನ್ನು ಭದ್ರವಾಗಿ ಬೀಗಹಾಕಿ ಗಾಜಿನ ಬೀರುವಿನಲ್ಲಿರಿಸಿದ್ದರು. ಜನೋವದ ವಿಮಾನ ನಿಲ್ದಾಣದಲ್ಲಿ ಸಿದ್ಧತೆಯ ಸ್ಥಳಕ್ಕೂ ಭೇಟಿ ಕೊಟ್ಟೆವು. ಜನೋವದ ಸುತ್ತುಮುತ್ತ ಇರುವ ಗುಡ್ಡಗಳಿಂದಾಗಿ ಈಗಿರುವ ನಿಲ್ದಾಣದಲ್ಲಿಳಿಯುವುದು ಅಪಾಯವೆಂದು ಹೊಸ ಸ್ಥಳದಲ್ಲಿ, ಹೊಸ ರೀತಿಯಲ್ಲಿ ನಿಲ್ದಾಣ ರಚನೆ ಕೈಗೊಂಡಿದ್ದಾರೆ. ಸಮುದ್ರವನ್ನೇ ಹಿಂದಕ್ಕೆ ಸರಿಸಿ (ಮುಂಬಯಿಯ ಬ್ಯಾಕ್‌ಬೇ ರಿಕ್ಲಮೇಶನ್ ಮಾದರಿಯಲ್ಲಿ) ಕರಾವಳಿಯಲ್ಲಿ ನಿಲ್ದಾಣ ನಿರ್ಮಿಸುತ್ತಿದ್ದಾರೆ. 11ರಿಂದ 1 ಗಂಟೆಯ ವರೆಗೆ ಜನೋವದ ವಾಣಿಜ್ಯ ಸಂಘದಲ್ಲಿ ಸೆಮಿನಾರು ನಡೆಸಿ 'ಎಸ್ಸೊ' ಕಂಪೆನಿಯವರ ಆದರಾತಿಥ್ಯವನ್ನು ಸವಿದು ಅಪರಾಹ್ನ ಲಿನ್‌ಸಾಲ್ದೊ ಉಕ್ಕಿನ ಸ್ಥಾವರವನ್ನು ಸಂದರ್ಶಿಸಿದೆವು. ಆ ರಾತ್ರಿ ಅಲ್ಲೇ ಕಳೆದು 21ರಂದು ಇಟಾಲ್ಸಿಡರ್ ಅವರ ಭಾರೀ ಉಕ್ಕಿನ ಕಾರ್ಖಾನೆಯನ್ನು ಸಂದರ್ಶಿಸಿ ಅಪರಾಹ್ನ ತೊರಿನೊ ದಾರಿಯಾಗಿ ಹೊರಟುಬಿಟ್ಟೆವು. ನಡುವೆ 'ಮಾರ್ತಿನಿ ಮತ್ತು ರೊಸ್ಸಿ' ಎಂಬ ಹೆಸರಿನ ಹೆಸರುವಾಸಿ ಪೇಯದ ಕಾರ್ಖಾನೆ ಇರುವ ಪೆಸ್ಸಿಯೊನೆ ಗ್ರಾಮವನ್ನು ಸುತ್ತಿ ಬಂದೆವು. 'ಮಾರ್ತಿನಿ' – ಇದು ಪ್ರಪಂಚದ ಎಲ್ಲಾ ದೇಶಗಳಲ್ಲಿಯೂ ಗಿರಾಕಿ ಇರುವಂಥ ಒಂದು ಮಾದಕ ಪೇಯ. ಇಂಗ್ಲಂಡಿನ ಸ್ಕಾಚ್‌ವ್ಹಿಸ್ಕಿಯಂತೆ. ಮಾರ್ತಿನಿಕಾರ್ಖಾನೆ ಪೆಸ್ಸಿಯೊನೆ ಹಳ್ಳಿಯ ಒಂದು ಮುಖ್ಯ ಭಾಗ. ಅಲ್ಲಿ ಹಳ್ಳಿಗರಿಗೇ ನೂರಾರು ಜನರಿಗೆ ಉದ್ಯೋಗ. ಇತಾಲಿಯನ್ ಮಾದಕ ಪೇಯಗಳನ್ನು ರೋಮನ್ ಸಾಮ್ರಾಜ್ಯದ ಕಾಲದಿಂದಲೂ ಹೇಗೆ ಹೇಗೆ ಸಿದ್ಧಗೊಳಿಸುತ್ತಿದ್ದರು ಎಂಬುದನ್ನು ತೋರಿಸುವ ವಸ್ತುಸಂಗ್ರಹಾಲಯ ಕಾರ್ಖಾನೆಯ ಮುಂಭಾಗದಲ್ಲಿ ಕಟ್ಟಿದ್ದರು. ಅಲ್ಲಿ ದ್ರಾಕ್ಷಿಹಣ್ಣು ಹಿಂಡುವ ತರತರದ ಗಾಣಗಳು, ವೈನ್ ತುಂಬಿಡುವ ಮಣ್ಣಿನ ಗುಡಾಣಗಳು, ಗ್ರೀಕ್ ಪರಂಪರೆಯ ಪಾನಪಾತ್ರೆಗಳು ಎಲ್ಲವನ್ನೂ ಸಂಗ್ರಹಿಸಿಟ್ಟಿದ್ದರು. ಎಲ್ಲವನ್ನೂ ತೋರಿಸಿ ಆದಮೇಲೆ ಕೆಂಪು ಮಾರ್ತಿನಿ ಸೇವೆಯೂ ನಡೆಯಿತು. ಕುಡಿದು ಮೂತಿ, ಮೂಗು ಕೆಂಪಾದ ಇಷ್ಟೇಯ ಲ್ಯಾಟಿನ್ ಅಮೆರಿಕನ್ ತರುಣರನ್ನು ನೋಡಿ 'ಈಗ ನೀವೇ ಈ ಕಂಪೆನಿಗೆ ಜಾಹೀರಾತು ಆಗಿಬಿಟ್ಟಿದ್ದೀರಿ; ಆದ್ದರಿಂದ ವಂದನಾರ್ಪಣೆ

ಮನ್ನಾ ಮಾಡುವ ಎಂದೆ. ವಂದನಾರ್ಪಣೆ ವಿಷಯ ಎರಡು ಮಾತು ಈ ಸಂದರ್ಭದಲ್ಲಿ ಹೇಳಬಹುದು. ಹದಿನೈದು ದಿನಗಳಲ್ಲಿ ಎಷ್ಟೋ ಸ್ಥಳಗಳನ್ನು ನಾವು ಸಂದರ್ಶಿಸಬೇಕಾಗಿ ಬಂದಿರುವಾಗ, ಇಸ್ಟೇ ಪರವಾಗಿ ಒಂದೊಂದು ಕಡೆ ಒಬ್ಬೊಬ್ಬ ವಿದ್ಯಾರ್ಥಿ ಸಭೆಯ ಕಟ್ಟಕೊನೆಯಲ್ಲಿ ವಂದನಾರ್ಪಣೆ ಮಾಡಬೇಕೆಂದು ನಿಯೋಜಿಸಲಾಗಿತ್ತು. ನಮ್ಮ ಗುಂಪಿನ ವಿಷಯ, ಅಧ್ಯಯನದ ವಿಷಯ, ಇತಾಲಿಯದಲ್ಲಿ ನಮ್ಮನ್ನು ನೋಡಿಕೊಂಡ ವಿಷಯ, ಆತಿಥೇಯ ಸಂಸ್ಥೆಯ ವಿಷಯ ನಾಲ್ಕು ಔಪಚಾರಿಕವಾದ ಮಾತು ಹೇಳಬೇಕು – ಇದು ಸಂಪ್ರದಾಯ. ಎಷ್ಟು ವಿಧವಾಗಿ ಉಪಚಾರದ ಮಾತುಗಳನ್ನು ಹೇಳಬೇಕೋ ಅಷ್ಟನ್ನು ಕೇಳಿದ್ದೇನೆ. ಇಂಗ್ಲಿಷ್ ಮಾಧ್ಯಮದವರು ಹೇಳಿದ್ದನ್ನು ಇತಾಲಿಯನ್ ಭಾಷೆಗೆ ತರ್ಜುಮೆಮಾಡಿ ಹೇಳುತ್ತಿರುವಾಗ ವಂದನೆಗೆ ಸಂಗೀತದ ಇಂಪು, ಕಳೆ, ಕಟ್ಟುತ್ತಿತ್ತು. 'ರಿಪ್ರೆಸೆಂತನೋ ನೊಂತಿನೋವೆ ಪಯೇಸೆ – ಇಪ್ಪತ್ತೊಂಬತ್ತು ದೇಶದ ಪ್ರತಿನಿಧಿಗಳು – ಎನ್ನುವಾಗ ಇತಾಲಿಯನ್ ಭಾಷೆಯ ಮಧುರ ಶ್ರುತಿಗೆ ವಂದನೆ ಸಂಗೀತವಾಗುತ್ತಿತ್ತು.

ರಾತ್ರಿ ಎಂಟೂಕಾಲಕ್ಕೆ ತೊರಿನೋದಲ್ಲಿ ಅಲ್ಲಿನ ವಾಣಿಜ್ಯ ಸಂಘದವರು ಭೋಜನ ಏರ್ಪಾಟು ಮಾಡಿದ್ದರು; ಆದರೆ ನಾವು ತೊರಿನೊ ಮುಟ್ಟುವಾಗ ಹನ್ನೊಂದು ಗಂಟೆ. ಅವಸರವಾಗಿ ಬಟ್ಟೆ ಬದಲಾಯಿಸಿ ನಮ್ಮ ಹೊಟೆಲಿಂದ ಅಂಬಾಸಡರ್ಸ್ ಹೊಟೆಲಿಗೆ ಧಾವಿಸಿದಾಗ ರಾತ್ರಿ ಹನ್ನೆರಡಾಗಿರಬಹುದು; ಆದರೂ ಅಲ್ಲಿನ ಪ್ರತಿಷ್ಠಿತರು ನಮಗಾಗಿ ಕಾದಿದ್ದು ಹಸನ್ಮುಖರಾಗಿ ಹಸ್ತಲಾಘವವನ್ನಿತ್ತು, ಊಟದ ತರುವಾಯ ನಾಲ್ಕು ಭಾಷಣಗಳನ್ನೂ ಬಡಿಸಿಬಿಟ್ಟರು. ಭಾಷಣ ಮುಗಿದ ಮೇಲೆ ಚರ್ಚೆ. ಅದುವರೆಗಿನ ಸಂದರ್ಶನ ಮತ್ತು ಸ್ವನಿರೀಕ್ಷೆಯಿಂದ ನಾನು ಇತಾಲಿಯನ್ ಪ್ರಗತಿಯ ಬಗ್ಗೆ ಒಂದು ತೀರ್ಮಾನಕ್ಕೆ ಬಂದಿದ್ದೆ – ಇಲ್ಲಿ ಅಮೆರಿಕದ ಸಂಘಟನೆಯ ಪ್ರಭಾವ ಪೂರ್ತ ಬಿದ್ದಿರುವುದರಿಂದಲೇ ಇಷ್ಟು ಕ್ಷಿಪ್ರವಾಗಿ ಪ್ರಗತಿ ಸಾಧ್ಯವಾಯಿತು. ವ್ಯಾಪಾರ, ವ್ಯವಹಾರದಲ್ಲಿ ಇತಾಲಿಯನ್ ಜನಕ್ಕೆ ಹೇಳಿಕೊಡಬೇಕಾಗಿಲ್ಲ – 16ನೇ ಶತಮಾನದಲ್ಲಿ ವೆನಿಸ್ ವಿಶ್ವ ವ್ಯಾಪಾರದ ಹೆಬ್ಬಾಗಿಲೇ ಆಗಿತ್ತು; ಆದರೆ ಉತ್ಪಾದನೆಯ ವಿಷಯದಲ್ಲಿ ನವೀಕೃತ ಸಂಘಟನೆಯನ್ನು ಬಳಸಿದ್ದರಿಂದಲೇ ಔದ್ಯಮಿಕ ಪ್ರಗತಿಯ ವೇಗ

ವರ್ಧನೆ ಸಾಧ್ಯವಾಯಿತು. ನನ್ನ ಈ ವಾದವನ್ನು ತೊರಿನೊ ನಗರದ ಪ್ರತಿಷ್ಠಿತ ಉದ್ದಿಮೆದಾರರೂ ಒಪ್ಪಿಕೊಂಡರು.

ಭೋಜನ, ಸಭೆ ಮುಗಿದ ಮೇಲೆ ಎಲ್ಲರೂ ಬಸ್ಸಿನಲ್ಲಿ ಹೋಟೆಲಿಗೆ ಹೋದರು. ಮೊಹಿದೀನ್, ಬರ್ತಲೋನೆ, ಒಬೇನೆ ಮತ್ತು ನನ್ನನ್ನು ಡೈರೆಕ್ಟರ್ ಜನ್ನಾರೋ ಅವರ ಸ್ವಗೃಹಕ್ಕೆ ಕರೆದೊಯ್ದರು. ಎಲ್ಲರೂ ಮಲಗಿರುವುದರಿಂದ ಬರೇ ಅವರ ಮನೆಯನ್ನಷ್ಟೇ ಮುಟ್ಟಿ ಬಂದಹಾಗಾಯಿತು. ತಿನ್ನಲು ಬಿಸ್ಕತು, ಕುಡಿಯಲು ವೈನ್ ಇತ್ತು. ನಾಳಿದು ಸ್ತ್ರೇಸದಲ್ಲಿ ಮನೆಯವರನ್ನು ಭೆಟ್ಟಿಯಾಗಬಹುದು ಎಂದು ಆಶ್ವಾಸನೆಯೊಂದಿಗೆ ನಾವೂ ಹೋಟಲಿಗೆ ಮರಳಿದೆವು.

ಮರುದಿನ ಫಿಯತ್ ಕಾರ್ಖಾನೆಯ ಸಂದರ್ಶನ. ತೊರಿನೊ ಫಿಯತ್‌ನ ಭದ್ರ ಕೋಟೆ ಎಂಬುದನ್ನು ಮೊದಲೇ ಸೂಚಿಸಿದ್ದೇನೆ. ಮರಿ ಕಪ್ಪೆಯಂತಿರುವ ಫಿಯತ್–500ರಿಂದ ಹಿಡಿದು ದೊಡ್ಡ ಅಮೆರಿಕನ್ ಗಾತ್ರದ ಕಾರುಗಳನ್ನು ತಯಾರಿಸುವ ಉತ್ಪಾದನಾ ವಿಭಾಗದಲ್ಲಿ ನಾವು ಒಂದು ತಾಸು ಕಳೆದಿರಬಹುದು. ಆವರ ತರಬೇತಿ ಶಾಲೆಯಲ್ಲೊಂದು ಅರ್ಧ ತಾಸು. ಆ ತರುವಾಯ ನಮಗೊಂದು ವಿಶೇಷ ಸಂಭ್ರಮ ಕಾದಿತ್ತು; ಡಾ. ಜೊವನ್ನಿ ಆನೆಲ್ಲಿ–ಸಂಸ್ಥೆಯ ಅತಿಮುಖ್ಯ ವ್ಯಕ್ತಿ-ಇತಾಲಿಯನ್ ಉದ್ಯಮದ ದೈತ್ಯ(GIANT) –ಅವರ ಭೇಟಿ. ನಾವೆಲ್ಲ ಎಂದಿನಂತೆ ಎಂದುಕೊಂಡು ನಮ್ಮ ನಮ್ಮ ಪ್ರಶ್ನೆಗಳ ಚಿಂತೆಯಲ್ಲಿದ್ದೆವು. ಸಭಾಭವನದಲ್ಲಿ ನಾವು ಆಸೀನರಾಗಿ ಹತ್ತು ಮಿನಿಟು ನಿರೀಕ್ಷೆಯಲ್ಲೇ ಕಳೆಯಬೇಕಾಯಿತು. ಪಕ್ಕದ ಬಾಗಿಲು ತೆರೆಯಿತು. ನಡು ವಯಸ್ಸಿನ – 45ರ ಹರೆಯ ಇರಬಹುದು–ಸಾಮಾನ್ಯ ಮನುಷ್ಯನಂತೆ ತೋರುವ ಒಬ್ಬರು ವೇದಿಕೆಯ ಮೇಲೆ ಬಂದರು. ಎರಡು ಮಿನಿಟು –ಎರಡೇ ಮಿನಿಟು – ನಮ್ಮ ಸ್ವಾಗತ ಮಾಡಿದರು. ವಂದನಾರ್ಪಣೆ ಮಾಡುವವನಿಗೆ ಅಂದು ಫಜೀತಿ; ಆತನ ವಂದನಾರ್ಪಣೆ ಆನೆಲ್ಲಿ ಭಾಷಣಕ್ಕಿಂತ ಉದ್ದವಾಯಿತು. ಆನೆಲ್ಲಿಯ ಮುಖದಲ್ಲಿ ಅಸಹನೆಯ ಛಾಯೆಯನ್ನು ಗುರುತಿಸಬಹುದಾಗಿತ್ತು. ಫಿಯತ್‌ನ ಉನ್ನತೋನ್ನತ ಶ್ರೀಮಾನ್ ಅವರಿಗೆ ಪುರುಸೊತ್ತಿರಲಿಲ್ಲ. ದಿನವನ್ನು ಮಿನಿಟಿಂದ, ಮಿನಿಟನ್ನು ಸೆಕೆಂಡಿಂದ ಅಳೆದು ಬಾಳಬೇಕಾದ ಔದ್ಯಮಿಕ ನಾಯಕತ್ವ ಸುಲಿದ ಬಾಳೆಯ ಹಣ್ಣು ಅಲ್ಲ. ಕಳಿತ ಚಿಗುರಿನ ಕಬ್ಬು ಅಲ್ಲ.

ಯಾವುದೋ ಸಮಿತಿಯ ಚರ್ಚೆಯಿಂದ ಅವರನ್ನು ಕಿತ್ತು ಬಹುಶಃ ನಮಗೆ 'ತೋರಿಸುವ' ಸಲುವಾಗಿ ಮಾತ್ರ ತಂದಹಾಗಿತ್ತು. ಅಷ್ಟು ನಾಟಕೀಯ ವಾಗಿತ್ತು ಸಂದರ್ಶನ.

ಅಪರಾಹ್ನ ಇವ್ರೆಯ ,ದ ಒಲಿವೆತ್ತಿ ಕಾರ್ಖಾನೆಗೆ ಭೆಟ್ಟಿ ನಿಶ್ಚಿತವಾಗಿತ್ತು. ತೊರಿನೋ ಫಿಯತ್ ನಗರವಾದರೆ, ಇವ್ರೆಯು ಒಲಿವೆತ್ತಿನಗರ. ಅದೂ ಇವ್ರೆಯ ಚಿಕ್ಕ ಪಟ್ಟಣ – ಬಹುಶಃ ಅರ್ಧದಷ್ಟು ಜನರಿಗೆ ಒಲಿ ವೆತ್ತಿಯಲ್ಲೇ ಕೆಲಸ ಇರಬೇಕು. ಕಾರ್ಖಾನೆಯ ವಿವಿಧ ವಿಭಾಗಗಳನ್ನು ನೋಡಿ, ಕ್ಯಾಂಟಿನಿನಲ್ಲಿ ಊಟ ಮುಗಿಸಿ 75 ಮೈಲು ದೂರದ ಸ್ಟ್ರೇಸವನ್ನು ಅದೇ ರಾತ್ರಿ ನಾವು ಮುಟ್ಟಬೇಕು. ಸ್ಟ್ರೇಸದಲ್ಲಿ ಡೈರೆಕ್ಟರ್ ಜನ್ನಾರೊ ಅವರಿಗೆ ಒಂದು ವಿಲ್ಲಾ ಇದೆ. ಪ್ರಾಯಃ ತೊರಿನೊ ನಗರದ ಶ್ರೀಮಂತರಿ ಗೆಲ್ಲ ಸರೋವರ ತಟಾಕದ ಈ ನಗರದಲ್ಲಿ ವಿಲ್ಲಾ ಇರಲೇಬೇಕು. ಇಲ್ಲಿ ಯಾವ ಉದ್ಯಮವೂ ಇಲ್ಲ. ಸರೋವರವೇ ಇಲ್ಲಿಯ ಬಂಡವಾಳ. ಸ್ವಿಝರ್ಲೆಂಡಿನ ನಡುವಣ ಸರೋವರಗಳಂತೆ ಸ್ಟ್ರೇಸದ ಜಲಾಶಯವೂ ನಿಸರ್ಗ ನಿರ್ಮಿತ. ಆಲ್ಪ್ಸ್ ಪರ್ವತದ ಹಿಮವೇ ಕರಗಿ ನೀರಾಗಿ ಇಲ್ಲಿ ಸರೋವರವನ್ನು ರಚಿಸಿದೆ. ಉತ್ತರ ಇತಾಲಿಯದ ಆಲ್ಪ್ಸ್ ಬೆಟ್ಟದ ಭಾಗ ದಲ್ಲಿ ಇಂಥ ಸರೋವರಗಳಿಗೆ ಲೆಕ್ಕವಿಲ್ಲ. ಮಜೋರೆ, ಲಿಗಾನೋ, ಲೆಕ್ಕೋ, ಇಸೆಯೋ, ದಿಗಾರ್ದಾ – ಹೀಗೆ ಪ್ರಸಿದ್ಧ ಸರೋವರಗಳ ಪೈಕಿ ಒಂದ ನ್ನಾದರೂ ನೋಡುವ ಭಾಗ್ಯ ನಮಗೆ ಲಭಿಸಿತು. ನಾವು ಇಳಿದುಕೊಂಡಿದ್ದ 'ಹೊಟೆಲ್ ರೆಜಿನಾ ಪೆಲೇಸ್' ಉತ್ಕೃಷ್ಟವಾದ ಸೇವೆ – ಸೌಕರ್ಯಗಳನ್ನೊಳ ಗೊಂಡಿತ್ತು. ಅಲ್ಲಿ ಅತಿಥಿಗಳ ಯಾವತ್ತೂ ಉಪಚಾರಕ್ಕೆ ಸ್ತ್ರೀಯರನ್ನೇ ನೇಮಿಸಿದ ಹಾಗೆ ತೋರಿತು. ವಿಲಾಸಪ್ರಿಯನಾದ ತೊರ್ರೈಸ್‌ಗೆ ಇದು ಆದರ್ಶ ಸನ್ನಿವೇಶವಾಗಿತ್ತು. 'ಗುಡ್‌ನ್ಯಾಟ್' ಎಂದು ಹೇಳಿದರೆ 'ವೆರಿ ಗೂಡ್‌ನೈಟ್' ಎಂದುಬಿಟ್ಟೆ. ರಾತ್ರಿಯ ಹೊತ್ತಿಗೆ ದೀವಿಗೆಗಳ ಬೆಳಕಿಗೆ ಮಸಕುಮಸುಕಾಗಿ ಮಾತ್ರವೇ ಕಂಡ ಸರೋವರವನ್ನು ಎಂದಿಗೆ ಪೂರ್ತಿ ಕಂಡೇನು, ಎಂದು ಬೆಳಗಾದೀತು ಎಂಬ ತವಕದಲ್ಲೇ ನಿದ್ದೆಹೋದೆ.

ನೀಲಜಲರಾಶಿ, ನಡುವೆ ಚಿಕ್ಕ ಹಸುರು ದ್ವೀಪ. ಮಂದಮಾರುತಕ್ಕೆ ತುಸುತುಸುವೇ ದನಿಗುಡುವ ಅಲೆಗಳ ಸಪ್ಪಳ. ಹಿತಮಿತವಾದ ಚಳಿ. ಮಧ್ಯಾಹ್ನವಾಗುತ್ತಿದ್ದಂತೆ ಬೆಚ್ಚನೆ ಗಾಳಿ. ಸರೋವರದ ದಂಡೆಗುಂಟ ನಡೆ

ದಷ್ಟೂ ಆಯಾಸವಿಲ್ಲ; ನಡೆದಷ್ಟೂ ಇದೆ. ಕೆಲವೆಡೆ ಸೋಪಾನಗಳನ್ನಿಳಿದು ನೀರು ಮುಟ್ಟಿ ಕಾಲು ತೊಳೆಯಬಹುದು. ದೂರದಲ್ಲಿ ವಿಹಾರಿಗಳು ಯಾಂತ್ರಿಕ ದೋಣಿಯಲ್ಲಿ ಸರೋವರ ಸುತ್ತುತ್ತಿದ್ದಾರೆ. ನಡು ದ್ವೀಪ ವನ್ನು ಬಳಸಿ ಬರುತ್ತಾರೆ. ನನಗೆ ಈ ಚಳಿ ಹೆಚ್ಚು, ಆದ್ದರಿಂದ ಸರೋವರ ದಲ್ಲಿ ನೌಕಾಯಾತ್ರೆ ನಿಷಿದ್ಧ. ಕಾಲ್ದಣಿಯೆ ಮನದಣಿಯೆ ಸರೋವರಕ್ಕೆ ಚಕ್ಕರ್ ಹೊಡೆದದ್ದೇ ಬಂತು. ಹೆಜ್ಜೆ ಹೆಜ್ಜೆಗೆ ಹುಡುಗಿಯರು, ನಿಜವಾಗಿ ತುಡುಗಿಯರು – ನೋಡಿ ನಗುತ್ತಾರೆ – ಮುಗುಳುನಗೆ. ನೀವು ಕಣ್ಣು ಹಾರಿಸಿದರೆ, ಅವರು ಹುಬ್ಬು ಹಾರಿಸುತ್ತಾರೆ. ನಗುವುದು ಇಲ್ಲಿ ಅಪಾಯ. ಅವರ ನಗುವಿನ ಅರ್ಥ ಮಾಡಿಕೊಂಡರೆ ಕಷ್ಟ, ನಷ್ಟ. ನನ್ನ ಹತ್ತಿರ ಇರುವ – ಸ್ವಿಝರ್ಲೆಂಡ್ ಯಾತ್ರಾನಂತರ ಉಳಿದಿರುವ ಕೇವಲ 40 ಪೌಂಡ್ ಗಳನ್ನು ತವನಿಧಿಯಂತೆ ಕಾಪಾಡದಿದ್ದರೆ ಉಳಿಗಾಲವಿಲ್ಲ. ಜಿಪುಣತನವೇ ಶ್ರೇಯಸ್ಕರ – ಇಹಕ್ಕೂ, ಪರಕ್ಕೂ, ಪರದೇಶಕ್ಕೂ.

ಯಾವುದೋ ಕೆಟ್ಟ ಗಳಿಗೆಯಲ್ಲಿ ಸ್ಟ್ರೇಸದಲ್ಲಿ ಒಂದು ವ್ಯಾಪಾರ ಮಾಡಿದೆ. ಹಿಂದಿನ ದಿನವೇ ನೋಡಿದ ಒಲಿವೆತ್ತಿ ಲೆತ್ತೆರಾ 22 ಚಿಕ್ಕ ಟೈಪರೈಟರು ಕಣ್ಣಮುಂದೆಯೇ ನಲಿಯುತ್ತಿತ್ತು. ಅಂಥ ವೇಳೆ ಡೈರೆಕ್ಟರ್ ಜನ್ನಾರೋ 'ಯಾರಿಗೆ ಬೇಕು ಒಲಿವೆತ್ತಿ?' ಎಂದು ಏಲಂ ಹಾಕಿದಾಗ ಮನಸ್ಸು ತಡೆಯಲಿಲ್ಲ. 20 ಪೌಂಡ್ ಬೆಲೆಗೆ ನನಗಿರಲಿ ಎಂದುಬಿಟ್ಟೆ. ಹೊದಿಕೆ ತೆಗೆದು ನೋಡಿದರೆ ಥಳಥಳ ಹೊಳೆಯುವ ಅತಿ ಚಿಕ್ಕ ಟೈಪ್ ರೈಟರು – ಇತಾಲಿಯನ್ ಉದ್ಯಮಶೀಲತೆಯ ನಿಜವಾದ ಸವಿನೆನಪು – ಎಂದುಕೊಂಡು ಜೇಬಿನಿಂದ 20 ಪೌಂಡ್ ತೆಗೆದು ಕೊಟ್ಟುಬಿಟ್ಟೆ. ನಯನಾ ಕರ್ಷಕವಾದ ಆ ಯಂತ್ರವನ್ನು ಬಸ್ಸಿನ ಮಿತ್ರರೆಲ್ಲ ಮುಟ್ಟಿ ನೋಡಿದ ಮೇಲೆ ಹೇಳಿಗೆಯೊಳಗಿಟ್ಟು, ಭದ್ರವಾಗಿ ರ್‍ಯಾಕಿನಲ್ಲಿರಿಸಿದೆ. ಅಂದಿನಿಂದ ಲಂಡನ್ ಬಿಡುವ ವರೆಗೂ ನಾನು ಒಲಿವೆತ್ತಿಯ ಒಡೆಯನೆಂಬ ಹಮ್ಮು ನನ್ನನ್ನು ಬಿಡದೆ ಬಾಧಿಸುತ್ತಿತ್ತು.

ಸ್ಟ್ರೇಸದಿಂದ 50 ಮೈಲು ದೂರದ ಮಿಲಾನೊ ನಗರಕ್ಕೆ ಹೊರಟ ದಿನಾಂಕ 24. ಮಿಲಾನೊ ತೊರಿನೊಕ್ಕಿಂತಲೂ ಒಂದು ಕೈ ಮೇಲು. ತೊರಿನೋ ಉದ್ಯಮಕ್ಕೆ ಹೆಸರಾದ್ದೆ. ಮಿಲಾನೊ ಉದ್ಯಮ ಮತ್ತು ವ್ಯಾಪಾರ ಎರಡಕ್ಕೂ (ನಮ್ಮ ಮುಂಬಯಿಯಂತೆ) ಆಶ್ರಯವನ್ನಿತ್ತು

ಇತಾಲಿಯದ ವಾಣಿಜ್ಯ ರಾಜಧಾನಿ ಎಂದು ಪ್ರಖ್ಯಾತವಾಗಿದೆ. ಇತಾಲಿಯದ ಲಕ್ಷ್ಮೀಸ್ಥಾನ ಇದು. ಬ್ಯಾಂಕು, ಸ್ಟಾಕ್ ಎಕ್ಸ್ಚೇಂಜ್, ಅಂತಾರಾಷ್ಟ್ರೀಯ ಹಣದ ಪೇಟೆ – ವ್ಯಾಪಾರದ ಎಲ್ಲ ಆವರ್ತಗಳೂ, ಅವತಾರಗಳೂ ಇಲ್ಲಿವೆ. ರಿನಶೆಂತೆ ಡಿಪಾರ್ಟ್‌ಮೆಂಟ್ ಸ್ಟೋರಿನ ಕೇಂದ್ರ ಕಚೇರಿ ಇಲ್ಲಿದೆ. ಅಲ್ಲಿ ಒಂದು ಸಭೆಮಾಡಿ ಮಧ್ಯಾಹ್ನದ ಭೋಜನಕ್ಕೆ ಒಂದು ರೆಸ್ಟೊರಾ ಹೊಕ್ಕೆವು. ಬಿಸಿಬಿಸಿ ಕೋಳಿಯ ಅಡುಗೆಗೆ ಆಸ್ಥಳ ಪ್ರಸಿದ್ಧವಂತೆ; ಏಳೆಂಟು ಕೋಳಿಗಳನ್ನು ಸುಟ್ಟು ಒಂದು ಕಬ್ಬಿಣದ ಶಲಾಕೆಗೆ ಹೆಟ್ಟಿ ನಿಮಗೆ ಬೇಕಾದ ಕೋಳಿ ಆರಿಸಿಕೊಳ್ಳಿ ಎನ್ನುತ್ತಾರೆ. ಸುತ್ತಲಿನ ಸಹಪಾಠಿಗಳು ಕುಕ್ಕುಟ ಭಕ್ಷ್ಯಕ್ಕೆ ಬಾಯಾರಿ, ತಿಂದು, ನಾಲಿಗೆ ಚಪ್ಪರಿಸುವನಿತರಲ್ಲಿ ನಾನು ನನ್ನ ಸ್ವಗೆಟ್ಟಿ ತುತ್ತನ್ನು ಮುಗಿಸಿ ಹೊರಗೆ ಓಡಿದೆ. 'ಏನಿ'ಯ ಕೇಂದ್ರ ಕಚೇರಿಯಲ್ಲಿ ಸಭೆ ಮುಗಿಸಿ 6 ಗಂಟೆಗೆ ಇತಾಲಿಯದ ಅತ್ಯಂತ ಪ್ರತಿಷ್ಠಿತ ವಾಣಿಜ್ಯ ಸಂಘ – ಮಿಲಾನ್ ವಾಣಿಜ್ಯ ಸಂಘ – ದಲ್ಲಿ ಉಪನ್ಯಾಸ. ಇಷ್ಟೇ ವರಿಷ್ಠರು ಕೂಡ ಅಂಜಬೇಕಾದ ಪ್ರಬಲ ಉದ್ದಿಮೆದಾರರು ಈ ಸಭೆಗೆ ಬಂದಿದ್ದರು. ಅಲ್ಲಿ ವಂದನಾರ್ಪಣೆಯ ಭಾರ ನನಗೆ ಒಪ್ಪಿಸಲಾಗಿತ್ತು. ಹತ್ತು ಮಿನಿಟುಗಳ ಕಾಲ ಇಷ್ಟೇ – ಇತಾಲಿಯ ಮತ್ತು ಭಾರತದ ಬಾಂಧವ್ಯದ ಬಗ್ಗೆ ಒಂದು ಮರಿ ಉಪನ್ಯಾಸವನ್ನೇ ಬಿಗಿದುಬಿಟ್ಟೆ. ನರೆಗೂದಲಿನ ಕೆಲವಾದರೂ ತಲೆಗಳು ನನ್ನ ಮಾತಿಗೆ ತೊನೆದುವು.

ಆ ರಾತ್ರಿ ನಮಗೆ ಊಟದ ಸ್ವಾತಂತ್ರ್ಯ – ಅಂದರೆ ಬೀದಿ ತಿರುಗಾಟ. ನಗರದ ನಡುವಿನ 'ದೋಮೋ' (ವಿಚಿತ್ರ ಮೀನಾರುಗಳುಳ್ಳ ಇಗರ್ಜಿ) ಬಾಗಿಲು ಮುಟ್ಟಿದಲ್ಲಿ ಸುತ್ತಣ ತೆರೆ ಜಾಗ ಸುಮ್ಮನೆ ಅಲೆದಾಡುವವರಿಗೆ ಅನುಕೂಲವಾಗಿತ್ತು. ಅಲ್ಲಿ ರಾತ್ರಿ ಎಲ್ಲ ಹವ್ಯಾಸಿ ಕಲಾವಿದರು ಕ್ಯಾನ್ವಾಸಿಗೆ ಬಣ್ಣ ಚೆಲ್ಲುವ ಉದ್ಯೋಗದಲ್ಲಿದ್ದರು. ಮರ್ಕ್ಯೂರಿ ಕಂಬದ ಕೆಳಗಡೆ ಕ್ಯಾನ್ವಾಸ್ ಹಾಸಿ ಕುಂಚವನ್ನು ಹಿಡಿದುಕೊಂಡು ಬಣ್ಣ ಮೆತ್ತುವುದನ್ನು ನೋಡಲು ಪ್ರತಿ ಕಲಾಕಾರನ (ಕಲಾಕಾರ್ತಿಯ)ಸುತ್ತಲೂ ನಾಲ್ಕೈದು ಜನರ ಗುಂಪು. ಗುಂಪಿನಿಂದ ವಿಚಲಿತರಾಗದೆ ಅವರು ಬಣ್ಣ ಒರಸುತ್ತಲೇ ಇದ್ದರು. ಆಜಿಪ್ ಮೊಟೇಲಿಗೆ ರಾತ್ರಿ 11ಕ್ಕೆ ಹಿಂತಿರುಗಿ ನಮ್ಮ ರೂಮಿಂದ ಮಿಲಾನಿನ ರಾತ್ರಿ ಸೌಂದರ್ಯವನ್ನು – ನಿಯಾನ್ ದೀಪಗಳ ಅಲಂಕಾರವನ್ನು ನೋಡಿಕೊಂಡೇ ನಿದ್ದೆಹೋದೆ.

## ● ● ವೆನಿಸ್–ಬೊಲೊನ್ಯಾ–ಫ್ಲಾರೆನ್ಸ್

25ರಂದು ವೆನಿಸಿಗೆ ಪ್ರಯಾಣ. ನಾಲ್ಕು ಲೇನ್ ಆಟೊಸ್ಟ್ರಾದದಲ್ಲಿ. ನಡುವೆ ಬ್ರೆಶ್ಯಾದಲ್ಲಿ ಸಂತ ಯುಸ್ತಾಕಿಯೊ ಕಬ್ಬಿಣದ ಸ್ಥಾವರಕ್ಕೆ ಭೆಟ್ಟಿ. ಇದೊಂದು ಖಾಸಗಿ ಕಬ್ಬಿಣದ ಎರಕ, ಅಚ್ಚುಗಳನ್ನು ತಯಾರಿಸುವ ಕಾರ್ಖಾನೆ. ವೆನಿಸ್ ಮುಟ್ಟುವಾಗ ಸಂಜೆಯಾಗಿತ್ತು. ನಮಗೆ ಗೊತ್ತು ಮಾಡಿದ ಹೊಟೆಲಿಗೆ ಬಸ್ಸು ಹೋಗುವಂತಿರಲಿಲ್ಲ. ದೋಣಿ ಹತ್ತಿ ಗ್ರ್ಯಾಂಡ್ ಕೆನಾಲ್‌ನಲ್ಲಿ ನಾಲ್ಕು ಫರ್ಲಾಂಗ್ ದೂರ ಹೋದಮೇಲೆ ಸಾನ್ ಮಾರ್ಕೊ ಚೌಕಕ್ಕೆ ಇನ್ನೂರು ಗಜ ದೂರದಲ್ಲಿ ಇಳಿಸಿಬಿಡುತ್ತಾರೆ. ಆಮೇಲೆ ನಡೆದುಕೊಂಡೇ ಹೋಟೆಲಿನ ಬಾಗಿಲು ತಲಪಬೇಕು. ವೆನಿಸಿನಲ್ಲಿ ಕಳೆದ ಎರಡು ರಾತ್ರಿ ಒಂದು ಹಗಲು ಎಲ್ಲರೂ ಮಾಡುವುದನ್ನೇ ನಾವೂ ಮಾಡಿದೆವು. ವೆನಿಸಿಗೆ ಬಂದವರೇನು ಮಾಡುತ್ತಾರೆ?– ಅಲೆಯುತ್ತಾರೆ, ಸುಮ್ಮನೆ ಅಲೆಯುತ್ತಾರೆ, ಅಂಡಲೆಯುತ್ತಾರೆ, ಕಾಲು ನೋವಾದರೆ ಅಲ್ಲೇ ಪಾವಟಿಗೆಯಲ್ಲೋ, ಕಾಲುವೆ ಬುಡದಲ್ಲೋ, ದಾರಿಯ ನಡುವೆಯೋ ಕೂತು ಬಿಡುತ್ತಾರೆ. ಹೌದು ದಾರಿಯ ನಟ್ಟನಡುವೆ ಇಲ್ಲಿ ಕೂರಬಹುದು: ವೆನಿಸಿನೊಳಗೆ ಕಾಲುವೆಗಳೇ ನಿಜವಾದ ರಸ್ತೆಗಳು, ಉಳಿದ ಕಾಲುಹಾದಿಯಲ್ಲಿ ವಾಹನ ಸಂಚಾರವೇ ಇಲ್ಲ. ಕೂತದ್ದು ಬೇಸರವಾದರೆ ನಿಲ್ಲುತ್ತಾರೆ, ಮತ್ತೆ ನಡೆಯುತ್ತಾರೆ. ಎಲ್ಲಿ ತಿರುಗಿದರೂ ಅಲ್ಲಿ ಕಾಲುವೆ– ಹತ್ತಡಿ, ಇಪ್ಪತ್ತಡಿ. ಅದನ್ನು ದಾಟಿ ಹೋಗಲು ಪುಟ್ಟ ಪುಟ್ಟ ಸೇತುವೆ. ಸೇತುವೆಗೆ ಕಾಲುವೆ ಅಡ್ಡ; ಕಾಲುವೆಗೆ ಸೇತುವೆ ಅಡ್ಡ. ಅಗಲವಾದ ನದಿಯಂತೆ ಕಾಣುವುದು ಗ್ರ್ಯಾಂಡ್ ಕೆನಾಲ್ ಒಂದೇ. ಅದರ ಇಕ್ಕಡೆಗಳಲ್ಲೂ ಸೌಧಗಳು, ಹೋಟೆಲುಗಳು, ಕಟ್ಟಡಗಳು. ಅವನ್ನೆಲ್ಲ ದಾಟಿ ಮುಂದೆ ಹೋದರೆ ವೆನಿಸಿನ ಲೀಡೋ (ಬೀಚ್) ಸಿಗುತ್ತದೆ. ಅಲ್ಲಿ ನಿಮಗೆ ಸಮುದ್ರರಾಜನ ದರ್ಶನ. ಆದರೆ ಅಸಲಿ ವೆನಿಸ್ ಎಂದರೆ ಗ್ರ್ಯಾಂಡ್ ಕೆನಾಲ್‌ನಿಂದ ಟಿಸಿಲೊಡೆಯುವ ಅಸಂಖ್ಯಾತ ಸುತ್ತುಬಳಸಿನ ಕಾಲುವೆಗಳಿಂದ ಆವೃತವಾದ, ಡ್ಯೂಕನ ಅರಮನೆ+ಪ್ಯಾಜ್ಜಾ ಸ್ಯಾನ್‌ಮಾರ್ಕೊ+ನಿಟ್ಟುಸಿರಿನ ಸೇತುವೆ ಇರತಕ್ಕ ಜಲನಿಬಿಡ, ಜನನಿಬಿಡ ಭೂಭಾಗ. ಡ್ಯೂಕನ ಅರಮನೆ ಭವ್ಯವಿಲಾನೋದಲ್ಲಿ ದಾವಿಂಚಿ ಸಿಗದಿದ್ದರೂ ಈ ಅರಮನೆಯೊಳಗೆ ತಿಂತೊರೆತ್ತೊ

ಸಿಕ್ಕಿದ. ವಿಶಾಲವಾದ 200 × 60ಅಡಿಯ ಭವನದಲ್ಲಿ 60 ಅಡಿ ಅಗಲಕ್ಕೆ ಪೂರ್ತಿ ಒಂದು ಚಿತ್ರ ಬರೆದಿದ್ದಾನೆ ತಿಂತೊರೆತ್ತೊ–ಅದರ ಹೆಸರು 'ಸ್ವರ್ಗ ಮತ್ತು ನರಕ'. ಒಂದೇ ಒಂದು ಚಿತ್ರದಲ್ಲಿ ನೂರಾರು ಜೀವಗಳು –ಸೋಲು ಗೆಲುವಿನ ಅಸಾಧಾರಣ ನೋಟ. ಸತ್, ಅಸತ್ ಚಿತ್ರಗಳನ್ನು ಮನುಷ್ಯನ ಬುದ್ಧಿ, ಕುಂಚ ಎಷ್ಟು ಮಾದರಿಯಾಗಿ ಬಿಡಿಸಬಹುದೋ ಅಷ್ಟೂ ಮಾದರಿ ಇದರಲ್ಲಿ ಪ್ರಕಟವಾಗಿದೆ. ಕೊಠಡಿಗಳ ಮೇಲೆ ಕೊಠಡಿಗಳು – ಎಲ್ಲೆಲ್ಲಿಯೂ ಬಣ್ಣದ ರಂಜನೆ, ತೈಲಚಿತ್ರ. ಸೃಜನಕಾರರಾದ ನವಜಾಗೃತಿಯ ಚಿತ್ರ ಕಾರರು ಬಣ್ಣದ ಮಾಧ್ಯಮವನ್ನು ಬಳಸಿ ನೂರಾರು ವರ್ಷಗಳಿಂದಲೂ ಇಲ್ಲಿ ಆಗಂತುಕರೊಡನೆ ಹೃದಯಸಂವಾದ ನಡೆಸುವಂತೆ ತೋರುತ್ತದೆ. ಇಲ್ಲಿ, ನಮ್ಮಲ್ಲಿ, ಭಾರತದಲ್ಲಿ ಈ ಬಣ್ಣದ ಕಲ್ಪನೆಯಿಲ್ಲ. ಹೆಚ್ಚೆಂದರೆ ನಮ್ಮದು ಮಾತಿನ ಬಣ್ಣ, ಬಣ್ಣನೆ. ಇದು ಹಾಗಲ್ಲ. ಬಣ್ಣದಿಂದಲೇ ಸುಖ, ದುಃಖ, ಕ್ರೋಧ, ಪ್ರೇಮ, ವಾತ್ಸಲ್ಯ, ಉದ್ವೇಗ, ಆವೇಶ, ವೇದನೆ, ತೊಳಲಾಟ, ಸಂಘರ್ಷ, ಉಲ್ಲಾಸ – ಮನುಷ್ಯ ಸಹಜವಾದ ಎಲ್ಲ ರಾಗಗಳಿಗೆ – ಸಕಲ ರಾಗದ್ವೇಷಗಳಿಗೆ – ಬಣ್ಣದಲ್ಲಿ ಬಾಯಿಕೊಡ ಬಹುದು. ಶತಮಾನಗಳನ್ನಾಚೆ ನೂಕಿ ಕಲೆಗಾರ ಬಣ್ಣದ ಮೂಲಕ ನಮ್ಮ ಕೂಡೆ ಸಂಭಾಷಣೆ, ಸಲ್ಲಾಪ ಮಾಡಬಲ್ಲ. ಬರೆದ ಚಿತ್ರ ಅನಂತ ಕಾಲದ ವರೆಗೆ ಬಲ್ಲವರ ಚೇತನವನ್ನು ಸ್ಪರ್ಶಿಸಿ ನವಿರೆಬ್ಬಿಸುವ ಮಹಾಸ್ವರ್ಣ ಸಿದ್ಧಿ ಡ್ಯೂಕನ ಅರಮನೆಯ ಭಿತ್ತಿಚಿತ್ರಗಳಲ್ಲಿಯೂ ತೂಗುಚಿತ್ರಗಳ ಲ್ಲಿಯೂ ಸ್ಫುಟವಾಯಿತು; ಭಾರತೀಯರಾದ ನಮ್ಮ ವರ್ಣಚಿತ್ರಸಂಪತ್ತು ಇತಾಲಿಯದೊಡನೆ ಹೋಲಿಸಿ ನೋಡಿದರೆ ಗುಣದಲ್ಲಿಯೂ, ಪ್ರಮಾಣ ದಲ್ಲಿಯೂ ಬಹಳ ಅಲ್ಪವೆನ್ನದೆ ವಿಧಿಯಿಲ್ಲ. ಅಜಂತದಲ್ಲಿ ಎಲ್ಲೋ ಒಮ್ಮೆ ಮುಗಿಲೆತ್ತರ ನೆಗೆದು ತದನಂತರ ಶತಮಾನಗಳ ಕಾಲ ಗುಡಿಗಾರರ ಕೈ ಯಲ್ಲೇ ಸೀಮಿತ ಉಪಯೋಗಕ್ಕಾಗಿ ಮಾತ್ರ ಬಳಕೆಯಲ್ಲಿದ್ದ ನಮ್ಮ ಬಣ್ಣ ಗಾರಿಕೆಯ ಶಕ್ತಿ ನಮ್ಮ ವಾಸ್ತುವಿಗಿಂತ, ಶಿಲ್ಪಕ್ಕಿಂತ, ಸಾಹಿತ್ಯಕ್ಕಿಂತಲೂ ಬಡವಾಗಿರುವುದನ್ನು ನಾವು ಗಮನಿಸಬೇಕು. ನಮ್ಮ ಕಲಾವಂತಿಕೆಗೆ ಬಣ್ಣ ಸರಿಯಾದ ಮಾಧ್ಯಮ ಅಲ್ಲವೋ ಏನೋ. ಇತಾಲಿಯನ್ ಕಲಾ ಕಾರರ ವರ್ಣ ವೈಭವ ಸರ್ವಶ್ರುತ, ವಿಶ್ವವಿಖ್ಯಾತ. ಅಂಥ ಖ್ಯಾತ ಕೃತಿ ಗಳು ಹಲವು ವೆನಿಸಿನಲ್ಲಿ ಸ್ಥಿರವಾಗಿ ಪ್ರವಾಸಿಕರನ್ನು ಆಕರ್ಷಿಸುತ್ತವೆ.

ಇನ್ನೊಂದು ಪ್ರವಾಸಿ ಆಕರ್ಷಣೆ ಸಾನ್‌ಮಾರ್ಕೊ ಚೌಕ. ಸಾನ್ ಮಾರ್ಕೊ ಇಗರ್ಜಿಯ ಮುಂದುಗಡೆ ಇರುವ ವಿಶಾಲವಾದ ಚೌಕದಲ್ಲಿ ಪಾರಿವಾಳಗಳದ್ದೇ ಕಾರುಬಾರು. ಯಾರ ಅಂಜಿಕೆಯೂ ಇಲ್ಲದೆ ನಿರ್ಭಿಡೆ ಸಂಚಾರ ಮಾಡುವ ಪಾರಿವಾಳಗಳಿಗೆ ಪ್ರವಾಸಿಕರೆಂದರೆ ಬಹಳ ಇಷ್ಟ. ಅವರ ಕೈಯಿಂದಲೇ ಅವುಗಳಿಗೆ ತಿಂಡಿ ಸರಪರಾಜು. ನೀವು ತಿಂಡಿ ಕೈಯಲ್ಲಿ ಹಿಡಿದುಕೊಂಡರಾಯಿತು–ನಿಮ್ಮ ಕೈ ಮೈ ತಲೆಯ ಮೇಲೆ ಪ್ರೇಮ ದಿಂದ ಬಂದು ಕೂಡುತ್ತವೆ, ಕುಟುರುತ್ತವೆ, ಕಚಕುಳಿ ಇಡುತ್ತವೆ. ಪ್ರವಾಸಿ ಕರ ಮನರಂಜನೆ ಮಾಡುವುದು ಹೇಗೆಂದು ಇತಾಲಿಯದ ಮೃಗಪಕ್ಷಿಗಳೂ ಬಲ್ಲವು. ವಿಶಾಲವಾದ ಚೌಕದ ಸುತ್ತಲೂ ವೆನಿಸಿನ ಗಾಜಿನ ಅಲಂಕರಣ ಸಾಮಗ್ರಿಗಳ ಅಂಗಡಿಗಳು. ವೆನಿಷನ್ ಕ್ರಿಸ್ಟಲ್ಸ್ ಎಂದು ಹೆಸರಾಂತ ಗಾಜಿನ ವಿಧವಿಧವಾದ ಬಳೆ, ಹಾರ, ಪಾನಪಾತ್ರೆ ಮುಂತಾದುವನ್ನು ಬೆಲೆಗೆ ಕೊಂಡುಕೊಳ್ಳುವುದೇ ಒಂದು ಸಮಾರಂಭ. ನಿಮಗೆ ಇದ್ದ ಸರಕು ತೋರಿಸಲು ಏನಾತುರ, ಏನು ಗೌರವ! ವೆನಿಸಿಗೆ ಬರದ ಶ್ರೀಮಂತರಾರು? ಬಂದ ಮೇಲೆ ಇಲ್ಲಿನ ಚಿನಿವಾರರ ಮುಂದೆ ಬಡತನವನ್ನನುಭವಿಸದವರು ಯಾರು? ಇಲ್ಲಿ ಸಿಗುವುದು ಅಪ್ಪಟ ವೆನಿಷನ್ ಕೈಗಾರಿಕೆ ಎಂಬುದನ್ನು ನಿಮಗೆ ನಂಬಿಸಲು ಅಂಗಡಿಯ ಹಿಂದೋ ಮಾಳಿಗೆಯ ಮೇಲೋ ಇರುವ ಉತ್ಪಾದನಾ ವಿಭಾಗಕ್ಕೆ ನಿಮ್ಮನ್ನು ಕರೆದೊಯ್ದು ಖಾತ್ರಿಪಡಿಸುತ್ತಾರೆ.

ವೆನಿಸಿನ ಸಂದರ್ಶನ ಶುದ್ಧ ಪ್ರವಾಸಿ ಮಟ್ಟದ್ದು. ಇಸ್ವೇಯ ವರಿಷ್ಠರು ಯಾರೂ ಎರಡು ದಿನ ನಮ್ಮ ನೆರಳನ್ನೂ ಕಾಣದಾದರು. ಎಲ್ಲಿ ಅವಿತಿದ್ದರೋ? 'ಗೊಂಡೋಲಾ'ದಲ್ಲಿ ಮುಂಜಾನೆ ಒಂದು ತಾಸು ಕಾಲುವೆ ದಾರಿಯಾಗಿ ವೆನಿಸ್ ನೋಡಿದ್ದಾಯಿತು, ನಿಟ್ಟುಸಿರ ಸೇತುವೆಯ ಕೆಳಗಿಂದ ತೂರಿ ಗ್ರ್ಯಾಂಡ್ ಕೆನಾಲ್ ಸೇರಿದ್ದಾಯಿತು. ಢ್ಯೂಕನ ಅರಮನೆಗೆ ಒತ್ತಿಕೊಂಡು ಒಂದು ಕಾರಾಗೃಹ ಇತ್ತಂತೆ, ಆ ಕಾರಾಗೃಹಕ್ಕೆ ಸೇರಿಕೊಳ್ಳುವ ಕೈದಿ ಕೊನೆಯ ಬಾರಿಗೆ ಸೂರ್ಯದರ್ಶನ ಮಾಡುವುದು ಈ ಸೇತುವೆಯ ಮೇಲೆ. ಅವನು ಕೊನೆಯ ಬಾರಿ ಬಿಡುವ ನಿಟ್ಟುಸಿರಿಂದ ಸೇತುವೆಗೆ ಆ ಹೆಸರು ಬಂದಿದೆಯಂತೆ. ಅಗಲವಾದ ಗ್ರ್ಯಾಂಡ್ ಕೆನಾಲನ್ನು ದಾಟಿ ಆಚೆ ಕರೆಯಿಂದ ವೆನಿಸ್‌ನ ದೃಶ್ಯವನ್ನು ಕಂಡದ್ದಾಯಿತು. ಸಂಜೆ ಆಯಿತಲ್ಲಾ ಲೀಡೋ ಸಂದರ್ಶಿಸೋಣ ಎಂದು ಮರಿ ಹಡಗು ಹತ್ತಿ ಮರೀನ

ದಾರಿಯಲ್ಲಿ ಒಂದು ಮೈಲು ಗಾಳಿಸೇವನೆ ಮಾಡಿ ಹಿಂದಕ್ಕೆ ಬಂದದ್ದಾಯಿತು.

ವೆನಿಸಿನ ವಣಿಜ (Merchant of Venice) ಶೇಕ್ಸ್‌ಪಿಯರಿನ ಒಂದು ಸುಂದರ ನಾಟಕ. ಅದನ್ನೋದಿಯೇ ವೆನಿಸ್‌ನ ಪರಿಚಯ ಪಡೆದವರು ನಮ್ಮಲ್ಲಿನ ವಿದ್ಯಾವಂತರು. ಆ ವಣಿಜ ಸರಳ ಸ್ವಭಾವದ, ಭೋಳೆ ವರ್ತಕ. ಶೈಲಾಕ್ – ಅಲ್ಲಿ ನಿಜವಾದ ವ್ಯಾಪಾರಿ. ಊರ ಮೇಲೆ ಊರು ಬಿದ್ದರೂ ತನ್ನ ಭಾಗದೇಯವನ್ನು ಬಿಡಲಾರದ ಜಿಪುಣ, ನಿಪುಣ. ಈಗ ವೆನಿಸಿನಲ್ಲಿರುವ ವರ್ತಕರಿಗೆ ಶೈಲಾಕನೇ ಆದರ್ಶ. ಎಂಟೋನಿಯೋ ಅಲ್ಲ.

ವೆನಿಸಿನ ರೆಸ್ಟುರಾಗಳ ಅಡುಗೆಯ ರುಚಿ ಬಲ್ಲವರೇ ಬಲ್ಲರು. ಅದನ್ನು ಒಲ್ಲದ ನನಗೆ ಅನಿರೀಕ್ಷಿತವಾಗಿ ಬಿಸ್ಕತಿನೊಳಗೆ ಹಂದಿಯೋ ಕುರಿಯೋ ಭೆಟ್ಟಿಯಾದದ್ದುಂಟು. ಶುದ್ಧಾತಿಶುದ್ಧ ಕೇಕಿನೊಳಗೂ ನಾಲ್ಕು ತೊಟ್ಟು ಬೀರನ್ನಿಟ್ಟು ನನ್ನ ಬ್ರಾಹ್ಮಣ್ಯಕ್ಕೆ ಸವಾಲು ಹಾಕಿದ ವೆನಿಸಿನ ನಳಪಾಕಿಗಳ ಕೈತವ, ಕೌಶಲವನ್ನು ಅರಿಯದ ನಾಲಗೆಯೂ ಮೆಚ್ಚಿ ಶಾಭಾಸೆಂದದ್ದುಂಟು. ಪ್ರತಿ ರೆಸ್ಟುರಾ ಒಳಗಡೆ ಮುಂದೆ, ಹಿಂದೆ ಕುರ್ಚಿ ಮೇಜು ಹರವುತ್ತಾರೆ. ಎಷ್ಟು ಹೊತ್ತು ಬೇಕಾದರೂ ಅಲ್ಲಿ ಕೂತಿರಬಹುದು. ಪ್ಯಾಜ್ಸಾ ಸಾನ್ ಮಾರ್ಕೋದ ರಾತ್ರಿ ನೋಟವಂತೂ ಅತಿ ರಮಣೀಯ. ಕತ್ತಲಾದ ಕೂಡಲೆ ಪ್ಯಾಜ್ಸಾದ ಪರಿವೇಷದಲ್ಲಿ ರೆಸ್ಟುರಾಗಳು ಚಿಗುರುತ್ತಾವೆ. ಪಾರಿವಾಳಗಳು ಗೂಡು ಸೇರಿದ ಮೇಲೆ ಕುರ್ಚಿ ಮೇಜು ಎಲ್ಲಿಂದಲೋ ಬಂದು ಪ್ರತ್ಯಕ್ಷವಾಗುತ್ತವೆ. ರಾತ್ರಿ 10–11ರ ಮೇಲೆ ಅಲ್ಲಿನ ದೃಶ್ಯ ಪ್ರೇಕ್ಷಣೀಯ. ಜಗತ್ತಿನ ಸಂಘರ್ಷ, ದಾರಿದ್ರ್ಯ, ಕ್ಷಾಮಡಾಮರ, ಮತ್ತು ದುಃಖದ ಯಾವ ಕಲ್ಪನೆಯೂ ಬಾರದ ಮೋಜಿನ ಕೂಟಗಳು ಅಲ್ಲಿ ಸೇರುತ್ತವೆ. ಪ್ರತಿ ರೆಸ್ಟುರಾ ಮುಂದಿನ ಮೇಜುಗಳಲ್ಲಿ ನೂರಾರು ಸಾಲಂಕೃತ ಸ್ತ್ರೀಪುರುಷರು ಕೂತು ಭೋಜನ, ಪಾನ, ಧೂಮಪಾನ ನಡೆಸಿರುತ್ತಾರೆ. ಪ್ರತಿ ಗುಂಪಿಗೂ ವಿಶಿಷ್ಟವಾದ ಸಂಗೀತ, ವೃಂದ ಸಂಗೀತ ನುಡಿಸುವ ಏರ್ಪಾಡು ಮಾಡಿದ್ದಾರೆ. ನೀವು ಇಬ್ಬರು – ಸ್ತ್ರೀಪುರುಷರು – ಆಗಿದ್ದರಂತೂ ಸರಿಯೆ – ನಿಮ್ಮ ಸಲ್ಲಾಪ ಸಹಜವಾಗಿ ನಡಸಿರುತ್ತೀರಿ. ಒಬ್ಬರೇ ಆದರೆ ಎದುರಿಗೆ ಒಂದು ಬಾಟಲಿ, ಗ್ಲಾಸು ಯಾವುದೂ ಸಾಕು ಆತ್ಮಾನುಸಂಧಾನಕ್ಕೆ. ಏಕಾಕಿ ನೀವು ನಿಜ – ಆದರೆ ಅಕ್ಕದಲ್ಲಿ ಪಕ್ಕದಲ್ಲಿ ನಿಮ್ಮ ಕವಿಕಲ್ಪನೆಯನ್ನು ಗರಿ

ಗೆದರಿಸಿ ಬ್ರಹ್ಮಾಂಡದಾಚೆ ಜುಂಜ ಚಾಚುವಂತೆ ಮಾಡಬಲ್ಲ ರೂಪರಾಶಿ ಇಲ್ಲವೆ? ನಿದ್ದೆ ಬೀಳುವ ವರೆಗಿನ ಆತ್ಮಾನುಸಂಧಾನಕ್ಕೆ ಅಷ್ಟು ಸಾಲದೆ?

ವೆನಿಸ್ ಪೂರ್ವ ದೇಶಗಳಿಗೆ ಮುಖಮಾಡಿ ನಿಂತ ಇತಾಲಿಯದ ರೇವು. ರೇವು ಪಟ್ಟಣವಾಗಿ ಅದಕ್ಕೆ ಈಗ ಗತವೈಭವ ಮಾತ್ರ ಲಭ್ಯ. ರಾತ್ರಿ ಎಚ್ಚರ ವಾಯಿತು, ಒಂದು ಕಾಗೆ ಕೂಗುತ್ತಿತ್ತು. ಊರು ಬಿಟ್ಟು ಆರು ತಿಂಗಳಾ ಗಿತ್ತು, ಕಾಗೆ ನೋಡದೆ, ಅದರ ಸಂಗೀತ ಕೇಳದೆ: ಊರಿನ ನೆನಪು ಹುಟ್ಟಿ ಸುವ ಏ ಕಾಗೆಯೇ, ವೆನಿಸಿನ ಕಾಗೆಯೆ, ಏಕಾಗಿಯೆ ನೀ ಕೂಗುತಿರುವೆ? ಎಂದು ಬೇಂದ್ರೆಯವರಂತೆ(ಮಲ್ನಾಡಿನ ಗಿಣಿಯೇ, ನೀನಲ್ಲಾಡದೆ ಕುಳಿತೀ ಏ ಗಿಣಿಯೇ) ಅಕ್ಷರ ತಿರುವಿ ಪದ್ಯ ಕಟ್ಟಿ ದೀಪ ಹಚ್ಚಿ ನೋಡಿದರೆ ಶನಿ ಕಾಗೆ ಮೂರು ಗಂಟೆಗೇ ತಿಂಗಳ ಬೆಳಕನ್ನು ನೋಡಿ ಅರಚುತ್ತಿತ್ತು. ಶಾಪ ಕೊಡಬೇಕೆಂದರೆ ಮನಸ್ಸು ಬರಲಿಲ್ಲ. ಬಹುಶಃ ಸಾನ್‌ಮಾರ್ಕೊ ಚೌಕದ ನಲ್ಲನಲ್ಲೆಯರ ಬಿನದವನ್ನು ನೋಡಿ ಉಮೇದಾಗಿ ಕೂಗಿರಬೇಕು. ಕೂಗು – ನನಗಂತೂ ನಿದ್ದೆ.

ಮುಂದಿನ ಮಜಲು ಬೊಲೊನ್ಯಾ. ಸೇರುವಾಗ ಸಂಜೆ. ದಾರಿಯಲ್ಲಿ ಒಂದು ಹಣ್ಣಿನ ತೋಟಕ್ಕೆ ಹೋಗಿ ಅದರ ಮಾಲಿಕನಿಂದ ಭಾಷಣ, ನಮ್ಮ ಪ್ರಶ್ನೆ. ಬೊಲೊನ್ಯಾದ ವಿಶ್ವವಿದ್ಯಾನಿಲಯ ಶತಮಾನಗಳ ಲಾಗಾಯಿತು ಜಗತ್ಪ್ರಸಿದ್ಧ. ನಮ್ಮ ಠಿಕಾಣೆ ಅಲ್ಲಿ ಒಂದು ರಾತ್ರಿ ಮಾತ್ರ. ಅಲ್ಲೂ ಡೈರೆಕ್ಟರ್ ಜನ್ನಾರೋ ನಮಗಾಗಿ ಒಂದು ವಿಶೇಷ ಕಾರ್ಯ ಕ್ರಮ ಏರ್ಪಡಿಸಿದ್ದರು. ಊರಿನ ಪ್ರತಿಷ್ಠಿತ ಮನೆತನದ ಹೆಣ್ಣುಮಕ್ಕಳ ಜತೆ ನಮಗೆ 'ಡಾನ್ಸ್ ಪಾರ್ಟಿ' ನಿಯೋಜಿತವಾಗಿತ್ತು. ಇದೊಂದು ಅನಿರೀ ಕ್ಷಿತ (Surprise) ಕಾರ್ಯಕ್ರಮ. ಅದುವರೆಗೆ ಇಸ್ವೀ ಕಚೇರಿ ನಮ್ಮಿಂದ ಬಚ್ಚಿಟ್ಟ ಸಂಗತಿ. ಬೊಲೊನ್ಯ ಹೊಕ್ಕ ಮೇಲೆಯೆ ನಮಗೆ ತಿಳಿಸಿದ್ದು: ಗುಂಪಿಗೆ ಗುಂಪೇ ಎದ್ದು ನಲಿದಾಡಿತು. ಸೋಮಾಲಿಯದ ಅಲಿ ಮತ್ತು ನಾನು ಇಬ್ಬರೇ ಈ ಪಾರ್ಟಿಗೆ ಗೈರುಹಾಜರು. ಒಂದು ಕ್ಷಣ ಹೋಗಿ ನೋಡೋಣ ಎನಿಸಿತು. ಆದರೆ ನೋಡುವುದೇನಿದೆ. ಕೈ ಹಿಡಿದು ಎಳೆ ವರೆ ಕುಣಿಯುವುದು ಹೇಗೆ, ಅಥವಾ ಹೆಜ್ಜೆ ತಪ್ಪಿದರೋ ಎಂಬ ಭೀತಿ. ತಪ್ಪಿದರೇನು, ತಮಾಷೆ ಅಲ್ಲವೆ ಎಂದು ತಿಳಿಯುವಷ್ಟು 'ಸ್ಪೋರ್ಟ್' ನನ್ನಲ್ಲಿರಲಿಲ್ಲ. ನರ್ತನದ ಹೊರತು ಮುಂದೇನೂ ಇರಲಿಲ್ಲವೆಂದು ನಿರಾಶ

ರಾದ ಇಸ್ವೇ ಗುಂಪು ಸಪ್ಪೆ ಮೋರೆ ಹಾಕಿಕೊಂಡು ಮರಳಿತು. ಆಸೆ ಇದ್ದ ರಲ್ಲವೆ ನಿರಾಸೆ? ಆಸೆಯನ್ನೇ ಬಿಟ್ಟರೆ? – ಹೌದು ಭಗವಾನ್ ಬುದ್ಧ ಕೇಳಿದ ಪ್ರಶ್ನೆ ಇದು. ಇದಕ್ಕೆ ಉತ್ತರ ನಾನೇನು ಕೊಟ್ಟೇನು? ನಾನಾದರೂ ಆಸೆ ಬಿಟ್ಟೇನು, ಆದರೆ ಆಸೆ ನನ್ನ ಬಿಡಬೇಕೆ?

ಬೊಲೊನ್ಯದಿಂದ ಫ್ಲಾರೆನ್ಸ್. ದಿನವಿಡೀ ಆಟೊಸ್ಟ್ರಾದದಲ್ಲೇ ನಮ್ಮ ಪಯಣ. ಜರ್ಮನಿಯ ಆಟೋಬಾನ್‌ನ್ನೂ ಮೀರಿಸುವಂತೆ ಇತಾಲಿಯ ನರು ತಮ್ಮ ಆಟೊಸ್ಟ್ರಾದ ಕಟ್ಟಿದ್ದಾರೆ. ಮಿಲಿಯಾಂತರ ಲೀರೆ ಬಂಡವಾಳ ಹೂಡಿದ್ದಾರೆ. ಅದರ ಖರ್ಚು ಹುಟ್ಟಿಸಲು ಅಲ್ಲಲ್ಲಿ ಮಧ್ಯಯುಗದ ಸುಂಕದ ಗೇಟನ್ನಿಟ್ಟಿದ್ದಾರೆ. ಆಟೊಸ್ಟ್ರಾದ ಹೊಕ್ಕಲ್ಲಿ ಜನಜೀವನ ಸುಧಾರಿ ಸುತ್ತದೆನ್ನುವ ವಿಶ್ವಾಸ. ಉದ್ದಕ್ಕೆ ಮೋಟೆಲುಗಳು. ರಸ್ತೆಯ ಮೇಲ್ಗಡೆ ಕಟ್ಟಿರುವ ರೆಸ್ಟುರಾಗಳು, ಅಡ್ಡ ಹಾದಿ ಬರುವಲ್ಲಿ ವರ್ತುಲಗಳು, ನಯ ವಾದ ಮೇಲುಮ್ಮೈ, ನೇರವಾಗಿ ದಾರಿ ಎಳೆಯಲು ತಗ್ಗಿರುವಲ್ಲಿ ಸೇತುವೆ, ಅಡ್ಡಬಂದ ಗುಡ್ಡಕ್ಕೆ ಸುರಂಗ. ಸುತ್ತೂ ಇಲ್ಲ ಬಳಸೂ ಇಲ್ಲ. ಆಟೊಸ್ಟ್ರಾದ ಕಟ್ಟಿದ ಇತಾಲಿಯ ಜೆಟ್‌ಯುಗದಲ್ಲಿ ಕಾಲಿಟ್ಟಿದೆ. ಬಡಗ ಇತಾಲಿಯದ ಶ್ರೀಮಂತಿಕೆ ಆಟೋಸ್ಟ್ರಾದ ಬಳಿವಿಡಿದು ತೆಂಕಕ್ಕೆ ಪಸರಿಸಬೇಕು. ಕಚ್ಚಾ ಮಾಲು ಮತ್ತು ಸಿದ್ಧಸರಕಿನ ಸಾಗಾಣಿಕೆಗೆ ಆಟೊಸ್ಟ್ರಾದ ಉತ್ತೇಜಕ. ಪ್ರವಾಸಿ ಉದ್ಯಮಕ್ಕೆ ಪ್ರಚೋದಕ. ತೃತೀಯ ಹಂತದ ಸೇವಾ ಉದ್ಯೋಗ ಗಳ(services)ನ್ನು ನಿರ್ಮಿಸುವುದರಿಂದ ಸರ್ವವ್ಯಾಪಿ ಉದ್ಯೋಗ ನಿರ್ಮಾಪಕ. ಬೃಹತ್ ಉತ್ಪಾದನೆಗೆ ಸರಿಸಮನಾಗಿ ಬೃಹತ್ತಾಗಿ ವಿತರಣೆ ನಡೆಯಲು ಆಟೊಸ್ಟ್ರಾದದಂಥ ಭೂಮಾರ್ಗ ರಚಿತವಾಗತಕ್ಕದ್ದು ಆರ್ಥಿಕ ಅನಿವಾರ್ಯತೆ.

ಫ್ಲಾರೆನ್ಸ್ ನಗರದ ಮುಖ್ಯ ಚೌಕದಲ್ಲಿ ಬಸ್ಸು ನಿಂತಾಗ ಮಧ್ಯಯುಗೀನ ಫ್ಲಾರೆನ್ಸ್‌ಜೀವ ತಳೆದಂತೆಯೇ ಕಾಣುತ್ತಿತ್ತು. ಚೌಕವೆಲ್ಲ ವಾಸ್ತುಶಿಲ್ಪಮಯ. ಮೈಕಲೆಂಜಲೋ ಬಿಡಿಸಿದ ಒಂದು ಅಪೂರ್ವ ಶಿಲ್ಪ ಇಲ್ಲಿದೆ. ಇಗರ್ಜಿಯ ಬಾಗಿಲಿನಲ್ಲಿ ದಾಂತೆಯ 'ದಿವೀನಾ ಕಾಮೆದಿ'ಯ ಉಬ್ಬುಚಿತ್ರ ಕೆತ್ತಿದ್ದಾರೆ – ಲೋಹದಲ್ಲಿ. ಚಿತ್ರ ತೆಗೆಯಲು ಪ್ರಶಸ್ತವಾದ ಚೌಕ. ಹತ್ತು ಮಾರು ದೂರದಲ್ಲಿ ಮಹಾಕವಿ ದಾಂತೆಯ ಅಮೃತಶಿಲಾಮೂರ್ತಿಯನ್ನೆ ನಿಲ್ಲಿಸಿ ದ್ದಾರೆ. ಅಂದು ಯಾವುದೋ ಹಬ್ಬದ ರಜೆಯಾದ್ದರಿಂದ ಫ್ಲಾರೆನ್ಸ್ ನಮ್ಮ

ಮಟ್ಟಿಗೆ ಇದ್ದೂ ಇಲ್ಲವಾಯಿತು. ಯಾವ ಚಿತ್ರಶಾಲೆಯೂ – ಅಂದು ತೆರೆದಿಲ್ಲ. ಆದರೂ ಉಫೀಚಿ ಗೆಲರಿಯ ಹತ್ತಿರ ಹೋಗಿ ಬಾಗಿಲು ಬಡಿದು ಮರಳಿದೆವು. ಈ ಗೆಲರಿ ವ್ಯಾಟಿಕನ್‌ನಷ್ಟೆ ಪ್ರಸಿದ್ಧವಾದ ಚಿತ್ರಶಾಲೆ – ಜಗತ್ತಿನ ಅತ್ಯಮೂಲ್ಯ ಕಲಾಸಂಪತ್ತು ಇದರೊಳಗೆ ಸಂಗ್ರಹಿತವಾಗಿದೆ. ಇದರ ಸವಿಯನ್ನುಣ್ಣಲಾರದ ನಮ್ಮ ನಿರಾಸೆ ಹೇಳತೀರದು. ದಿನ ಮುಂದೆ ದೂಡುವ ಹಾಗಿಲ್ಲ. 28ರ ರಾತ್ರಿ ನಾವು ರೋಮ್ ಸೇರಲೇಬೇಕಾಗಿದೆ – ಅಲ್ಲಿ ಇತಾಲಿಯದ ಅಧ್ಯಕ್ಷರೇ ನಮಗಾಗಿ ಕಾಯುತ್ತಿದ್ದಾರೆ. ಆದ್ದರಿಂದ ಫ್ಲಾರೆನ್ಸಿನ ಬೀದಿಗಳನ್ನು ಸುತ್ತಿದ್ದೇ ಬಂತು. ಎತ್ತರವಾದ ಬೆಟ್ಟಕ್ಕೆ ಹೋಗಿ ಆರ್ನೊ ನದಿಯ ದರ್ಶನ ಪಡೆದೆವು. (ಇದೇ ಆರ್ನೊ ಎರಡು ವರ್ಷದ ಕೆಳಗೆ ಹುಚ್ಚುಹೊಳೆಯಾಗಿ ಹರಿದು, ಉಫೀಚಿ ಗೆಲರಿಯನ್ನು ಹೊಕ್ಕು ಎಷ್ಟೋ ಚಿತ್ರಗಳನ್ನು ಕೆಡಿಸಿಬಿಟ್ಟಿತು) ಫ್ಲಾರೆನ್ಸ್‌ನಿಂದ ಇನ್ನು ಮೂರು ತಾಸು ಕಳೆದು ಸುಮಾರು 8 ಗಂಟೆ ಹೊತ್ತಿಗೆ 'ಸಿಯೇನಾ' ಸೇರಿದೆವು. ಅಲ್ಲಿ ಒಂದು ತಾಸು ವಿರಾಮ ಪಡೆದು ರೋಮ್ ಸೇರಿದಾಗ ರಾತ್ರಿ ಹನ್ನೆರಡು. ವಿಯಾವೆನೆತೊದಲ್ಲಿರುವ ಒಂದು ಹೋಟೆಲಲ್ಲಿ ನಮ್ಮ ಕೆಲವರನ್ನು ಇಳಿಸಿದರು. ಉಳಿದವರನ್ನು ಎಲ್ಲೆಲ್ಲೋ ನಿಲಿಸಿದರು. ಇತಾಲಿಯದಲ್ಲಿ ಪ್ರವಾಸಿ ಋತು ಆರಂಭವಾಗಿರುವುದರ ಸೂಚನೆ ಇದು. ನಲ್ವತ್ತು ಜನಕ್ಕೆ ಒಂದೇ ಹೊಟಲಲ್ಲಿ ಜಾಗವಿಲ್ಲ!

### ○ ○ ನಾಲ್ಕನೇ ರೋಮ್ ಸಂದರ್ಶನ

ನಾಪೊಲಿ ಮುಟ್ಟಿದ ಕೂಡಲೆ ದೇವರಾಯರನ್ನು ನೋಡಲು ಬಂದಿದ್ದು ಪ್ರಥಮ ಸಂದರ್ಶನ; ಕ್ರಿಸ್ಮಸ್ ವಾರದಲ್ಲಿ ಊರಿಗೆ ಹೊರಡಲಿರುವ ದೇವರಾಯ ದಂಪತಿಗಳಿಗೆ ಉಪಕಾರ ಸ್ಮರಣೆ ಮಾಡಲು ಹೋದದ್ದು ದ್ವಿತೀಯ ಸಂದರ್ಶನ; ಇತಾಲಿಯನ್ ಅಧ್ಯಕ್ಷ ಸೆನ್ನಿಯವರನ್ನು ಪ್ರತ್ಯೇಕವಾಗಿ ಇಸ್ವೇ ಗುಂಪಿನಲ್ಲಿ ಭೆಟ್ಟಿಯಾಗಲು ಒಂದು ದಿನಕ್ಕಾಗಿ ಬಂದದ್ದು ಮೂರನೆ ಸಂದರ್ಶನ; ಇದೀಗ ಮೇ 30 ಮತ್ತು 31 – ನಾಲ್ಕನೆಯ ಮತ್ತು ಕೊನೆಯ ಸಂದರ್ಶನ. 30ರಂದು ರೋಂ ನಗರದ ಪ್ರೀಫೆಕ್ಟ್ ಅವರ ಮಧ್ಯಾಹ್ನ ಭೋಜನ ಕೊಟ ಮಾರ್ಕಸ್ ಆರಿಲಸ್‌ನ ಅರಮನೆ

ಯಲ್ಲಿ ನಡೆಯಿತು. ಅಸಂಖ್ಯಾತ ಶಿಲಾಪ್ರತಿಮೆಗಳ ವಸ್ತುಸಂಗ್ರಹಾಲಯ ದಂತಿರುವ ಈ ಅರಮನೆಯಲ್ಲಿ ಪ್ರತಿಮಾ ಗೃಹದ ನಡುವೆಯೆ ನಮಗೆ ಭೋಜನದ ಏರ್ಪಾಡು ಮಾಡಿದ್ದರು. ನಾವು ಉಣ್ಣುವುದನ್ನು ಒಬ್ಬ ರೋಮನ್ ಸೆನೆಟರ್, ಅರ್ಥಾತ್ ಅವನ ಪ್ರತಿಮೆ, ದುರುಗುಟ್ಟಿ ನೋಡು ತ್ತಿದ್ದ. ಮಾರ್ಕಸ್ ಆರಿಲಿಸ್ಸನ ಅಶ್ವಾರೋಹಿ ಪ್ರತಿಮೆಯನ್ನು ಎತ್ತರ ದಲ್ಲಿ ಹೊರಗಡೆ ನೆಟ್ಟಿದ್ದಾರೆ. ಅಲ್ಲೇ ಕೆಳಗಡೆ ರೋಮನ್ ಸಾಮ್ರಾಜ್ಯದ ಮೂಲಪುರುಷರನ್ನೂ, ಪುರುಷಾಮೃಗಗಳನ್ನೂ ಎರಡು ಜೀವಂತ ಬಡ ಪಾಯಿ ತೋಳಗಳನ್ನು ಸೆರೆಹಾಕಿದ್ದಾರೆ. ಪ್ರವಾಸಿಗಳಿಗೆ ರೋಮನ್ ಇತಿಹಾಸದ ಪ್ರತ್ಯಕ್ಷ ಮೂಲಪಾಠ ಒದಗಿಸಲು ಈ ತೋಳಗಳು— ರೋಮುಲಸ್, ರೀಮಸ್‌ಗೆ ಹಾಲು ಕೊಟ್ಟ ತೋಳದ ವಂಶಜರೇ ಅಲ್ಲವೆ? ಪ್ರವಾಸಿಗಳ ಕಿಸೆ ಕತ್ತರಿಸುವ ಮಾರ್ಗದರ್ಶಕ ರೋಮನ್ ಮಹಾನುಭಾವನೂ ಹಾಗೆಯೇ ಚಕ್ರಾಧಿಪತ್ಯದ ಮೂಲಪುರುಷರಾದ ರೋಮುಲಸ್—ರೀಮಸ್ ಅವರ ವಂಶಜನಲ್ಲವೆ? ಆ ಮೂಲಪುರುಷ ಯಾರಾರದೋ ತಲೆ ಕತ್ತರಿಸಿದ, ನಿಮ್ಮ ಬೆಂಬಿಡಿದು ನಿಮಗೆ ಕಥೆ ಹೇಳುವ ರೋಮನ್ ಮನುಷ್ಯ ಅದಕ್ಕಿಂತ ಹೆಚ್ಚು ಅಹಿಂಸಾತ್ಮಕವಾಗಿ ಕಿಸೆ ಕತ್ತರಿ ಸುವ ಉದ್ಯೋಗ ಮಾಡುತ್ತಿದ್ದಾನೆ—ಅಷ್ಟೆ. ಕತ್ತರಿಸುವುದಂತೂ ಅವರ ಐತಿಹಾಸಿಕ ಪರಂಪರೆ, ಪ್ರಜ್ಞೆ. ನೀವು ಮಾತ್ರ ಅಂಥವರ ಇದಿರು ಪ್ರಜ್ಞೆ ಕಳೆದುಕೊಳ್ಳಬಾರದು.

ಮಧ್ಯಾಹ್ನ ಈರಿ ಕೇಂದ್ರ ಕಚೇರಿಯಲ್ಲಿ ಸೆಮಿನಾರು. ಸಂಜೆ ನನಗೂ ಮತ್ತು ನಾಲ್ಕಾರು ಇತರ ಇಸ್ವೇ ವಿದ್ಯಾರ್ಥಿಗಳಿಗೂ ಡಾ. ಕ್ರಿಸ್ತರೊಜಾ ಮನೆಯಲ್ಲಿ ಊಟ. ರೋಮಿನಲ್ಲಿ ನಾವು ನಕ್ಷೆ ಹಿಡಿದುಕೊಂಡರೂ ಕುರು ಡರು. ಆದರೆ ಕತ್ತಲಾದ ಮೇಲಂತೂ ಹುಡುಕುವುದು ಅಸಾಧ್ಯವೆಂದು ಕಾರಿನಲ್ಲೇ ಹೋಗುವ ಎಂದು ದುಡುಕಿದೆವು. ಹೊಟೇಲಿನ ಮುಂದೆ ಹೋಗುವ ಯಾವ ಖಾಲಿ ಟ್ಯಾಕ್ಸಿಯೂ ನಮ್ಮತ್ತ ನೋಡಿ ನಿಲ್ಲದಿರುವು ದನ್ನು ನೋಡಿ ಅಚ್ಚರಿಯಾಯಿತು. ಕೊನೆಗೊಂದು ನಿಂತಿತು—ಅದು ಟ್ಯಾಕ್ಸಿಯಲ್ಲ, ಖಾಸಗೀ ಕಾರು. ಅದರ ಡ್ರೈವರು ಖಾಸಗಿಯಾಗಿ ಕಾರಿನ ಒಡೆಯ—ಆದ್ದರಿಂದ ಟ್ಯಾಕ್ಸಿ ಲೈಸೆನ್ಸ್ ಇಲ್ಲದೆಯೆ ನಡೆಸುತ್ತಿದ್ದ ಸಾಹಸಿ. ಒಳಗೆ ಹೋದಕೂಡಲೇ ಅವನ ತುದಿಮೊದಲಿಲ್ಲದ ಮಾತು ತೊಡಗಿತು.

ಅವನಿಗೆ ಸ್ವಲ್ಪ ಇಂಗ್ಲಿಷ್ ಬರುತ್ತಿದ್ದುದೇ ಕೇಡು. ಫಿಲಿಪ್ಪೈನ್ಸ್‌ನ ಅಗಾಧ ಜ್ಞಾನವಿದ್ದವನಂತೆ ಕ್ಯಾಸ್ಟ್ರೋಗೆ ತೋರಿಸಿಕೊಂಡ; ಅವನ ಮಾವ ಯಾರೋ ಅಲ್ಲೇ ನೆಲಸಿದ್ದಾನಂತೆ. ಅಲ್ಲಿಗೆ ಒಂದಲ್ಲ ಒಂದು ದಿನ ಬರಬಹುದು ಎಂದು ಕ್ಯಾಸ್ಟ್ರೋನಿಂದ ಆಮಂತ್ರಣವನ್ನೂ ಸೆಳೆದುಕೊಂಡ. ನಾನು ಮೌನವಾಗಿ ಇದೆಲ್ಲಾ ಹೆಚ್ಚು ದುಡ್ಡು ಕೀಳಲು ಉಪೋದ್ಘಾತವೆಂದು ಆಲಿಸುತ್ತಿದ್ದೆ. ಕ್ಯಾಸ್ಟ್ರೋ ಆತ ಕೇಳಿದಷ್ಟು ತೆತ್ತ. ಮೂರು ಮೈಲಿಗೆ ಎರಡು ಸಾವಿರ ಲೀರೆ (=16 ರೂಪಾಯಿ) ಕಿತ್ತುಬಿಟ್ಟ. ಕ್ರಿಸ್ತರೊಜಾ ಇಸ್ವೇಗೆ ಆಗಿಂದಾಗ ಬಂದುಹೋಗುವ ಪ್ರಾಧ್ಯಾಪಕರಾದ್ದರಿಂದ ನಮಗೆ ಅವರ ಹತ್ತಿರ ಒಳ್ಳೆಯ ಸಲುಗೆ ಇತ್ತು. ಹನ್ನೊಂದು ಗಂಟೆಗೆ ಭೋಜನ ಮುಗಿಸಿ ಹೋಟೆಲಿಗೆ ಮರಳಿದೆವು.

ಮೇ 31 – ಇತಾಲಿಯದಲ್ಲಿ ನನ್ನ ಕೊನೆಯ ದಿನ. ಅಂದು ನಾನು ನನ್ನ ಅಮೇರಿಕನ್ ಪ್ರವಾಸದ ಯೋಜನೆ ಮಾಡಬೇಕು. ಸುಬ್ಬಯ್ಯನಿಂದ ಅಗಲುವ ಯತ್ನ ಮಾಡಬೇಕು. ಸುಬ್ಬಯ್ಯನೂ ಒಂದನೇ ತಾರೀಕು ಮುಂಬಯಿಗೆ ವಿಮಾನದಲ್ಲಿ ಹೊರಡುವ ಸಿದ್ಧತೆಯಲ್ಲಿದ್ದಾನೆ. ಅಂತೂ ಆರೂವರೆ ತಿಂಗಳ ಸಹವಾಸಿಯನ್ನು ತೊರೆಯುವ ಮುಹೂರ್ತ ಹತ್ತಿರ ವಾಗುತ್ತಿದೆ – ನಮಗಿಬ್ಬರಿಗೂ. ಪೂರ್ವಾಹ್ನ ಒಬ್ಬರಿಗೊಬ್ಬರು ಅಂಟಿ ಕೊಂಡು ರೋಮ್ ನಗರವನ್ನು ಸುತ್ತಿದೆವು. ತ್ರೆವಿಯ ಕಾರಂಜಿ ನಮ್ಮ ಹೋಟಲಿನ ಹಿಂಭಾಗದ ಓಣಿಯಲ್ಲಿತ್ತು. ಸುಬ್ಬಯ್ಯನಿಗೆ ನಾನೇ ಮಾರ್ಗ ಮಾರ್ಗದರ್ಶಕ.

ಸಾಯಂಕಾಲ ಐದು ಗಂಟೆಗೆ ನಮ್ಮ ಪದವೀದಾನ ಸಮಾರಂಭ – ಯಾವುದೋ ಅರಮನೆಯಲ್ಲಿ. ಇಸ್ವೇಗೆ ಸಂಬಂಧಪಟ್ಟ ಅಧಿಕಾರಿಗಳೂ, ರಾಜಕೀಯಸ್ಥ ಜನರೂ ಬಂದಿದ್ದರು. ಚಿಕ್ಕ ಉಪನ್ಯಾಸ – ಆಮೇಲೆ ಪ್ರಮಾಣಪತ್ರ ವಿತರಣೆ. ಪ್ರಮಾಣಪತ್ರವನ್ನು ಬಹಳ ಚೆನ್ನಾಗಿ ಮುದ್ರಿ ಸಿದ್ದರು. ಹೆಸರನ್ನು ಕೈಯಕ್ಷರದಲ್ಲಿ ಬರೆಸಿದ್ದರು. ಜತೆಗೆ 'ಇಸ್ವೇ' ಎಂದು ಹೆಸರು ಕೆತ್ತಿದ ಕೋಟುಬಟನನ್ನು ದಾನ ಮಾಡಿದರು.

ರಾತ್ರಿ ನಾನು ಉಳಕೊಂಡ ಹೋಟಲಿನಲ್ಲೇ ನಮಗೆ ಭಾರೀ ಊಟೋಪಚಾರ ನಿರ್ದಿಷ್ಟವಾಗಿತ್ತು. ಆದರೆ ಪೋಪ್ ಜಾನ್ ಅವರ ತೀವ್ರ ಅನಾರೋಗ್ಯ ಸ್ಥಿತಿಯ ದೆಸೆಯಿಂದ ಅದು ಸಾಮಾನ್ಯ ಊಟವಾಗಿ

ಬದಲ್ಗೊಂಡದ್ದು ಮಾತ್ರವೇ ಅಲ್ಲದೆ, ಬಾಗಿಲನ್ನು ಮುಚ್ಚಿ ಮಾಡ ಬೇಕಾದ ಶೋಕಸಮಾರಂಭವಾಗಿ ಕೊನೆಗಂಡಿತು. ಡಿಜನ್ನಾರೋ ಅವ ರದೇ ಕೊನೆಮಾತು. ನಾಪೊಲಿಯ ಔಲಮಾನ್ಯದಲ್ಲಿ ಮೊದಲ ಸ್ವಾಗತ ಕೋರಿದ ನಮ್ಮ ಡೈರೆಕ್ಟರ್ ಸಾಹೇಬರೇ ಕೊನೆಯ ಅರ್‍ರಿವೆದೆರ್ಚಿ ಭಾಷಣ ವನ್ನೂ ಮಾಡಿದ್ದು ಯುಕ್ತವೇ ಆಗಿತ್ತು. ಆರಡಿ ಎತ್ತರದ ನೀಳ ಕಾಯವುಳ್ಳ ಡಿಜನ್ನಾರೊ ಒಳ್ಳೆಯ ಮಾತುಗಾರರು, ಆಡಳಿತಗಾರರು, ಸಂಧಾನ ಚತುರರು. ಚತುರಮತಿಗಳಾದ ಅವರ ನಿರ್ದೇಶನವಿಲ್ಲದಿದ್ದರೆ ಇಸ್ವೇ ಗುಂಪು ಎಂದೊ ಒಡೆದು ಚೂರಾಗುತ್ತಿತ್ತು. ವಿಶಿಷ್ಟ ಅಂತಾರಾಷ್ಟ್ರೀಯ ಶಿಕ್ಷಣ ಸಂಸ್ಥೆಯೊಂದನ್ನು ಕಟ್ಟಿದ ಶ್ರೇಯಸ್ಸು ಡಿಜನ್ನಾರೋ ಅವರಿಗೆ ಸಲ್ಲುತ್ತದೆ. ಅವರ ಈ ಕೀರ್ತಿ ಸ್ವಲ್ಪ ಕಾಲದೊಳಗೆ ಜಿನೇವದ ಅಂತಾ ರಾಷ್ಟ್ರೀಯ ಶ್ರಮಿಕ ಸಂಸ್ಥೆಯ (I. L. O.)ಲ್ಲಿ ಅವರಿಗೆ ಸ್ಥಾನ ಕಲ್ಪಿಸಿ ಕೊಟ್ಟಿತು. ಈಗ ಆರೆಂಟು ವರ್ಷದಿಂದ ಡಾ. ಕಸ್ಸಾನೊ ಎಂಬವರು ಸಂಸ್ಥೆಯ ಡೈರೆಕ್ಟರ್ ಆಗಿ ನೇಮಕಗೊಂಡಿದ್ದಾರೆ. ಐದು ವರ್ಷಗಳ ಕೆಳಗೆ ನನಗೊಮ್ಮೆ ಇಸ್ವೇಯಲ್ಲಿ ಆರ್ಥಿಕ ವಿಷಯಗಳ ಮೇಲೆ ಮೂರು ಉಪನ್ಯಾಸ ನೀಡಲು ಕರೆಯೂ ಬಂದಿತ್ತು—ಅದು ಡಾ। ಕಸ್ಸಾನೋ ಅವರ ಹಸ್ತಾಕ್ಷರವುಳ್ಳ ಪತ್ರ.

1965ರಲ್ಲೋ 66ರಲ್ಲೋ ನಮ್ಮ ದೇಶದಿಂದ ಒಬ್ಬ ಅಭ್ಯರ್ಥಿ ಯನ್ನು ಇಸ್ವೇಗೆ ಕಳಿಸಿಕೊಡುವ ಅಧಿಕಾರವನ್ನು ನನಗೆ ವಹಿಸಿಕೊಟ್ಟರು. ನಮ್ಮ ಕಾಲೇಜಿನ ಪ್ರಿಯ ವಿದ್ಯಾರ್ಥಿಯೊಬ್ಬ ಗುಣ ಶೀಲ ಬುದ್ಧಿ ಮೂರ ರಲ್ಲೂ ವಿಶಿಷ್ಟ ಪ್ರತಿಭಾವಂತ ಶ್ರೀ ದಾಮೋದರ ಹೆಗ್ಡೆ ಹಿಂದುಸ್ತಾನ್ ಲೀವರ್‌ನ ಮುಂಬಯಿ ಕಚೇರಿಯಲ್ಲಿ ಸೇವೆ ಮಾಡುತ್ತಿದ್ದ, ಅವನ ಹೆಸರು ಕಳಿಸಿಕೊಟ್ಟೆ. ಆ ವರ್ಷ ಅವನನ್ನು ಆಯ್ಕೆ ಮಾಡಿಯೆ ಬಿಟ್ಟರು. ಮರುವರ್ಷ ಇನ್ನೊಂದು ಹೆಸರು ಕಳಿಸಿಕೊಟ್ಟೆ—ಅದು ಮಾತ್ರ ಮಾನ್ಯ ವಾಗಲಿಲ್ಲ. ಕಾರಣ: ಇಂಡಿಯ ಸರ್ಕಾರದ ವಿದೇಶೀ ವಿದ್ಯಾರ್ಥಿವೇತನ ಖಾತೆಯ ಆಶೀರ್ವಾದವಿಲ್ಲದೆ ಯಾರೂ ಇಸ್ವೇಗೆ ಹೋಗುವಂತೆ ಆಗ ಬಾರದು. ಸರ್ಕಾರ್‌ವ ಅಡ್ಡ ಪರದೆ ಬಿಟ್ಟಮೇಲೆ ಇಸ್ವೇ ನನಗೆ ಕೊಟ್ಟ ಅಧಿಕಾರವನ್ನೂ ಉಪಸಂಹಾರ ಮಾಡಿತು. ಆದ್ದರಿಂದ ಹೆಗ್ಡೆ ಅದೃಷ್ಟ ಶಾಲಿ—ನಾಪೊಲಿಗೆ ಹೋಗಿ ಅಧ್ಯಯನದಲ್ಲೂ ಮಿತಸಂಪಾದನೆಯಲ್ಲೂ

ಒಳ್ಳೆಯ ಹೆಸರು ಗಳಿಸಿದ – 40 ಜನರ ತಂಡದಲ್ಲಿ ಎರಡನೆಯ ರ್‍ಯಾಂಕ ನ್ನೂ ಗಳಿಸಿದ. ಅನಂತರ ಇಂಡಿಯದಿಂದ ತೆರಳಿದವರ ಪಟ್ಟಿ ನೋಡಿದೆ. ಅದರಲ್ಲಿ ಹೆಚ್ಚಾಗಿ ದಿಲ್ಲಿಯ ಯೋಜನಾಭವನ, ಆರ್ಥಿಕ ಸಚಿವಾಲಯ ಅಥವಾ ಐಎಎಸ್ ಅಧಿಕಾರಿಗಳೇ ಗುತ್ತಿಗೆ ಹಿಡಿದಿದ್ದಾರೆ. ಎಲ್ಲೋ ಒಮ್ಮೆ ಕೇರಳ ವಿಶ್ವವಿದ್ಯಾಲಯದ ಒಬ್ಬ ಪ್ರಾಧ್ಯಾಪಕರು, ಈ ವರ್ಷ ಯಾದವಪುರ ವಿಶ್ವವಿದ್ಯಾನಿಲಯದ ಒಬ್ಬ ಪ್ರಾಧ್ಯಾಪಕ, ಮುಂದಿನ ವರ್ಷ ಮೈಸೂರು ವಿಶ್ವವಿದ್ಯಾನಿಲಯದ ಪ್ರಾಧ್ಯಾಪಕರೊಬ್ಬರು ಹೋದದ್ದುಂಟು. ಸರ್ಕಾರಿ ಪ್ರಭಾವಲಯದ ಶಕ್ತಿ ಮುರಿಯಬಲ್ಲ ಏಕಾಂಗವೀರರು ವಿರಳ ತಾನೆ.

ವರ್ಷಕ್ಕೆ ಮೂರು ನಾಲ್ಕು ಬಾರಿ ಇಸ್ವೇ ಕಚೇರಿಯಿಂದ ಮುದ್ರಿತವಾದ ಒಂದು ಪತ್ರಿಕೆ ಬರುತ್ತದೆ. ಅದರಲ್ಲಿ ಪ್ರಥಮ ವರ್ಷದ ವಿದ್ಯಾರ್ಥಿ ಸಮುದಾಯದ ಹೆಸರು ವಿಳಾಸ ಇದೆ. ಬಂದಮೇಲೆ ಒಂದು ವರ್ಷ ನಾಲ್ಕಾರು ಜನರಿಗೆ ಪತ್ರ ಬರೆದೆ. ಒಬ್ಬಿಬ್ಬರಿಂದ ಉತ್ತರ ಬಂತು. ಒಂದು ವರ್ಷ ನನಗೆ ತೀರ ಸ್ನೇಹಿತರೆನಿಸಿದವರಿಗೆ ಕ್ರಿಸ್ಮಸ್ ಕಾರ್ಡ್ ಕಳಿಸಿದೆ – ನಾಲ್ಕಾರು ಜನರಿಂದ ಮಾತ್ರ ಪ್ರತಿ-ಕಾರ್ಡು ಬಂತು. ಉಳಿದವರ ಸುದ್ದಿ ಇಲ್ಲ. ವಲಸೆಹೋಗುವ ಹಕ್ಕಿಗಳು ಕೆಲತಿಂಗಳು ಒಂದೇ ಅಕ್ಷಾಂಶದಲ್ಲಿರುವ ಮರವನ್ನೋ ನೀರ ನೆಲೆಯನ್ನೋ ಗುರುತಿಸಿ ಕೆಲದಿನ ಇದ್ದು ತಂತಮ್ಮ ದೇಶಗಳಿಗೆ ತೆರಳುವಂತೆ ಆಗಿದೆ ನಮ್ಮ ಇಸ್ವೆ ನೀಡಿದ ಕಥೆ. ಪ್ರಪಂಚದಲ್ಲಿ ಬಾಳುವ ನಮಗೆಲ್ಲ ನಮ್ಮ ನಮ್ಮ ಪ್ರಪಂಚವೊಂದು ಬೇರೆಯೇ ಇದೆ – ಅದನ್ನು ಎಟ್ಲಾಸನಂತೆ ನಾವೇ ಹೊರಬೇಕು. ಅದರ ಭಾರ ಹೆಚ್ಚಾದಂತೆ ಹೊರಗಿನ ಪ್ರಪಂಚಕ್ಕೂ ನಮಗೂ ತೆರೆ ಕಟ್ಟುತ್ತದೆ. ತೆರೆಯನ್ನು ತೂರಿ ವಿಶ್ವಬಂಧುತ್ವವನ್ನು ಸಾರಲು ವ್ಯವಧಾನವೂ ಇರಬೇಕು, ಅರ್ಥಬಲವೂ ತಕ್ಕಮಟ್ಟಿಗೆ ಇರಬೇಕು. ಹಾಗಾಗಿ ಪತ್ರವ್ಯವಹಾರವೂ ಇಲ್ಲ, ಭೆಟ್ಟಿ ಸಾಧ್ಯವಿಲ್ಲ ಎನ್ನುವ ಸ್ಥಿತಿಯಲ್ಲಿ ನಾನಿದ್ದೇನೆ – ಉಳಿದವರೂ ಹಾಗೆಯೇ ಇದ್ದಾರು.

## ○ ○ ಅರ್‍ರಿವೆದೆರ್ಚಿ ರೋಮಾ

ರೋಮ್ ಬಿಡುವ ಹೊತ್ತು ಬಂದಾಗ ದೇವರಾಯರ ನೆನಪಾಗದೆ ಇರಲಿಲ್ಲ. ಬರುವಾಗ ಇದ್ದವರು ಅವರ ಅವಧಿ ಮುಗಿದದ್ದರಿಂದ ನೈಜೇರಿ

ಯಕ್ಕೆ ವರ್ಗವಾಗಿ ಹೋದರು. ಅಲ್ಲಿ ಭಾರತೀಯ ಹೈಕಮಿಷನರಾಗಿ ಕೆಲಸ ಮಾಡಿ, ಭಾರತದಲ್ಲಿ ಕೆಲಕಾಲ ಇದ್ದು ಮತ್ತೆ ನೇಪಾಳದಲ್ಲಿ ಕೌನ್ಸಲರ್ ಆಗಿ ಈಗ ಫಿಲಿಪೈನ್ಸ್‌ನಲ್ಲಿ ರಾಯಭಾರಿಯಾಗಿದ್ದಾರೆ, ಅವರ ಪ್ರತಿಭೆ ಮತ್ತು ಕಾರ್ಯಸಾಮರ್ಥ್ಯದ ಪರಿಚಯ ಪಡೆವಷ್ಟು ಕಾಲವಾದರೂ ಅವರು ರೋಮಿನಲ್ಲಿದ್ದದ್ದು ನನ್ನ ಸೌಭಾಗ್ಯ. ಅವರ ಮನೆಯಲ್ಲಿ ಎಷ್ಟೆಷ್ಟೋ ಮಧುರ ಆತಿಥ್ಯವನ್ನುಂಡ ನನಗೆ ಅವರು ಮೂರು ನಾಲ್ಕು ಬಾರಿ ಮಂಗ ಳೂರಿಗೆ ಬಂದರೂ ಅವರನ್ನು ಉಡುಪಿಗೆ ಕರೆದುಕೊಂಡು ಬರಲು ಆಗ ಲಿಲ್ಲ, ಆದರೆ ಅವರು ಹೋದಲ್ಲಿ ನನ್ನ ಸ್ನೇಹಿತರನ್ನು ನೋಡಿ ಬರಲು ಹೇಳುವುದನ್ನಂತೂ ನಾನು ಬಿಡುವವನಲ್ಲ. ಈ 'ಪೀಡೆ' ಅವರು ತಡೆದು ಕೊಂಡಿದ್ದಾರೆ.

ಸಿಲೋನೆ ದಂಪತಿಯನ್ನು ಕಂಡು ಬರಬೇಕಾಗಿತ್ತು–ಆದರೆ ವಿಳಾಸ ಹುಡುಕಿಕೊಂಡು ಹೋಗುವುದು ಕಷ್ಟವೆಂದು ಪತ್ರ ಬರೆದು ಸುಮ್ಮನಾದೆ. ನನ್ನ ರಕ್ಷಕ ದೈವ ಬರಾತಿಯೇರಿ ಅವರನ್ನು ಪದವೀ ಪ್ರದಾನ ಸಮಾರಂಭ ದಲ್ಲಿ ಬೀಳ್ಕೊಟ್ಟೆ, ಸ್ನೇಹಿತರೆಲ್ಲ 31ರ ರಾತ್ರಿಯೂಟದ ಬಳಿಕ ಆಗಲಿದರು, ಸುಬ್ಬಯ್ಯ ಮುಂಜಾನೆ ನನಗಿಂತ ಮೊದಲು ವಿಮಾನ ನಿಲ್ದಾಣಕ್ಕೆ ಹೊರಟ. ವಿಶ್ವಕುಟುಂಬದ ನಟ್ಟನಡುವೆ ವಾಸಮಾಡುತ್ತಿದ್ದ ನಾನು ಮತ್ತೆ ಏಕಾಕಿಯಾಗಿ ನನ್ನ ಪರ್ಯಟನ ತೊಡಗಿದೆ,

ಮಧ್ಯಾಹ್ನ 1ಕ್ಕೆ ನನ್ನ ವಿಮಾನ ಹೊರಡಬೇಕು. ನಿಲ್ದಾಣದಲ್ಲಿ ಜತೆಗೆ ತಂದ ಸಾಮಾನು ತೂಗಿದರೆ 10 ಕೇಜಿ ಹೆಚ್ಚಾಗಿತ್ತು, ಪೆಟ್ಟಿಗೆ ತೆರೆದು ಬಟ್ಟೆಬರೆ, ಪುಸ್ತಕ, ಬೂಟು ಎಲ್ಲ ಎತ್ತಿದೆ–ಎತ್ತಿ ಬಿಸುಡುವು ದೆಲ್ಲಿಗೆ ಎಂಬ ಪ್ರಶ್ನೆ, ಅಲ್ಲೇ ಸೋಫಾದ ಬುಡಕ್ಕೆ ಸೇರಿಸಿ ತಕ್ಕಡಿಯ ಸಮೀಪ ಮರಳಿ ಪೆಟ್ಟಿಗೆ ಮುಚ್ಚಿದೆ, ಆದರೂ ಉಳಿದಷ್ಟಕ್ಕೆ 10 ಪೌಂಡ್ ದಂಡ ತೆರಲೇಬೇಕಾಯಿತು, ಓವರ್ಕೋಟಿನೊಳಗೆ ಸರಕು ಬಚ್ಚಿಡುವ ಕಲೆಯಲ್ಲಿ ಅನಭಿಜ್ಞನಾದ ನಾನು ಟೈಪರೈಟರನ್ನು ಬಚ್ಚಿಕೊಂಡಿರಬೇಕಾ ಗಿತ್ತು – ಐದು ಪೌಂಡು ಉಳಿಯುತ್ತಿತ್ತು ಎಂದರು ನನ್ನ ಲಂಡನ್ ಸ್ನೇಹಿ ತರು. ಆದರೆ ಅದು ನನ್ನಿಂದ ಸಾಧ್ಯವಿಲ್ಲ – ಎಲ್ಲಾ ತೋರಿಸಿಯೇ ತೀರಬೇಕು. ಇದು ವ್ಯವಹಾರ ಅಲ್ಲ – ಮೊದ್ದುತನ ಎನ್ನಿ. ನನಗದೇ ರಕ್ಷೆ, ಶಿಕ್ಷೆ,

ಅಂತಾರಾಷ್ಟ್ರೀಯ ವಿಮಾನದಲ್ಲಿ ಅದು ನನ್ನ ಪ್ರಥಮ ಯಾನ. ಸೀಟಿನ ಬೆಲ್ಟು ಬಿಗಿದು ವ್ಯೋಮಯಾತ್ರೆಗೆ ಸಿದ್ಧನಾದೆ. ಜೇಬು ಮುಟ್ಟಿ ನೋಡಿಕೊಂಡೆ. ಅಲಿತಾಲಿಯದ ರೋಮಾ–ಲಂಡನ್–ನ್ಯೂಯಾರ್ಕ್–ವಾಷಿಂಗ್ಟನ್ – ನ್ಯೂಯಾರ್ಕ್–ಲಂಡನ್ – ರೋಮಾ – ಮುಂಬಯಿ – ಇಷ್ಟು ರಿಟರ್ನ್ ಟಿಕೆಟ್ ಹೊರಕ್ಕೆಳೆದು ತಪಾಸು ಮಾಡಿದೆ. ಜತೆಗಿದ್ದ 175 ಡಾಲರು ನಗದನ್ನು ಮುಟ್ಟಿ ಖಾತ್ರಿ ಮಾಡಿಕೊಂಡೆ. ಜಾಗತಿಕ ಆಹಾರ ಕಾಂಗ್ರೆಸಿನ ನೆಪದಲ್ಲಿ ನನಗೊಂದು ಒಳ್ಳೆ ನಡತೆ ಬಹುಮಾನ (Good Conduct Prize) ವಾಷಿಂಗ್ಟನ್ ಯಾತ್ರೆ. ಲಂಡನ್ ನೋಡುವ ಬಯಕೆಯಿಂದ ನೇರವಾಗಿ ವಾಷಿಂಗ್ಟನ್ ಹೋಗದೆ ವಯಾ ಲಂಡನ್ ಹಾದಿ ಹಿಡಿದಿದ್ದೆ. ಗಗನಸಖಿ ಕೊಟ್ಟ ಪೆಪ್ಪರ್‌ಮೆಂಟ್ ತಿಂದು ಗಾಜಿನ ಕಿಂಡಿಯಿಂದ ತೋರಿದಷ್ಟು ರೋಮ್ ನಗರದ ಮಾಡು, ಮರ, ಬಯಲು, ಪಚ್ಚೆಪಸುರಿಗೆ 'ಅರ್ರಿವೆದೆರ್ಚಿ' ಎಂದೆ. ಅರ್ರಿವೆದೆರ್ಚಿ ರೋಮಾ, ಅರ್ರಿವೆದೆರ್ಚಿ ಇತಾಲಿಯಾ!! 'ಹೋಗಿ ಬರತೇವಿನ್ನ ನೆನಪಿರಲಿ ತಾಯಿ! ಸಂ ನಮಸ್ಕಾರ ನಿಮಗ'.

## ○ ○ ನಾನೂ ಅಮೇರಿಕೆಗೆ ಹೋಗಿದ್ದೆ

ಇಸ್ವೇ ಅಧ್ಯಯನ ಪ್ರಸಂಗದಲ್ಲಿ ಒದಗಿದ ಒಂದು ಸುಸಂದರ್ಭ – ಒಳ್ಳೆ ನಡತೆ ಬಹುಮಾನ – ಅಮೆರಿಕದ ಸಣ್ಣ ಹದಿನೆಂಟು ದಿನಗಳ ಪ್ರವಾಸ ಎಂದು ಮೊದಲೇ ತಿಳಿಸಿದ್ದೇನೆ. ತರಗತಿಯ ಇಬ್ಬರು ಬುದ್ಧಿವಂತ ಹುಡುಗರಿಗೆ ಸುವರ್ಣಪರ್ವ ಒದಗಿಸಿ ಇಸ್ವೇ ನಮ್ಮನ್ನು ಧನ್ಯರಾಗಿ ಮಾಡಿತು. ಫಿಲಿಪ್ಪಾಯಿನ್ಸ್‌ನ ಕ್ಯಾಸ್ಟ್ರೋ ('ನಾನು ಕ್ಯೂಬದ ಕ್ಯಾಸ್ಟ್ರೊ ಅಲ್ಲ, ದಮ್ಮಯ್ಯ' ಎನ್ನುತ್ತಿದ್ದ ಫಿಲಿಪ್ಪಾಯಿನ್ಸ್ ಸರ್ಕಾರದ ಕೃಷಿ ಆಯೋಗದ ಉಪಾಧ್ಯಕ್ಷ – ಸುಮಾರು 45 ವರ್ಷದ ಹಳಬ) ನನ್ನೊಂದಿಗೆ ಅಮೆರಿಕಕ್ಕೆ ಸಹಗಮನ ಮಾಡಿದ ಸಹಪಾಠಿ. ಕ್ಯಾಸ್ಟ್ರೋ ನನಗಿಂತ ವಯಸ್ಸಿನಲ್ಲಿ ಹಿರಿಯನಾದದ್ದರಿಂದಲೂ ಮತ್ತು ಪ್ರಾಯಃ ಭಾರತಕ್ಕಿಂತಲೂ ಪೂರ್ವದೇಶದ ನಾಗರಿಕನಾದ್ದರಿಂದಲೂ ಸ್ವಭಾವತಃ ಬಹಳ ಶಾಂತ, ಸರಳ, ಜೀವಿ. ರಾಜದೂತಾವಾಸಕ್ಕೆ ಬೇಕೆನಿಸುವ ಶಿಷ್ಟಾಚಾರ, ವಿನಯ, ಸೌಜನ್ಯಗಳುಳ್ಳ ಸಂಸ್ಕಾರವಂತ. ಆತ ವ್ಯವಹಾರಿ ಅರ್ಥಶಾಸ್ತ್ರಜ್ಞನಾದ್ದರಿಂದ ಅವನ ಬತ್ತಳಿಕೆಯಲ್ಲಿ ತಾತ್ವಿಕ, ವೈಚಾರಿಕ ಅಂಶಗಳು ಕಡಿಮೆ, ಅನುಭವದ ಪ್ರಮಾಣ ಹೆಚ್ಚು. ನಾವಿಬ್ಬರೂ ಸೇರಿ ವಾಶಿಂಗ್ಟನ್‌ನಲ್ಲಿ ಹೊಟೆಲ್ ಎಂಬಾಸ್ಸಡರ್ಸ್‌ನಲ್ಲಿ ದಿನಕ್ಕೆ ತಲಾ ಹದಿನಾಲ್ಕು ಡಾಲರಿನ ಡಬಲ್ ರೂಮ್ ಕಾದಿರಿಸಿಕೊಂಡೆವು. ಕ್ಯಾಸ್ಟ್ರೋ ರೋಮಿನಿಂದ ವಾಷಿಂಗ್ಟನ್ನಿಗೆ ನೇರವಾಗಿ ಹಾರಾಡಿದ, ನಾನು ಲಂಡನಿನಲ್ಲಿ ಒಂದು ದಿನ ನಿಂತು ಮರುದಿನ ನ್ಯೂಯಾರ್ಕ್‌ಗೆ ಹೋಗುವ ಆಲಿತಾಲಿಯವನ್ನು ಹಿಡಿದೆ.

ಲಂಡನಿನ ನನ್ನ ಪ್ರಥಮ ಸಂದರ್ಶನ ಆಂಗ್ಲ ಸಾಹಿತ್ಯಪ್ರೀತಿಯ ಒಂದು ಕ್ಷಣಿಕ ನಿಲುಗಡೆ ಆಯಿತು. ಎಲ್ಲಾದರೂ ಒಂದು ಪಕ್ಷ ಅಮೇರಿಕದಿಂದ ನಾನು ಶಾಂತಸಾಗರದ ಹಾದಿ ಹಿಡಿದರೆ ಲಂಡನ್ ಮುಟ್ಟದೆ ತೆರಳಬೇಕಾಗುವುದೋ ಎಂಬ ಶಂಕೆಯಿಂದ ಹೇಗೂ ದಾರಿಯಲ್ಲಿದೆ, ನಿಲುಗಡೆಗೆ ಏನೂ ತೆರಬೇಕಾದದ್ದಿಲ್ಲ ಎಂದಮೇಲೆ ಲಂಡನಿನಲ್ಲಿಳಿದೆ. ಹಡಗಿನ ಸ್ನೇಹಿತ

ಭಂಡಾರಿ ದೂರದ ಹೀತ್‌ರೋ ನಿಲ್ದಾಣಕ್ಕೆ ಬರಲಾರನೆಂದು ಮೊದಲೇ ಯೋಚಿಸಿ ಅವನ ಮನೆ ವಿಳಾಸ ಭದ್ರವಾಗಿ ಜೇಬಲ್ಲಿರಿಸಿದ್ದೆ. ಇಳಿದವನೇ 5 ಶಿಲಿಂಗ್ ತೆತ್ತು ನೇರ ಬಸ್ಸು ಹಿಡಿದು ವೆಸ್ಟೆಂಡ್ ಟರ್ಮಿನಲಿಗೆ ಹೋದೆ; ಅಲ್ಲಿ ಭಂಡಾರಿಯ ಗೆಳೆಯನೊಬ್ಬ ನನಗಾಗಿ ಕಾದಿದ್ದ; 33, ಜೆನ್ನರ್ ರೋಡಿಗೆ ದಾರಿ ತೋರಿಸಿದ. ಮೊದಲು ನನ್ನ ಕಣ್ಣಿಗೆ ಕಂಡ ವೈಶಿಷ್ಟ್ಯ ಲಂಡನಿನ ಹಸುರು-ಕಪ್ಪು ಟ್ಯಾಕ್ಸಿ. ಟ್ಯಾಕ್ಸಿಗೆಂದೇ ಆಸ್ಟಿನ್ ಕಂಪೆನಿ ಕಟ್ಟಿಸಿದ ಸುಂದರ ಅದು. ಚಾಲಕನ ಪಕ್ಕದಲ್ಲಿ ಒಂದು ಗೂಟಕ್ಕೆ ನಿಮ್ಮ ಸಾಮಾನನ್ನು ಕಟ್ಟುತ್ತಾರೆ. ಹಿಂದಿನಿಂದ ನೀವು ಲಾರ್ಡ್ ಹಾಗೆ ಕೂತುಕೊಳ್ಳಬೇಕು. ಕಾರಿನ ಗಾತ್ರ, ಬಾಗಿಲು ಎಲ್ಲ ದೊಡ್ಡದು, ಕೆಳಗಿಳಿವಾಗ ನೀವು ತೆರಬೇಕಾದ ಮೊತ್ತವೂ ದೊಡ್ಡದೆ.

ಲಂಡನಿನಲ್ಲಿ ಅಗ್ಗ ಬೆಲೆಗೆ ಪ್ರಯಾಣ ಮಾಡುವುದು ಹೇಗೆಂದು ಮರು ಪಯಣದಲ್ಲಿ ಕಲಿತುಕೊಂಡೆ. ಲಂಡನ್ ಭೂಗರ್ಭದ ರೈಲಿನ ಒಂದು ನಕ್ಷೆ ಸಿಗುತ್ತದೆ. ಅದರಲ್ಲಿ ಎಲ್ಲಾ ನಿಲ್ದಾಣಗಳನ್ನು ನಮೂದಿಸಿದ್ದಾರೆ. ಬೇರೆ ಬೇರೆ ಲೈನುಗಳಿಗೆ ಬೇರೆ ಬೇರೆ ಬಣ್ಣ ಹಚ್ಚಿದ್ದಾರೆ. ಅತಿ ಸುಲಭ ದರದಲ್ಲಿ, ಅತಿ ಕ್ಷಿಪ್ರವಾಗಿ ಲಂಡನ್ ಸುತ್ತಲು ಈ ಟ್ಯೂಬ್ ರೈಲು ಅನುಕೂಲ. ಬಸ್ಸು ದರವೂ ಅಗ್ಗವೇ – ಅಂದರೆ ಟ್ಯಾಕ್ಸಿಗಳ ವಿಪರೀತ ಬೆಲೆಯನ್ನು ಗಮನಿಸಿದಾಗ.

ಎರಡನೆ ವೈಶಿಷ್ಟ್ಯ ಲಂಡನಿನ ನಸುಕು (ಟ್ವೈಲೈಟ್) ಸಂಜೆ ಯಾದರೂ ರಾತ್ರಿ ಆಗುವುದಿಲ್ಲ. ನಡುವಣ ಸುದೀರ್ಘ ಅವಧಿ – ಸೂರ್ಯ ಕಂತಿದ ಮೇಲೂ ಹಬ್ಬಿರುವ ನಸುಬೆಳಕು ಉಷ್ಣವಲಯದ ನಮಗೆ ರೂಢಿ ಇಲ್ಲದ ಒಂದು ಪರಿಸರ. ಹೈಡ್ ಪಾರ್ಕಿನಲ್ಲಿ ಭಾಷಣಕಾರರನ್ನು ಆಲಿಸಿ ವಾಚು ನೋಡಿದರೆ ಗಂಟೆ ಎಂಟೂವರೆ. ಆದರೆ ಕತ್ತಲಿನ್ನೂ ಆಗಿಲ್ಲ. ಸುಮಾರು 9.30ರ ವರೆಗೂ ಈ ನಸುಬೆಳಕು ಊರೆಲ್ಲ ಚೆಲ್ಲಿರುತ್ತದೆ. ಭಂಡಾರಿಯ ಮನೆಗೆ ಹೋಗಿ ಅವನದೇ ಪಾಕ ಉಂಡು ಮಲಗಿದೆ. ಆಗಲೂ ಹೊರಗೆ ನಸುಬೆಳಕು ತೋರುತ್ತಿತ್ತು. ಹಡಗಿನಲ್ಲಿ ಮಾಡಿಕೊಂಡ ಪರಿಚಯ ನನಗೆ ಲಂಡನಿನಲ್ಲಿ ಪುಕ್ಕಟೆ ಬಿಡಾರ ಒದಗಿಸಿತ್ತು. ಭಂಡಾರಿ ಬಹಳ ಸ್ನೇಹಶೀಲ. ಅವನ ಕೊಠಡಿಯಲ್ಲಿ ಇರುವೊಂದು ಮಂಚವನ್ನುನನಗೆ ಕೊಟ್ಟು, ತಾನು ಸೋಫದಲ್ಲಿ ಮಲಗಿದ. ಮುಂಜಾನೆ 5ಕ್ಕೆ ಕಿಟಕಿಯೊಳಗೆ

ಬೆಳಕು ಹರಿಯುವಾಗ ಭಂಡಾರಿ ಕೆಲಸಕ್ಕೆ ಹೋಗಲು ಸಿದ್ಧನಾಗುತ್ತಿದ್ದ. ಕೆಲ್ವಿನೇಟರ್‌ನಲ್ಲಿ ಮಾರಾಟದ ಮನುಷ್ಯ,(ಸೇಲ್ಸ್‌ಮ್ಯಾನ್) ಆಗಿದ್ದ ಭಂಡಾರಿ ಈಗ ಎರಡನೆಯ ಸೋಪಾನ ಮುಟ್ಟಿದ್ದ. ಮೊದಲ ಸೋಪಾನ ಅಂಚೆ ಕಚೇರಿಯಲ್ಲಿ ಅಂಚೆ ಚೀಟಿ ಮಾರುವುದು. ಆ ಹಂತ ಮುಗಿಸಿ ಸೇಲ್ಸ್ ಮ್ಯಾನ್ ಆಗಿದ್ದ; ಸಿಗುವ ವಾರದ ಹತ್ತು ಪೌಂಡಿನಲ್ಲಿ 3½ ಪೌಂಡ್ ಕೊಠಡಿಗೆ ಕೊಡಬೇಕು. ಉಳಿದದ್ದರಲ್ಲಿ ದಿನ ನೂಕಬೇಕು. ಆದರೆ ಇದೇ ಈ ಸಾಹಸಿ ತರುಣನ ಗಂತವ್ಯವಾಗಿರಲಿಲ್ಲ; ಆತ ಲಂಡನ್ ವಿಶ್ವವಿದ್ಯಾನಿಲಯದಲ್ಲಿ ವಾಣಿಜ್ಯ ಪದವಿಯ ವರ್ಗಗಳಿಗೆ ತೆರಳುತ್ತಿದ್ದ – ಒಪ್ಪೊತ್ತಿನ ವರ್ಗಗಳಲ್ಲಿ ಡಿಗ್ರಿ ಸಂಪಾದಿಸಿದರೆ ಮುಂದೆ ಬೇರೆ ಮೇಲಿನ ಚಾಕರಿ ದೊರೆಯಬಹುದು. ಆತನ ವಾಸ್ತವ್ಯ ವಲಯ ಲಂಡನ್ನಿನ ಈಸ್ಟ್‌ಎಂಡ್ – ಅಂದರೆ ಬಡ ಮಧ್ಯಮ ವರ್ಗದವರ ಕೇರಿ; ಕೂಲಿಕಾರರ ವಠಾರ. ಆ ಮನೆಯಲ್ಲಿರುತ್ತಿದ್ದ ಎಲ್ಲಾ ಕರಿ–ಬಿಳಿ ಸಂಸಾರಗಳಿಗೂ ಭಂಡಾರಿ ಗೆಳೆಯನಾಗಿದ್ದ. ಬಾಯಾಳಿ, ಉಬ್ಬಾಳು; ಸುಲಭದಲ್ಲಿ ಸೋಲೊಪ್ಪಿಕೊಳ್ಳುವ ಸ್ವಭಾವದವನಲ್ಲ ಈ ಭಾರತೀಯನೆಂದು ವಠಾರವೇ ತೀರ್ಮಾನಿಸಿತ್ತು. ಅವನಿಗೆ ನನ್ನ ಮರುಪ್ರಯಾಣದ ಹೊತ್ತು ನನ್ನ ಟ್ರಾನ್ಸಿಸ್ಟರನ್ನು ಮಾರಿ 9 ಪೌಂಡ್ ಸಂಪಾದಿಸಿದೆ. ಅದರ ನೆರವಿಂದ ಹಲವಾರು ನಾಟಕಗಳನ್ನು ನಾನು ಲಂಡನಿನಲ್ಲಿ ನೋಡುವಂತಾಯಿತು. ಈ ವಿಷಯ ಆಮೇಲೆ ಬರೆಯುತ್ತೇನೆ.

## ○ ○ ಹಾರಿದನು ಹನುಮಂತ

ಲಂಡನಿನಿಂದ ಅಮೆರಿಕಕ್ಕೆ ಹಾರಾಡುವಾಗ ನನಗೆ ಬಹಳ ವರ್ಷ ಹಿಂದೆ ಗೊರೂರು ಅವರು ಹಾಡಿದ ಜನಪದಗೀತದ ಒಂದು ಚರಣ ನೆನಪಾಯಿತು: 'ಹಾರಿದನು ಹನುವಂತ ಲಂಕೆಗೆ। ಹಾರಿದನು ಹನುಮಂತ'. ಇತಾಲಿಯದಲ್ಲಿ ಸಂಗ್ರಹಿಸಿದ ಕೆಲವು ಪುಸ್ತಿಕೆ, ಒಂದಿಷ್ಟು ಚಿಕ್ಕಪುಟ್ಟ ಅನಾವಶ್ಯಕ ಸಾಮಗ್ರಿಗಳು, ಬಟ್ಟೆಬರೆ – ಇಷ್ಟರ ಹೊರತು ನನ್ನ ಪೆಟ್ಟಿಗೆಯೊಳಗೆ ಏನೇನೂ ಇರಲಿಲ್ಲವಾದ್ದರಿಂದ ನಿರ್ಭೀತಿಯಿಂದ ಲಂಡನಿನ ಕಸ್ಟಮ್ಸ್ ದಾಟಿ ಜೂನ್ 2ನೇ ದಿನಾಂಕ ಮಧ್ಯಾಹ್ನದ ರೋಮ್-ಲಂಡನ್–ನ್ಯೂಯಾರ್ಕ್ ಹಾರಾಟವನ್ನು ಸೇರಿಕೊಂಡೆ. ಇತಾಲಿಯನ

ಸರ್ಕಾರ ನೀಡಿದ 180 ಡಾಲರು ಜೋಪಾನವಾಗಿಟ್ಟಿದ್ದೆ. ಯಾವ ಜನ್ಮದ ಪುಣ್ಯವೋ, ಇದೆಂಥ ಆಕಸ್ಮಿಕವೋ ನಾನು ಬೇಡದೆಯೆ ಭಾಗ್ಯಲಕ್ಷ್ಮಿ ಎಡ ತಾಕಿದಂತೆ ಆಗಿತ್ತು. ವಿಮಾನ ಹಾರುತ್ತಿತ್ತೋ ನಾನೋ ಹೇಳಲಾರೆ – ಅಂಥ ಉಲ್ಲಾಸ, ಸಂಭ್ರಮ. ಅತಲಾಂತಿಕ ಸಾಗರದಾಚೆಗಿನ ಮಹಾ ಭೂಖಂಡದ, ವಿಶ್ವದ ಅಗ್ರೇಸರ ರಾಷ್ಟ್ರದ – ಜನ್ಮಪ್ರಥಮ ಸಂದರ್ಶನ ನಿಜವಾಗಿ ರೋಮಾಂಚನೀಯವಾಗಿತ್ತು.

ನೀಲಸಾಗರದ ಮೇಲೆ ಅಲಿತಾಲಿಯ ಕರವೇಲ್ ಐದು ತಾಸು ಹಾರಾಡಿ ನ್ಯೂಯಾರ್ಕಿನಲ್ಲಿ ತಂಗಿದಾಗ ಬೃಹದ್ಗಾತ್ರದ ಆ ನಿಲ್ದಾಣ ನೋಡಿದಾಗ ಇದು ಅಮೆರಿಕ ಎಂದು ತನ್ನಿಂತಾನೇ ವ್ಯಕ್ತವಾಗುತ್ತಿತ್ತು. ಇಡ್ಲೆವೈಲ್ಡಿನಿಂದ ನಾನು ಇನ್ನೊಂದು ಪಕ್ಕದ ಅಂತರ್ದೇಶೀಯ ನಿಲ್ದಾಣಕ್ಕೆ ಹೋಗಿ ಇನ್ನೊಂದೇ ವಿಮಾನ ಹತ್ತಬೇಕು. ಪಾಸ್‌ಪೋರ್ಟ್ ತೋರಿಸಿ ಈಚೆ ಕಡೆ ಬರುವಷ್ಟರಲ್ಲಿ ವಿಮಾನದಿಂದ ನಮ್ಮ ಪೆಟ್ಟಿಗೆಗಳೆಲ್ಲ ಹಾಜರು. ಹತ್ತು ಮಿನಿಟಿನಲ್ಲಿ ನ್ಯೂಯಾರ್ಕಿನ ಕಸ್ಟಮ್ಸ್ ಪರೀಕ್ಷೆ ಮುಗಿದುಹೋಯಿತು – ಅಂದರೆ ಅಮೆರಿಕದ ಜೀವನಕ್ರಮದ ಕ್ಷಿಪ್ರತೆಯ ಪ್ರಥಮ ಪರಿಚಯವಾದಂತೆ. ಒಂದು ತಾಸಿನಲ್ಲಿ ವಾಷಿಂಗ್ಟನ್ ಮುಟ್ಟಿ ಅರ್ಧ ತಾಸು ನಿಲ್ದಾಣದ ಮೇಲ್ಗಡೆಯೇ ಹಾರಾಟ ಮಾಡಿ ಇಳಿದ ಕೂಡಲೆ ಲೌಂಜಿನಲ್ಲಿ ವಿಶ್ವ ಆಹಾರ ಸಮ್ಮೇಳನದ ಪ್ರತಿನಿಧಿಗಳಿಂದ ಸ್ವಾಗತ.'ನೀವು ಇತಾಲಿಯನ್ ಪ್ರತಿನಿಧಿಯೋ, ಇಂಡಿಯದ ಪ್ರತಿನಿಧಿಯೋ?' ಎಂಬ ಪ್ರಶ್ನೆ.' ಉತ್ತರ ನಾಳೆ ಹೇಳುತ್ತೇನೆ', ಈಗ ಅಂಬಾಸ್ಸಡರ್ಸ್ ಮುಟ್ಟಿಸಿ' ಅಂದೆ. ಕ್ಯಾಸ್ಟ್ರೋ ಮೊದಲೆ ಹೋಟಲಲ್ಲಿ ಉಪಸ್ಥಿತನಾಗಿದ್ದ. ಅವನ ಕೊಠಡಿ ಸೇರಿದೆ. ಹೋಟಲೊಂದು ಚಕ್ರವ್ಯೂಹ. ಹತ್ತುವ ಬಾಗಿಲು ನೆನಪಿನಲ್ಲಿಡಬೇಕು; ಅಂಕಪಂಕವಾಗಿ ಕಾರಿಡಾರುಗಳನ್ನು ದಾಟಬೇಕು; ಲಿಫ್ಟು ಕಂಡಲ್ಲಿಳಿದರೆ ಎಲ್ಲೆಲ್ಲಿಗೋ ತಲಪುತ್ತೀರಿ – ಎಚ್ಚರಿಕೆ. ಇದು ಮಯನ ಮಾಯಾಲೋಕ. ಲಿಫ್ಟು ತನ್ನಷ್ಟಕ್ಕೆ ತೆರೆಯುತ್ತದೆ; ಮುಚ್ಚುತ್ತದೆ. ಒಂದೈದು ನಿಮಿಷ ನೋಡುತ್ತಲೇ ನಿಲ್ಲಬೇಕು. ಅಷ್ಟರಲ್ಲಿ ಅದರೊಳಗೆ ಜನ ತುಂಬಿ ನೀವು ಕೆಳಗೆ ಲಿಫ್ಟು ಮೇಲೆ. ಹೋಟೆಲಿನ ಸ್ವಾಗತ ಕಚೇರಿಯ ಮಂದಿ ನಗುವುದನ್ನು ಅವರವರ ಪ್ರಿಯತಮೆಯರಿಗಾಗಿ ಮಾತ್ರ ಕಾದಿಟ್ಟಹಾಗಿತ್ತು; ಕೇಳಿದ್ದಕ್ಕೆ ಶಾಬ್ದಿಕ ಉತ್ತರ. ಗುಟುರು, ಹೂಂಕಾರ.

ಎಲ್ಲಿಗೆ ಹೋದರೂ ನನಗೆ ಮೋಜೆಂದರೆ ಊಟದ ಪೇಚಾಟ. ಇದಂತೂ ವಿಶ್ವ ಆಹಾರ ಸಮ್ಮೇಳನ! ಕ್ಯಾಸ್ಟ್ರೋ ಎರಡು ಮೂರು ಬಾರಿ ಅಮೆರಿಕ ಕಂಡವನಾದ್ದರಿಂದ ನಾನು ಎರಡು ದಿನ ಊಟದ ಮಾಹಿತಿಗಾಗಿ ಅವನ ಹಿಂಬಾಲಕನಾದೆ. ಮೊದಲ ದಿನ ಹೋಟೆಲಿನ ಭೋಜನಶಾಲೆಗೆ ನುಗ್ಗಿದೆವು. ಸಂಜೆ ಗಂಟೆ ಆರಾಗಿರಬಹುದು, ಅಷ್ಟರಲ್ಲಿ ಇಡೀ ಹಾಲು ತುಂಬಿ ತುಳುಕುತ್ತಿತ್ತು – ನಮ್ಮಲ್ಲಿನಂತೆ ಕಾಫಿ ತಿಂಡಿಗಲ್ಲ, ಊಟಕ್ಕೆ. ಅಮೇರಿಕದಲ್ಲಿ ರಾತ್ರಿ ಊಟ – ಡಿನ್ನರ್ – ಭರ್ಜರಿ ಆಗತಕ್ಕದ್ದು. ಮಧ್ಯಾಹ್ನದ ಊಟ ಹಸಿ ಲಂಚ್ – ಏನೇನೊ ಸ್ಯಾಂಡ್‌ವಿಚ್, ಬೀರು. ಅದು ಕೆಲಸ ಮಾಡಲು ವಿಘ್ನವಾಗಬಾರದು. ಈ ವಿಷಯದಲ್ಲಿ ಇಟಾಲಿಯಾ ಮತ್ತು ಇಂಡಿಯಾ ಒಂದು ಪಾರ್ಟಿ – ಅಮೆರಿಕ ಇನ್ನೊಂದೇ ಪಾರ್ಟಿ. ನಮ್ಮಲ್ಲಿ ಊಟ ಮತ್ತು ಅದರ ಮೇಲೆ ನಿದ್ದೆಯ ಉಪ್ಪಿನ ಕಾಯಿ ಬಿದ್ದರೇನೆ ರುಚಿ, ಅಮೆರಿಕದಲ್ಲಿ ಹಗಲು ಲಘು ಊಟ, ನಡುನಿದ್ದೆ ವರ್ಜ್ಯ. ರಾತ್ರಿ ಮನೆಯಲ್ಲಿ ಅಡಿಗೆ ಮಾಡದ ದಿವಸಗಳೇ ಬಹಳ: ಗಂಡ-ಹೆಂಡತಿ; ನಲ್ಲ-ನಲ್ಲೆ, ಗೆಳೆಯ - ಗೆಳತಿ, ಅತಿಥಿ-ಆತಿಥೇಯ ಜತೆಜತೆಯಾಗಿ ಹೋಟಲನ್ನು ಪ್ರವೇಶ ಮಾಡುತ್ತಾರೆ, ಗಂಟೆಕಟ್ಟಲೆ ಉಣ್ಣುತ್ತಾರೆ, ಮಾತಾಡುತ್ತಾರೆ. ಕುಡಿಯುತ್ತಾರೆ. ಮಾತು ಹೆಚ್ಚೋ, ಊಟ ಹೆಚ್ಚೋ ತಿಳಿಯದು. ಹೋಟಲು ಮನೆಯ ಹೊರಗಿನ ಮನೆ – 'ಹೋಮ್ ಎವೇ ಫ್ರೊಮ್ ಹೋಮ್' ಎಂಬ ಜಾಹೀರಾತು ಇಲ್ಲಿ ಸತ್ಯವೇದ. ನಮ್ಮ ಭಾರತೀಯರೂ ಅಮೇರಿಕಕ್ಕೆ ಹೋಗಿ ಮೂರು ತಿಂಗಳಲ್ಲಿ ಅಮೆರಿಕನರನ್ನು ಮೀರಿಸುವಷ್ಟು ಕಾರ್ಯತತ್ಪರರಾಗುತ್ತಾರೆ. ಅವರೂ ಮಧ್ಯಾಹ್ನ ಸಾದಾ ಊಟ ಮಾಡಿ ರಾತ್ರಿಹೊತ್ತೇ ಭೋಜನ ಮಾಡುತ್ತಾರೆ. ತಮ್ಮ ಕೆಲಸ ಕಾರ್ಯಗಳಲ್ಲಿ ಅಮೆರಿಕನರಿಗೂ ಹೆಚ್ಚಾಗಿ ದುಡಿಯಬಲ್ಲರು. ದುಡಿಯುವುದರಲ್ಲಿ ಗೌರವದ ಪ್ರಶ್ನೆಯನ್ನು ಮರೆಯುತ್ತಾರೆ. ಅಂಬಾಸ್ಸಡರ್‍ನಲ್ಲಿ ನಮಗೆ ಬಡಿಸಿದ ಹುಡುಗ ಆಗ್ರಾದವನು, ಹೊವಾರ್ಡ್‌ನಲ್ಲಿ ಯಂತ್ರವಿಜ್ಞಾನದ ವಿದ್ಯಾರ್ಥಿ. ಜೂನಿನಿಂದ ಸಪ್ಟಂಬರ ವರೆಗೆ ಬೇಸಗೆ ರಜದಲ್ಲಿ ಹೋಟೆಲ್ ಮಾಣಿಯಾಗಿ ದುಡಿದು ಸಂಪಾದಿಸುತ್ತಾನೆ. ಅಮೆರಿಕನ್ ಪರಿಸರದಲ್ಲಿ ಎಂಥ ಸೋಮಾರಿಯೂ ಚಿಗುರುತ್ತಾನೆ. ಇನ್ನೊಂದು ದಿನ ಇಂಟರ್ನೇಶನಲ್ ಮೊನಿಟರಿ ಫಂಡಿನ ಅಧಿಕಾರಿ ಒಬ್ಬರು ಸಿಕ್ಕಿದರು; ಅವರೂ ನನ್ನನ್ನು ಒಂದು ರೆಸ್ಟೋರೆಂಟಿಗೆ

ಕರದೊಯ್ದು ಆತಿಥ್ಯ ನಡೆಸಿದರು. ಅಲ್ಲಿ ನಾನು ಸ್ಪಗ್ಗೆಟ್ಟಿ ನಪೊಲಿತಾನಾ ಬೇಡಿ ತಿಂದೆ – ಅಷ್ಟು ಮಟ್ಟಿಗೆ ನನ್ನಲ್ಲಿ ಇತಾಲಿಯನ್ ಗುಣ–ಋಣ ಬೇರು ಬಿಟ್ಟಿತ್ತು. ವಾಷಿಂಗ್ಟನ್ – ನ್ಯೂಯಾರ್ಕ್‌ಗಳಲ್ಲಿ ತಿರುಗಾಡುವಾಗ ನನಗೆ ಅಲ್ಲಿನ ರೆಸ್ಟೋರೆಂಟ್ ಉದ್ಯಮವನ್ನು ಇತಾಲಿಯನರೇ ಗುತ್ತಿಗೆ ಹಿಡಿದಂತೆ ಭಾಸವಾಯಿತು.

ಇತಾಲಿಯನರ ಬುದ್ಧಿವಂತಿಕೆಯನ್ನು ನಾನು ಬಹಳ ಮೆಚ್ಚಿದ್ದು ಅವರು ತಯಾರಿಸುವ ಅಮೇರಿಕನ್ ಪಿಜ್ಜಾದಲ್ಲಿ. ಪಿಜ್ಜಾ ಅಂದರೆ ಒಂದು ಬಗೆಯ ಚಪಾತಿ – ಮಾಂಸಾಹಾರಿಗಳು ಅದರ ಮೇಲೆ ಮಾಂಸದ ಸಾಂಬಾರು ಹಾಕಿ ಇತಾಲಿಯದಲ್ಲಿ ತಿನ್ನುವುದನ್ನು ನೋಡಿದ್ದೆ. ಬರೇ ಪಿಜ್ಜಾ ಮಾತ್ರವೇ ತಯಾರಿಸಿ ತಿನಬಡಿಸುವ ರೆಸ್ಟುರಾಗಳು ಇತಾಲಿಯದಲ್ಲಿ ತುಂಬಾ ಇವೆ. ಇದಕ್ಕೆ ಪಿಜ್ಜೇರಿಯಾ ಎಂದು ನಾಮಧೇಯ. ಇತಾಲಿಯದ ಪಿಜ್ಜಾದ ಗಾತ್ರ ಆರೇಳು ಇಂಚು ಇರಬಹುದು. ಆದರೆ ನಾನು ಅಮೆರಿಕದಲ್ಲಿ ತಿಂದ ಪಿಜ್ಜಾ ಒಂದು ಇಡಿ ಪರಾತವನ್ನೆ ಆವರಿಸಿತ್ತು – ಕಮ್ಮಿ ಎಂದರೆ 15 ಇಂಚು ವ್ಯಾಸವುಳ್ಳದ್ದು – ಒಂದು ಇಡಿ ತಿಂದರೆ ಅಜೀರ್ಣವಾಗಬೇಕು ಅಷ್ಟು ಅದರ ಗಾತ್ರ. ಡಾಲರಿನ ಮೌಲ್ಯಕ್ಕೆ ಅನುಗುಣವಾಗಿ ಪಿಜ್ಜಾದ ಗಾತ್ರ ಹಿಗ್ಗಿಸಿ ಎರಡು ಡಾಲರು ಒಂದೇ ಒಂದು ಪಿಜ್ಜಾದಲ್ಲಿ ಸಂಪಾದನೆ ಮಾಡಬಹುದು.

ಹೋಟೆಲಿನ ಭೋಜನಶಾಲೆಯ (Dining Hall) ಬದಲು ಮುಂಭಾಗದ ರೆಸ್ಟುರಾ ವಿಭಾಗದಲ್ಲಿ ತಿಂದರೆ – ಉಂಡರೆ – ದರ ಕಡಿಮೆ ಎಂದು ಮರುದಿನ ಕ್ಯಾಸ್ಟ್ರೊ ನನಗೆ ಮಿತವ್ಯಯ ಕಲಿಸಿಕೊಟ್ಟ. ಆ ಮೇಲೆ ನನ್ನ ಊಟ ತಿಂದಿ ಎಲ್ಲ ರೆಸ್ಟುರಾದಲ್ಲಿ ಮುಗಿಸುತ್ತಿದ್ದೆ. ಒಂದು ಡಾಲರಿಗೆ ನನ್ನ ಊಟ ಮುಗಿಯುತ್ತಿತ್ತು. ಬ್ರೆಡ್-ಬೆಣ್ಣೆ. ಒಂದು ಫ್ರುಟ್‌ಬೌಲ್, ಮಜ್ಜಿಗೆ ಅಥವಾ ಕಾಫಿ. ಇಷ್ಟು ತಿಂದರೆ ಇಡೀ ದಿನ ಅಲೆದಾಡುವಷ್ಟು ಪೋಷಕಾಂಶ ದೊರೆಯುತ್ತಿತ್ತು. ಅಮೆರಿಕದ ಕಾಫಿ ಮತ್ತು ಮಜ್ಜಿಗೆಯ ರುಚಿ ಅವಿಸ್ಮರಣೀಯ. ಪರ್ಕೊಲೇಟರ್ ಕಾಫಿಗೆ ತಾಜಾ ಹಸುವಿನ ಹಾಲು ಬೆರಸಿದಾಗ ಉಂಟಾಗುವ ದಪ್ಪನಾದ ಕಾಫಿಯಿಂದಲೆ ಕೆಲದಿನ ಹೊಟ್ಟೆ ತುಂಬಿಸಿಕೊಳ್ಳುತ್ತಿದ್ದೆ. ಮಜ್ಜಿಗೆಯೋ ಉಪ್ಪನ್ನು ಹಿತಮಿತವಾಗಿ ಸೇರಿಸಿಕೊಂಡು ನಾಲಗೆಗೆ ಒಯಿನಾಗಿರುತ್ತಿತ್ತು. ನಾನಂತೂ ಮಜ್ಜಿಗೆ

ಭಟ್ಟರ ಸಂಪ್ರದಾಯಕ್ಕೆ ಸೇರಿದವನು; ಮಜ್ಜಿಗೆ ಸಿಕ್ಕಿದರೆ ಸ್ವರ್ಗಕ್ಕೆ ಮೂರೇ ಗೇಣು ಎಂಬವನು.

ಅಮೆರಿಕದಲ್ಲಿ ಟಿಪ್ಪಿನ (Tip) ಕಾಯಿಲೆ ಬಹಳ ಎಂದು ಕೇಳಿದ್ದೆ. ನ್ಯೂಯಾರ್ಕ್ ವಿಮಾನ ನಿಲ್ದಾಣದಲ್ಲಿ ಎರಡು ಬ್ಯಾಗ್ 300 ಗಜ ಹೊತ್ತ ಕರಿಯಣ್ಣನಿಗೆ ಒಂದು ಡಾಲರು ಕೂಲಿ + 25 ಸೆಂಟ್ಸ್ ಟಿಪ್ (ಭಕ್ಷೀಸು) ಕೊಡುವಾಗ ನನ್ನ ಕಣ್ಣು ನೆತ್ತಿಗೇರಿತ್ತು. ನನ್ನ 180 ಡಾಲರು ಮಿತ ಬಂಡ ವಾಳವನ್ನು ಈ ಟಿಪ್ಪುಗಳೇ ಕರಗಿಸುವ ಲಕ್ಷಣ ತೋರಿತು. ಆದದ್ದರಿಂದ ಟಿಪ್ಪಿನಿಂದ ತಪ್ಪಿಸಿಕೊಳ್ಳುವ ಸಕಲ ಉಪಾಯಗಳನ್ನು ಹೂಡಬೇಕಾ ಯಿತು; ರೆಸ್ತುರಾದಲ್ಲಿ ಮೇಜಲ್ಲಿ ಕೂತು ವೇಟರನಿಂದ ಬಡಿಸಿಕೊಂಡರೆ 10% ಟಿಪ್ಪು ಕಕ್ಕಬೇಕಾಗುತ್ತದೆಂದು ಕೌಂಟರಿನ ಮುಂದುಗಡೆ ಕೂತೇ ಕಬಳಿಸತೊಡಗಿದೆ. ಪ್ರತಿ ಊಟದಲ್ಲಿ 10 ಸೆಂಟು ಲಾಭ – ಇಂಥ ಲೆಕ್ಕಾ ಚಾರ ಜನ್ಮಾರಭ್ಯ ಮಾಡಿದವನಲ್ಲವಾದರೂ ನನ್ನ ಅಮೂಲ್ಯ ಡಾಲರು ನಿಧಿಯನ್ನು ಘಟಸರ್ಪದಂತೆ 15 ದಿನ ಕಾಯದಿದ್ದರೆ ಎಲ್ಲ ಇಂಡಿಯನ ರಂತೆ ಸಿಕ್ಕಸಿಕ್ಕವರನ್ನು ಬೇಡುವ ಪರಿಸ್ಥಿತಿ ಒದಗುತ್ತಿತ್ತು. (2) ವಾಷಿಂಗ್ಟನಿನ ಹೆಚ್ಚಿನ ಭಾಗ ನಡೆದೇ ನೋಡಿದೆ. ಟ್ಯಾಕ್ಸಿಯ ಅಸ್ತಿತ್ವವನ್ನು ಮರೆತೇ ಬಿಟ್ಟೆ. ಆ ದೈತ್ಯಗಾತ್ರದ ಟ್ಯಾಕ್ಸಿಗಳೋ ಅವುಗಳ ಚಾಲಕ ಮಹನೀಯ ರಾದ ಕಾಳಾಮುಖರೋ, ನೋಡಿದರೇ, ಭಯ. ಹದಿನೆಂಟು ಇಪ್ಪತ್ತಡಿ ಉದ್ದದ ಆ ಹಡಗುಗಳಲ್ಲಿ ಕೂತಾಗ ನೀವು ಮನೆ ಮೂಲೆಯ ಕಸಬರಿಗೆಯ ಹಾಗೆ ಕಾಣಬಹುದೇನೋ.

ಮನುಷ್ಯರೇ ಇಲ್ಲದ ಸೇವಾ ಯಂತ್ರಗಳನ್ನು ನಾನು ಮೊದಲ ಬಾರಿಗೆ ನೋಡಿದ್ದು ಇಲ್ಲೇ. ವಿಶ್ವ ಆಹಾರ ಸಮ್ಮೇಳನದ ಬಹಿರಂಗ ಅಧಿ ವೇಶನದ ಭವನದ ಹೊರಗಡೆ ರೆಸ್ಟೋರೆಂಟ್ ಎಂದು ಒಂದು ಫಲಕ ತೂಗಿಸಿದ್ದರು – ಬಾಣದ ದಿಕ್ಕಿನಲ್ಲಿ ಪಾವಟಿಗೆ ಇಳಿದು ಕೆಳಗಿನ ಅಂತಸ್ತಿಗೆ ಹೋದರೆ ಎಲ್ಲೂ ಕಾಫಿಯ ಮನುಷ್ಯರು ಕಾಣೆಸರು. ಹಿಂದಿರುಗುವಾಗ ನಾಲ್ಕಾರು ಯಂತ್ರಗಳು ಬಿಕೋ ಅನ್ನುತ್ತಿದ್ದುವು. ಅವುಗಳ ಮೂತಿಯ ಕೆಳಗಡೆ ಪ್ಲಾಸ್ಟಿಕ್ ಪಾತ್ರೆ ಜೋಡಿಸಿ ಇಟ್ಟಿದ್ದರು. ಹತ್ತು ಸೆಂಟು ಇಳಿಸಿದರೆ ಜುರ್ರೆಂದು ಕಾಫಿ ಆ ಪಾತ್ರೆಗೆ ಬಿದ್ದೇಬಿಟ್ಟಿತು. ಆದರೆ ಆ ಕಾಫಿಗೆ ನಾನೊ

ಪ್ಪನೇ ಅಂದಿನ ಗಿರಾಕಿ. ಪ್ರಾಯಶಃ ಇದೇ ರೀತಿ ಬೇರು ಯಂತ್ರಗಳ ಜಾಡು ಹಿಡಿದು ಉಳಿದ ಆಹಾರ ತಜ್ಞರು ತೆರಳಿದ್ದಾರು.

ಕೋಕಕೋಲ ಮೊದಲು ನಾನು ಕುಡಿದದ್ದು ಅಮೆರಿಕದಲ್ಲಿ. ಆಮೇಲೆ ನೀರು ಕುಡಿಯುವುದನ್ನೇಬಿಟ್ಟೆ. ಹೋದಲ್ಲೆಲ್ಲ ಸುಲಭದಲ್ಲಿ ದೊರೆವ ತಂಪು ಪಾನೀಯ. ಅದರ ಗೀಳೇ ನನಗೆ ಹಿಡಿದುಬಿಟ್ಟಿತು.

ತಿಂಡಿ ತೀರ್ಥಕ್ಕೆ ಅಮೇರಿಕದಷ್ಟು ಸಮೃದ್ಧ ದೇಶ ಬೇರೆ ಇರಲಾರದು. ವಾಷಿಂಗ್ಟನ್ನಿನಿಂದ ಡ್ಯೂರ್ಹಾಮಿಗೆ ತೆರಳುವ ಹಗಲು ದಾರಿಯಲ್ಲಿ 280 ಮೈಲುದ್ದಕ್ಕೂ ಹರಡಿದ ಸಸ್ಯಸಂಪತ್ತನ್ನೂ ಜನವಿರಳತ್ವವನ್ನೂ ನೋಡಿದ ನನಗೆ ಬೇರೊಂದೇ ಲೋಕವನ್ನು ಪ್ರವೇಶ ಮಾಡಿದ ಹಾಗಾಗಿತ್ತು. ಬಂಕಿಂಚಂದ್ರರು 'ಸುಜಲಾಂ, ಸುಫಲಾಂ, ಶಸ್ಯ ಶ್ಯಾಮಲಾಂ' ಎಂದದ್ದು ಈ ನಾಡಿಗೆ ಅನ್ವಯವಾಗುತ್ತದೆಂದು ಅನಿಸಿತು. ನದೀನದಕಾನನ, ಮೃಗ ಸಸ್ಯ, ಗೋಸಂಪತ್ತು, ಭೂಸಂಪತ್ತು, ಖನಿಜಸಂಪತ್ತು, ತೈಲಸಂಪತ್ತು, ಚಿನ್ನ ಬೆಳ್ಳಿ–ನಿಸರ್ಗ ಅಮೆರಿಕದ ಮೇಲೆ ಭಾರೀ ಪಕ್ಷಪಾತ ಮಾಡಿದೆ. ಶಾಂತಿಗೂ ಸಮರಕ್ಕೂ ಬೇಕಾದ ಎಲ್ಲಾ 'ಮೂಲ ಸಾಮಗ್ರಿಯನ್ನು ಈ ವಿಶಾಲ ದೇಶದಲ್ಲಿ ಅಕ್ಷಯವಾಗುವಷ್ಟು ತುಂಬಿಸಿಟ್ಟಿದೆ. ನಿಸರ್ಗದ ವರ ಗಳನ್ನು ಸಂಘಟಿಸಿ ಮನುಷ್ಯಜೀವನವನ್ನು ಬೆಳೆಸುವ ಅಖಂಡ ಬುದ್ಧಿ ಸಂಪತ್ತನ್ನೂ ಜತೆಗೆ ದಯಪಾಲಿಸಿದೆ. ಪ್ರಕೃತಿಯ ದಯೆ ಮತ್ತು ಮನುಷ್ಯ ಪ್ರಕೃತಿಯ ಉದ್ಯಮಶೀಲತೆ–ಇಂದು ಅಮೆರಿಕವನ್ನು ವಿಶ್ವದ ರಾಜ ಕೀಯ ಮತ್ತು ಆರ್ಥಿಕ ಮಂಡಲದ ಮುಂಚೂಣಿಯಲ್ಲಿ ನಿಲ್ಲಿಸಿವೆ ಎಂದರೆ ಅತಿಶಯೋಕ್ತಿಯಲ್ಲ.

## ○ ○ ಎರಡು ಅಧ್ಯಕ್ಷರಿಗೆ ಮುಂದುಗಡೆ

ಜಗತ್ತಿಗೆಲ್ಲ ಆಹಾರ ಸರಪರಾಜು ಮಾಡುವ ನೈಸರ್ಗಿಕ ವೈಪುಲ್ಯವನ್ನು ಪಡೆದ ಅಮೆರಿಕದ ಸಂಯುಕ್ತರಾಷ್ಟ್ರ 1963ರಲ್ಲಿ–ಅಧ್ಯಕ್ಷ ಕೆನಡಿಯವರ ಉತ್ಸಾಹ ಯುಗದಲ್ಲಿ ಜಾಗತಿಕ ಆಹಾರ ಸಮ್ಮೇಳನ (World Food Congress) ಒಂದನ್ನು ಜೂನ್ 4ರಿಂದ 18ರ ವರೆಗೆ ವಾಷಿಂಗ್ಟನ್ನಿನಲ್ಲಿ ನೆರವಿಸಿತು. ವಿಶ್ವದ ನೂರಾರು ರಾಷ್ಟ್ರಗಳಿಂದ ಒಟ್ಟು 1200 ಪ್ರತಿನಿಧಿ

ಗಳು ಭಾಗವಹಿಸಿದ ಈ ಸಮ್ಮೇಳನದಲ್ಲಿ ಹಾಜರಿ ಹಾಕುವ ಸೌಭಾಗ್ಯವನ್ನು ನನಗೆ ಇತಾಲಿಯ ಸರ್ಕಾರ ಒದಗಿಸಿದ್ದನ್ನು ಮೊದಲೇ ಸೂಚಿಸಿದ್ದೇನೆ. ಆದರೆ ಮೂರನೇ ತಾರೀಕು ಮುಂಜಾನೆ ಅಮೇರಿಕದ ಬೃಹದ್ರಾಷ್ಟ್ರದ ಸ್ಟೇಟ್ ಡಿಪಾರ್ಟ್‌ಮೆಂಟಿನ ಸ್ವಾಗತ ಕಚೇರಿಯಲ್ಲಿ ವಿಚಾರಿಸಿದರೆ ನನ್ನ ಹೆಸರು ಇಂಡಿಯನ್ ಪ್ರತಿನಿಧಿಗಳ ಜತೆಗೆ ಬಿದ್ದಿತ್ತು; ಅವರಿಗೆ ನಾನು ಯಾರೆಂದು ಗೊತ್ತಿಲ್ಲ; ಇತಾಲಿಯನ್ ಪ್ರತಿನಿಧಿಗಳಿಗೂ ಗೊತ್ತಿಲ್ಲ. ನಾನು ಇತಾಲಿಯನ್ ಪ್ರತಿನಿಧಿಗಳನ್ನು ಹುಡುಕಾಡಿದರೂ ಅವರು ಸಿಗಲಿಲ್ಲ. ಇಂಡಿಯದ ಪ್ರತಿನಿಧಿಗಳು ನನ್ನನ್ನು ಗುರುತಿಸುವುದು ಶಕ್ಯವೇ ಇರಲಿಲ್ಲ. ಚಿಂತಾಮಣಿ ದೇಶಮುಖ್ ಮತ್ತು ಶ್ರೀಮತಿಯವರು, ರಾಮನಾಥ್ ಗೋಯೆಂಕಾ, ಸ. ಕಾ. ಪಾಟೀಲ, ಭಕ್ತವತ್ಸಲಂ – ಇವರಿಗೆ ನಾನೊಬ್ಬ ಶ್ರೀಸಾಮಾನ್ಯ. ಆದರೆ ನಾನು ಗೋಯೆಂಕಾರನ್ನು ಬಾಯಿ ಬಿಡಿಸಿದೆ. ಭಕ್ತ ವತ್ಸಲರ ಕೈಕುಲುಕಿದೆ, ದೇಶಮುಖ ದಂಪತಿ ಜತೆ ಒಂದೇ ಬಸ್ಸಿನಲ್ಲಿ ಹೋಟೆಲ್ ತನಕ ಪಯಣಿಸಿದೆ; ಅದರಂತೆ ವಿಶ್ವದ ಘಟಾನುಘಟಿ ಆಹಾರ ತಜ್ಞರ ಹೆಗಲಿಗೆಣೆಯಾಗಿ ನಿಂತೆ (ಅಕ್ಷರಶಃ) ಎನ್ನಬಹುದು. ಕಾಕ್‌ಟೇಲ್ ಸಂದರ್ಭದಲ್ಲಿ 1200 ಪ್ರತಿನಿಧಿಗಳ ಜನಜಂಗುಳಿಯ ನಡುವೆ ನುಗ್ಗಿ ಹೆಸರು, ವಿಳಾಸ ಕೇಳಿ ಹೇಳಿ ನಿರ್ದಾಕ್ಷಿಣ್ಯವಾಗಿ ಮೊಸಂಬಿ ರಸ ಹಸ್ತನಾಗಿ ಅಲೆದಾಡುತ್ತಿದ್ದ ನನ್ನ ಲವಲವಿಕೆ ನೋಡಿ ಅಮೆರಿಕದ ಕೃಷಿ ವಿಭಾಗದ ಉಚ್ಚ ಅಧಿಕಾರಿ ನನಗೆ ಗಂಟುಬಿದ್ದ; ನನ್ನ ಜತೆ ಊಟಕ್ಕೆ ಬರಬೇಕು, ವಾಶಿಂಗ್ಟನ್ ಬೈ ನೈಟ್ ತೋರಿಸುತ್ತೇನೆ ಎಂದ. ಸರಿ. ಎಂಟರಿಂದ ಹನ್ನೊಂದರ ವರೆಗೆ ಅವನ ಮತ್ತು ಅವನ ಹೆಂಡತಿಯ ಜತೆ ಸಲ್ಲಪಿಸುತ್ತ ಅಂದಿನ ನನ್ನ ಆಹಾರ ಸಮಸ್ಯೆಯನ್ನು ಪರಿಹರಿಸಿಕೊಂಡು ಒಂದು ಡಾಲರ್ ಉಳಿಸಿಕೊಂಡೆ. ಅರ್ಧ ತಾಸು ಅಮೆರಿಕದ ಬೀದಿಯನ್ನೆಲ್ಲ ಸುತ್ತಾಡಿಸಿ ಆತ ಮರಳಿ ನನ್ನನ್ನು ಅಂಬಾಸ್ಸಡರ್ಸ್ ಬಾಗಿಲು ಮುಟ್ಟಿಸಿದ. ಕಾಕ್‌ಟೇಲ ನಡೆದ ವಿಶಾಲ ಭವನದ ಬಾಗಿಲಲ್ಲಿ ಅಮೆರಿಕದ ಕೃಷಿಸಚಿವ ಆರ್ವಿಲ್ ಫ್ರೀಮನ್ ಅಂದು ಸಾವಿರಾರು ಬಾರಿ ಹಸ್ತಲಾಘವ ಮಾಡಿರಬೇಕು. ಅವರ ಮೇಲೆ ಕನಿಕರದಿಂದ ಆ ದಾರಿ ತಪ್ಪಿಸಿ ಬೇರೆ ಲಿಫ್ಟ್ ಹುಡುಕಿದೆ.

ಜೂನ್, 4 – ಮುಂಜಾನೆ ಹತ್ತು ಗಂಟೆಗೆ ಅಧ್ಯಕ್ಷ ಕೆನಡಿ ಮತ್ತು ನನ್ನ ಅಧ್ಯಕ್ಷ ರಾಧಾಕೃಷ್ಣನ್ ಉಭಯರಿಂದಲೂ ಸಮ್ಮೇಳನದ ಉದ್ಘಾ

ಟನೆ. ಸ್ಟೇಟ್ ಡಿಪಾರ್ಟ್‌ಮೆಂಟಿನ ವಿಶಾಲವಾದ ರಂಗಮಂಟಪದಲ್ಲಿ ಟೆಲಿವಿಷನ್ ಮತ್ತು ಪ್ರೆಸ್ ಕೆಮರಾಗಳ ಮಿಂಚುಬೆಳಕಿನ ನಡುವೆ ಸಮ್ಮೇಳನದ ಔಪಚಾರಿಕ ಉದ್ಘಾಟನೆ ವಿಜೃಂಭಣೆಯಿಂದ ನಡೆಯಿತು. ಆಯಾ ರಾಷ್ಟ್ರೀಯ ಪೋಷಾಕಿನಿಂದ ಮೆರೆಯುವ ಪ್ರತಿನಿಧಿಗಳು ಸಭೆಗೆ ವರ್ಣರಂಜನೆಯನ್ನೂ, ಮನರಂಜನೆಯನ್ನೂ ಒದಗಿಸಿದರು. ಮೊದಲು ಅಧ್ಯಕ್ಷ ಕೆನೆಡಿ ಹತ್ತು ಮಿನಿಟು ಸಮ್ಮೇಳನಕ್ಕೆ ಶುಭ ಹಾರಯಿಸಿದರು; ಆ ಮೇಲೆ ಭಾರತೀಯ ಅಧ್ಯಕ್ಷ ಸರ್ವಪಳ್ಳಿ ರಾಧಾಕೃಷ್ಣನ್ ತಮ್ಮ ಅಸ್ಖಲಿತ ವಾಣಿಯಲ್ಲಿ ಅಭಿವೃದ್ಧಿ ಹೊಂದಿದ ರಾಷ್ಟ್ರಗಳ ಕರ್ತವ್ಯಗಳನ್ನು ಜ್ಞಾಪಿಸಿದರು. ಇಂಥ ಸಮ್ಮೇಳನ ಭಾರತದಲ್ಲಿ ನಡೆದಿದ್ದರೆ ಮರುದಿನ ಪತ್ರಿಕೆಗಳ ಪ್ರಥಮ ಪುಟದಲ್ಲಿ ನಾಲ್ಕು ಕಲಮು ಭಾಷಣ ಅಚ್ಚಾಗುತ್ತಿತ್ತೇನೋ. ಅಮೆರಿಕದ ರೂಢಿಯೇ ಬೇರೆ. ನ್ಯೂಯಾರ್ಕ್ ಟೈಮ್ಸ್‌ನಲ್ಲಿ ಕೆನೆಡಿ ಭಾಷಣವನ್ನು ಸಂಕ್ಷೇಪಿಸಿ ಮೊದಲ ಪುಟದಲ್ಲೇನೋ ಹಾಕಿದ್ದರು. ನಮ್ಮ ಅಧ್ಯಕ್ಷರದು ಇನ್ನಷ್ಟು ಹ್ರಸ್ವಗೊಳಿಸಿ ಒಳಗಿನ ಪುಟದಲ್ಲಿ ನಾಲ್ಕಿಂಚು ಬಿತ್ತರಿಸಿದ್ದರು. ರಾಜಕೀಯ ಪುರುಷರಿಗೆ ಇಷ್ಟೇ ಸ್ಥಳ; ಸಮ್ಮೇಳನ ನಡೆಯುತ್ತಿದ್ದ ವೇಳೆ ಪ್ರತಿನಿಧಿಗಳ ಅಂಗಿ, ಪೋಷಾಕು, ಸಂಸ್ಕೃತಿ, ಅಭಿಪ್ರಾಯಗಳನ್ನು ಆಗಿಂದಾಗ ಸ್ವಾರಸ್ಯವಾಗಿ ಮಾನವೀಯ ರೀತಿಯಲ್ಲಿ ಓದುಗರಿಗೆ ರುಚಿಯಾಗುವಂತೆ ವರದಿಗಾರರು ಚಿತ್ರಿಸುತ್ತಿದ್ದರು. ಪತ್ರಿಕೆಗಳ ಮಟ್ಟಿಗೂ ಇಲ್ಲಿ ಗಿರಾಕಿಯೇ ಸಾರ್ವಭೌಮತ್ವ ವಹಿಸಿದ್ದಾನೆ; ತಲೆಚಿಟ್ಟು ಹಿಡಿಸುವ ಭಾಷಣಗಳನ್ನು ಹಾಜರಿಲ್ಲದವರಿಗೂ ಕೇಳಿಸಬೇಕೆಂಬ ಹಟ ಅಲ್ಲಿನ ಪತ್ರಿಕಾ ಮಂಡಳದವರಿಗೆ ಇದ್ದಂತೆ ಅನಿಸಲಿಲ್ಲ.

ಅದೇ ಸಂಜೆ ಕೃಷಿಸಚಿವ ಓರ್ವಿಲ್ ಫ್ರೀಮಾನ್ ಪ್ರತಿನಿಧಿಗಳಿಗೆ ಕೊಟ್ಟ ಕಾಕ್‌ಟೇಲ್‌ನ ಸಂಭ್ರಮ ಪ್ರೇಕ್ಷಣೀಯವಾಗಿತ್ತು. ಸಮಯಕ್ಕೆ ಸರಿಯಾಗಿ ನಾಲ್ಕೆಂಟು ಲಿಫ್ಟುಗಳಿಂದ 1200 ಮಂದಿಯನ್ನು ಮೇಲ್ಗಡೆಯ ಲೌಂಜಿಗೆ ಸಾಗಿಸಿದರು. ಸುಮಾರು ಎರಡು ತಾಸು ನಡೆದ ಈ ಸಾಮಾಜಿಕ ಸಮಾರಂಭದಲ್ಲಿ ನಾನು ಹೆಚ್ಚಾಗಿ ಪ್ರೇಕ್ಷಕನಾಗಿಯೇ ಇದ್ದೆ, ಒಂದೇ ಕಡೆ ನಿಂತಿರಬಾರದೆಂದು ಹಣ್ಣಿನ ರಸ ಹಿಡಿದುಕೊಂಡು ಈ ಜನಜಂಗಲಿಯ ನಡುವೆ ಅಲೆದಾಡುತ್ತಲೇ ಇದ್ದೆ. ಪೂರ್ವದೇಶದ ಅನೇಕ ಪ್ರತಿನಿಧಿಗಳನ್ನು ಮಾತನಾಡಿಸಿದೆ; ಕೆಲ ಆಫ್ರಿಕನರಿಗೂ ಹಲೋ ಹಲೋ ಎಂದೆ. ನನ್ನ ಇತಾಲಿ

ಯನ್ ಬಾಂಧವರು ಮಾತ್ರ ಏನು ಮಾಡಿದರೂ ಕಣ್ಣಿಗೆ ಬೀಳಲಿಲ್ಲ. ಮರುದಿನ ಸಮಿತಿಗಳ ಚರ್ಚಾಕೂಟ, ಪ್ರತ್ಯೇಕ ವಿಷಯದ ಕುರಿತು ನಾಲ್ಕಾರು ಕಡೆ ಚರ್ಚೆ. ತರ್ಜುಮೆಯ ಯಂತ್ರಗಳು ಕೆಲಸ ಮಾಡುವ ಈ ಚರ್ಚಾಕೂಟಗಳಲ್ಲಿ ಒಂದೆರಡು ದಿನ ಕೇವಲ ಶ್ರಾವಕನಾಗಿ ಉಪಸ್ಥಿತನಾದೆ. ಭಾರತದಿಂದ ಆಗಿನ ಆಹಾರಮಂತ್ರಿ ಎಸ್. ಕೆ. ಪಾಟೀಲ ಚರ್ವಿತ ಚರ್ವಣವಾದ ನಾಲ್ಕು ಮಾತು ನುಡಿದದ್ದನ್ನು ಕೇಳಿ, ನಾನೂ ಯಾಕೆ ವೇದಿಕೆಯ ಮೇಲೆ ಏರಿ ದಾಖಲೆ ಸ್ಥಾಪಿಸಬಾರದು ಎನಿಸಿತು. ನಮ್ಮ ರಾಜಕೀಯಸ್ಥ ಜನ ವಿಶ್ವದ ವೇದಿಕೆಯಲ್ಲಿ ಕೇವಲ ಮಿಣುಕುಹುಳಗಳು, ಅವರ ಬಂಡವಾಳಕ್ಕೆ ಅಲ್ಲಿ ಬೆಲೆಯಿಲ್ಲ. ಎರಡನೆ ದಿನ ವಿಶ್ವ ಆಹಾರ ಸಮ್ಮೇಳನದ ಪ್ರತಿನಿಧಿಗಳಿಗೆ ಆಹಾರ ಸರಪರಾಜು ಮಾಡುವ ಭೋಜನಶಾಲೆಯನ್ನು ಸಂದರ್ಶಿಸಿದಾಗ ಉಡುಪಿಯವನಾದ ನನಗೇ ದಂಗುಬಡಿಯಿತು. ಭೂಗರ್ಭದಲ್ಲಿ ರಚಿತವಾದ ಸಾವಿರಾರು ಜನಕ್ಕೆ ಕೂತುಣ್ಣಬಹುದಾದ ಸಕಲ ಪೀಠೋಪಕರಣ, ಸರಪರಾಜು ವ್ಯವಸ್ಥೆ, ವಿದ್ಯುತ್ ಚಾಲಿತ ಯಂತ್ರ, ಹಸಿ-ಬಿಸಿ ಆಹಾರ, ನೀವು ಬೇಡಿದ್ದು–ಒದಗಿಸುವ ವಿಶಾಲವಾದ ಭವನ; ಕಣ್ಣು ಹಾಯಿಸಿದಷ್ಟು ಕೊನೆ ಮುಟ್ಟದ ಹರವು. ಸ್ಟೇಟ್ ಡಿಪಾರ್ಟ್‌ಮೆಂಟಿನಲ್ಲಿ, ಇಲ್ಲಿಲ್ಲದುದುಳಿದುದೆ, ಜೇನು ಹರಿವ, ಹಾಲು ಸುರಿವ ದಿವಂ ಭೂಮಿಗಿಳಿದುದೆ? ಎಂಬ ಪ್ರಶ್ನೆ ಧಾರಾಳವಾಗಿ ಕೇಳಬಹುದು. ಅದೊಂದು ಚಕ್ರವ್ಯೂಹ. ಸುತ್ತಿದಷ್ಟು ಕಾರಿಡಾರು, ಹೊಕ್ಕಷ್ಟು ಕೊಠಡಿ, ನಿಮ್ಮ ಕಾಲು ಸೋಲಬೇಕು, ಅಮೇರಿಕ ಸೋಲುವುದಿಲ್ಲ, ಎಷ್ಟು ದೊಡ್ಡ ಸಮ್ಮೇಳನ, ಎಷ್ಟು ಚಿಕ್ಕ ಗೋಷ್ಠಿ ಬೇಕಾದರೂ ನಡೆಸಿ. ಅದಕ್ಕೆ ಯೋಗ್ಯವಾದ ಸಕಲ ಸನ್ನಾಹಗಳೂ ಇಲ್ಲಿ ಸಿದ್ಧ.

ಮಾರನೆ ದಿನ ವಾಷಿಂಗ್ಟನ್‌ನ ಪಾದಯಾತ್ರೆ ಶುರುಮಾಡಿದೆ. ಲಿಂಕನ್ ಸ್ಮಾರಕಕ್ಕೆ ಹೋಗಿ ನನ್ನ ತಾರುಣ್ಯದ 'ಹೀರೋ'ನ ದರ್ಶನ ಪಡೆದೆ. ಹತ್ತಿರ ಬಂದ ಒಬ್ಬ ಪ್ರವಾಸಿ ಕೈಯಲ್ಲಿ ನನ್ನ ಕೆಮರಾದೊಳಗೆ ಒಂದು ಫೋಟೋ ಹಾಕಿಸಿಕೊಂಡೆ–ಸಾಕ್ಷೀಭೂತವಾಗಿ. ಸಂಜೆಯಾಗುತ್ತಲೇ ಗೂಡು ಸೇರಿ ಬಿಡುತ್ತಿದ್ದೆ. ರೆಸ್ಟೋರಾದಲ್ಲಿ ಊಟ ಮುಗಿಸಿ ಕೋಣೆಯಲ್ಲಿ ಟೆಲಿವಿಷನ್ ನೋಡುತ್ತಾ ನಿದ್ದೆಹೋಗುವುದನ್ನು ರೂಢಿಸಿಕೊಂಡೆ. ಒಂದು ರಾತ್ರಿ ಮಿನ್ನೆಸೋಟದಿಂದ ನನ್ನ ಹಿಂದಿನ ಒಬ್ಬ ಸಹೋದ್ಯೋಗಿ ಫೋನ್ ಮಾಡಿ

ದರು. ಇದು ಅನಿರೀಕ್ಷಿತವಾದ ಒಂದು ಆಮಂತ್ರಣ. 'ಭಟ್ಟರೇ, ಬನ್ನಿ. ಸ್ವರ್ಗದ ರಜೆ. ಒಂದು ತಿಂಗಳು ಅಮೆರಿಕಾ ಸುತ್ತಾಡುವಾ' ಸುತ್ತುವುದಕ್ಕೆ ಎಂದೂ ಹಿಂಜರಿಯದ ನಾನು ಇತಾಲಿಯದ ಪ್ರವಾಸದಿಂದಾಗಿ ಅಮೆರಿಕಾ ಭ್ರಮಣಕ್ಕೆ ಒಪ್ಪಲಿಲ್ಲ. ಶೆಣೈ ಅವರಿಗೆ ನಿರಾಶೆ ಆಯಿತು. ಆದರೆ ನನ್ನ ನೂರು ಡಾಲರಿನಲ್ಲಿ ಅರ್ಧಾಂಶ ಮಿನ್ನೆಸೋಟ ಮುಟ್ಟುವುದಕ್ಕೇ ಬರಿದಾದರೆ ಮತ್ತೆ ನಾಚಿಕೆ ಬಿಟ್ಟು ಅವರ ಹತ್ತಿರವೇ ಸಾಲವೆತ್ತಬೇಕಲ್ಲಾ ಎಂಬ ಅಳುಕಿನಿಂದ 'ಬರುವುದಿಲ್ಲ' ಅಂದುಬಿಟ್ಟೆ. ಶೆಣೈ ಅವರು ಮಿನ್ನೆಸೋಟದಲ್ಲಿ ಇಲೆಕ್ಟ್ರಾನಿಕ್ಸ್ ಇಂಜನಿಯರಿಂಗಿನ ಪ್ರಾಧ್ಯಾಪಕರು. ಈಗಲೂ ಊರಿಗೆ ಬಂದರೆ ಆಮಂತ್ರಣ ಕೊಟ್ಟು ಹೋಗುತ್ತಾರೆ.

## ○ ○ ಒಂದು ವಿವಿನಿಲಯ

ಜೂನಿನಿಂದ ಸೆಪ್ಟಂಬರ್ ತನಕ ಅಮೆರಿಕದ ಎಲ್ಲ ಶಿಕ್ಷಣಾಲಯಗಳಿಗೂ ಬೇಸಗೆ ರಜೆ. ನನ್ನ ಭಾವಮೈದುನನೊಬ್ಬ (ಡಾ. ಕೆ. ವಿ. ರಾಜಗೋಪಾಲ್) ಡ್ಯೂರ್ಹಾಮಿನಲ್ಲಿ ಜೀವರಸಾಯನಶಾಸ್ತ್ರದ ಸಂಶೋಧಕನಾಗಿದ್ದ. ಅವನನ್ನು ನೋಡುವ ನೆಪದಲ್ಲಿ ಒಂದು ವಿಶ್ವವಿದ್ಯಾನಿಲಯದ ಕ್ಯಾಂಪಸಿನಲ್ಲಿ ಒಂದು ವಾರ ಕಳೆದೆ. ಅಲ್ಲಿನ ಗ್ರಂಥ ಭಾಂಡಾರ, ಶಾಪಿಂಗ್ ಸೆಂಟರ್, ನನ್ನ ಭಾವನಂಟನ ಸ್ನೇಹಿತರ ಮನೆಗಳಲ್ಲಿ ರಾತ್ರಿ ಭೋಜನ, ಒಂದು ಭಾನುವಾರ 200 ಮೈಲು ದೂರದ ಅಟಲಾಂಟಿಕ ತೀರದ ಒಂದು ಬೀಚಿಗೆ ಪ್ರವಾಸ–ಇಷ್ಟೇ ನನ್ನ ಸಾಧನೆ. ಒಂದು ಸಿಗರೇಟ್ ತಯಾರಿ ಕಾರ್ಖಾನೆಯನ್ನೂ ಈ ನಡುವೆ ನೋಡಿದೆ; ಒಳಗೆ ಹೋಗುವಾಗಲೇ ಎರಡು ಸಿಗರೇಟ್ ಸೇದಲು ಕೊಡುತ್ತಾರೆ; ಹೊರಗೆ ಬರುವಾಗ ಎರಡು ಪ್ಯಾಕೇಟ್ ಕೊಡುತ್ತಾರೆ. ಇದೊಂದು ಉಪಚಾರದ ವೈಖರಿ. ನಾನೂ ಸಿಗರೇಟು ಹಸ್ತನಾಗಿ ಆ ಕಾರ್ಖಾನೆಯಿಂದ ಹೊರಬಿದ್ದೆ. ಅಮೆರಿಕದ ಬೇಸಗೆಯ ಹವಾಮಾನ ನಮ್ಮೂರಿಗಿಂತ ಏನೂ ಕಡಮೆಯಾಗಿರುವುದಿಲ್ಲ. ಬೇಸಗೆ ಬಂತೋ ಚಳಿ ಬಟ್ಟೆಗಳಿಗೆ ರಜಾ; ಹೆಣ್ಣು ಗಂಡು ಇಬ್ಬರೂ ಗಿಡ್ಡ ಗಿಡ್ಡ ಚಣ್ಣ ತೊಟ್ಟೇ ಅಲೆದಾಡುತ್ತಾರೆ. ಪ್ರಾಯಃ ಪೂರ್ತಿ ಇಜಾರು

ತೊಟ್ಟವರು ಅಂದರೆ ನಾನು, ನನ್ನ ಭಾವ ಇಬ್ಬರೇ ಎಂದು ನನಗೆ ಅಲ್ಲಿನ ಬೀದಿಯಲ್ಲಿ ಅನಿಸಿತು.

ಡ್ಯೂರ್ಹಾಮಿನ ಡ್ಯೂಕ್ ವಿಶ್ವವಿದ್ಯಾನಿಲಯ ಒಂದು ಖಾಸಗೀ ಸಂಸ್ಥೆ. ಅದು ಸಂಶೋಧನೆ ಮತ್ತು ಅಧ್ಯಯನಕ್ಕೆ ಹೆಸರಾಂತ ವಿದ್ಯಾ ಮಂದಿರ. 'ಡ್ಯೂಕ್'ನಲ್ಲಿ ಸಾವಿರಗಟ್ಟಲೆ ವಿದ್ಯಾರ್ಥಿಗಳಿದ್ದಾರೆ; ನೂರಾರು ಪ್ರಾಧ್ಯಾಪಕರಿದ್ದಾರೆ. ಡ್ಯೂರ್ಹಾಮಿನ ಆರ್ಥಿಕ ಅಭಿವೃದ್ಧಿಗೆ ಈ ವಿಶ್ವ ವಿದ್ಯಾನಿಲಯದ ಜನಸಮುದಾಯವೂ ಒಂದು ಮುಖ್ಯ ಕಾರಣ. 'ಡ್ಯೂಕ್' ಎಂಬ ಶಬ್ದಕ್ಕೆ ಅಲ್ಲಿನ ಅಂಗಡಿಗಳಲ್ಲಿ ಒಂದು ಮಾಂತ್ರಿಕಶಕ್ತಿಯುಂಟು. ನಿಮಗೆ ಡ್ಯೂಕ್‌ನಲ್ಲಿ ಕೆಲಸ ಸಿಕ್ಕಿತೋ, ಯಾವ ಪದಾರ್ಥವೂ ದುಡ್ಡಿಲ್ಲದೇನೆ (ಅಂದರೆ ಸಾಲರೂಪದಲ್ಲಿ) ದೊರೆಯುತ್ತದೆ. ಅದು ಡ್ಯೂಕಿನ ಕ್ರೆಡಿಟ್. ಉನ್ನತ ಶಿಕ್ಷಣ ಪ್ರಸಾರದಲ್ಲಿ ಅಮೆರಿಕಕ್ಕೆ ಅಗ್ರ ಸ್ಥಾನವಷ್ಟೆ. ವಿದ್ಯೆಯನ್ನು ಒಂದು ಮಹೋದ್ಯಮವಾಗಿ ಬೆಳಸಿಬಿಟ್ಟಿದ್ದಾರೆ – ಜ್ಞಾನೋದ್ಯಮ (Knowledge Industry)ವೆಂದು ಇದನ್ನು ಕರೆಯುತ್ತಾರೆ. ಒಂದು ಉದ್ಯಮದಂತೆ, ಅಷ್ಟೇ ಪೂರ್ವಾಪರ ಯೋಜನೆಯಿಂದ ಶಿಸ್ತುಬದ್ಧವಾಗಿ ಸಂಘಟಿಸುತ್ತಾರೆ. ಕೈತುಂಬ ಸಂಬಳ ಕೊಡುವ ಈ ಉದ್ಯಮಕ್ಕೆ ಸೇರಿ ಕೊಂಡರೆ ಐದು ಹತ್ತು ವರ್ಷಗಳಲ್ಲಿ ಸ್ವಂತ ಮನೆ ಕಟ್ಟಿಕೊಳ್ಳಬಹುದು, ಬ್ಯಾಂಕಿನಲ್ಲಿ ಸೊನ್ನೆಗಳ ಲೆಕ್ಕ ಇಡಬಹುದು. ಇದಕ್ಕಿಂತಲೂ ಹೆಚ್ಚಿನ ಲಾಭ ವಿದ್ಯಾವಂತನಿಗೆ ನಿರ್ವಿಘ್ನವಾಗಿ ತನ್ನ ಆಸಕ್ತಿಯನ್ನು ಬೆಳಸಿಕೊಳ್ಳಲು ಅಮೆರಿಕ ಒದಗಿಸುವ ಪರಿನಿರ್ಮಲವಾದ ಪರಿಸರ. ನಮ್ಮ ದೇಶದಲ್ಲೋ ಜಾತಿ-ಮತ, ಪಕ್ಷ-ಪಂಗಡ, ಭಾಷಾಭೇದಗಳಿಂದಾಗಿ ವಿಶ್ವವಿದ್ಯಾನಿಲಯದ ಅಡಿಪಾಯವೇ ಜರ್ಜರಿತವಾಗಿದೆ; ತಂತಮ್ಮ ಸ್ವಾರ್ಜಿತ ವಿಷಯಗಳ ಹೊರತು ಉಳಿದೆಲ್ಲ ಕಿರುಕುಳಗಳಲ್ಲಿಯೂ ನಿಷ್ಣಾತರಾಗಿ ಪ್ರಾಧ್ಯಾಪಕರ ಮೊಗವಾಡ ಧರಿಸಿ ಸುತ್ತಾಡುವ ಅಲ್ಪತೃಪ್ತ ಶಿಕ್ಷಕ ವರ್ಗದವ ರಿಂದ ಭಾರತೀಯ ಸಮಾಜದಲ್ಲಿ ಯಾವ ವೈಚಾರಿಕ ಕ್ರಾಂತಿಯನ್ನೂ, ಸಾಮಾಜಿಕ ಪ್ರಗತಿಯನ್ನೂ ಅಪೇಕ್ಷಿಸುವುದು ತಪ್ಪಾದೀತು. ಅಮೇರಿಕದ ನಿತ್ಯಮುಕ್ತವಾದ, ಜ್ಞಾನೈಕ ದೃಷ್ಟಿಯುಳ್ಳ ಶಿಕ್ಷಣ ಪರಿಸರದಲ್ಲಿ ನಾಲ್ಕು ದಿನವಾದರೂ ಉಸಿರಾಡಿದ್ದೇ ನನಗೆ ಸೌಭಾಗ್ಯವೆನಿಸಿದೆ. ನನ್ನ ಭಾವನ ಪ್ರೊಫೆಸರ್ ಜೀವರಸಾಯನಶಾಸ್ತ್ರದಲ್ಲಿ ವಿಶ್ವಮಾನ್ಯನಾದರೂ ಅವನ

ಜೀವನದಲ್ಲಿ ಯಾವ ಶ್ರೀಮದ್ಗಾಂಭೀರ್ಯವೂ ಇರಲಿಲ್ಲ. ಅಮೇರಿಕದ ವೈಜ್ಞಾನಿಕ ಪ್ರಗತಿಗೆ ಅಲ್ಲಿನ ಬಂಡವಾಳಸಂಪತ್ತು ಎಷ್ಟು ಕಾರಣವೋ ಅದಕ್ಕೂ ಮಿಗಿಲಾಗಿ ಅಲ್ಲಿನ ಮನುಷ್ಯಸಂಪತ್ತು ಕಾರಣವೆನ್ನಬೇಕು. ಸಹಸ್ರಾರು ಸಂಖ್ಯೆಯ ಜ್ಞಾನತಪಸ್ವಿಗಳಿಗೆ ಅಮೆರಿಕನ್ ಸಮಾಜ ಆಶ್ರಯವಿತ್ತಿದೆ, ಖಂಡಾಂತರ ಪ್ರತಿಭೆಯನ್ನು ಗುರುತಿಸಿ ಅವರಿಗೆ ಸೂಕ್ತ ಮನ್ನಣೆ ನೀಡಿದೆ. ರಾಜನ ಪ್ರಯೋಗಶಾಲೆಯಲ್ಲಿ ಒಬ್ಬ ಮೆಕ್ಸಿಕನ್, ಒಬ್ಬ ಜಪಾನಿ, ಒಬ್ಬ ಥಾಯಿ. ಇಬ್ಬರು ಭಾರತೀಯರು ಒಟ್ಟಾಗಿ ಒಂದು ವಿಷಯದಲ್ಲಿ ಸಂಶೋಧನೆ ನಡೆಸುತ್ತಿದ್ದರು. ಜ್ಞಾನ ವಿಸ್ತರಣ ಯಜ್ಞದಲ್ಲಿ ರಾಷ್ಟ್ರದ ಗಡಿಯನ್ನು ಅಮೇರಿಕ ಲೆಕ್ಕ ಹಿಡಿಯುವುದಿಲ್ಲ; ದ್ವಿತೀಯ ಮಹಾಯುದ್ಧದ ಕಾಲದಿಂದಲೂ ಅಮೆರಿಕ ಪ್ರತಿಭಾವಂತರಿಗೆ ಕೊನೆಯ ನಿಲ್ದಾಣವಾಗಿಬಿಟ್ಟಿದೆ. ಈ ದೃಷ್ಟಿಯಿಂದ ಡ್ಯೂಕ್ ಕ್ಯಾಂಪಸ್ ನನಗೊಂದು ವೇದಕಾಲೀನ ಋಷ್ಯಾಶ್ರಮದ ನೆನಪನ್ನು ತಂದುಕೊಟ್ಟಿದೆ. ಕಾರು ವಿಮಾನ ಕೋಕಕೋಲ ಸ್ವಯಂಚಾಲಿತಯಂತ್ರಸಜ್ಜಿತವಾದ ಆಧುನಿಕ ನಾಗರಿಕತೆಯೊಂದು ಜ್ಞಾನ ಮಂದಿರಗಳನ್ನು ಸ್ಯಮಂತಕಮಣಿಯಂತೆ ಕಾಪಾಡುತ್ತಿರುವ ದೃಶ್ಯ ಜಗತ್ತಿನ ಅದ್ಭುತಗಳಲ್ಲೊಂದು.

## ○ ○ ನಯಾಗರಕ್ಕೆ

ನಯಾಗರದ ಆಕರ್ಷಣೆಯನ್ನು ಅಮೆರಿಕಕ್ಕೆ ತೆರಳಿದ ಯಾವ ಭಾರತೀಯನೂ ತಡೆಯಲಾರ. ನಾನೂ ತಡೆಯಲಿಲ್ಲ. ಡ್ಯೂರ್ಹಾಮಿನಿಂದ ವಾಷಿಂಗ್ಟನ್ನಿಗೆ ಮರಳಿದವನೇ 14 ಡಾಲರು ಕೊಟ್ಟು ಟ್ರೇಲ್ವೇಸ್‌ನ ಹವಾನಿಯಂತ್ರಿತ ಲಕ್ಸುರಿ ಬಸ್ಸನ್ನು ಹತ್ತಿದೆ. ಅಪರಾತ್ರಿ 12.30ಕ್ಕೆ ಹೊರಟ ಈ ಬಸ್ಸು 720 ಮೈಲು ದೂರದ ಬಫೆಲೊ ನಗರವನ್ನು ಮುಟ್ಟಲು ಹದಿನಾರು ತಾಸು ಹಿಡಿಯುತ್ತದೆ. ನಿಶಾಚರ ಬಸ್ಸಿನ ಪ್ರಥಮ ಅನುಭವದಲ್ಲಿ ಅದರ ಧ್ವನಿ ಆ ಕಾಂಕ್ರೀಟು ರಸ್ತೆಯ ನಯಕ್ಕೂ ಸಗ್ಗಲಿಲ್ಲ. ಬಸ್ಸಿನೊಳಗೇ ಒಂದು ಶೌಚಗೃಹವುಂಟು. ಪ್ರವಾಸಿಗಳು ಮಾತ್ರ ವಿರಳ. ಬಫೆಲೋ ಮುಟ್ಟುವಾಗ ನಾಲ್ಕಾರು ಜನ ಮಾತ್ರ. ಹೊರಡುವಾಗ ಒಂದು ವಿನೋದ ನಡೆಯಿತು. ನನ್ನ ಪೆಟ್ಟಿಗೆಗಳು ಕಾಣೆ ಆಗಿದ್ದವು. ಕಂಪೆನಿ

ಯವರ ಹತ್ತಿರ ಕೊಟ್ಟಮೇಲೂ ಕಾಣೆಯಾಗಬೇಕೆ? 12.30ರ ಬಸ್ಸಿನ ಹೊಟ್ಟೆಯೊಳಗೆ ಹೊಕ್ಕು ಬಂದರೂ ಕಾಣಿಸದು – ದೂರಿಟ್ಟೆ: ಆಗ ಅದು ಮೊದಲೇ ಆ ಕಡೆ ಹೊರಟ ಬಸ್ಸಿನಲ್ಲಿ ರವಾನೆ ಆಗಿತ್ತೆಂದು ನನಗೆ ಆಶ್ವಾಸನೆ ಕೊಡಲಾಯಿತು. ಮರುದಿನ 2 ಗಂಟೆ ಹೊತ್ತಿಗೆ ಬಫೆಲೋ ಟ್ರೈಲ್ ವೇಸ್ ಡಿಪ್ಪೋದಲ್ಲಿ ನನ್ನ ಟ್ರಂಕುಗಳು ನನಗಾಗಿ ಕಾಯುವುದನ್ನು ಕಂಡಾಗ ನನಗೆ ಅಮೆರಿಕದ ಮೇಲೆ ವಿಶ್ವಾಸ ಅಧಿಕವಾಯಿತು.

ಬಫೆಲೊ ನಗರಕ್ಕೆ ನಗರವೇ ಕಾರ್ಖಾನೆಗಳ ಹೊಗೆಯಿಂದ ನವೆಯುತ್ತಿತ್ತು. ಈರಿ, ಒಂಟೇರಿಯೋ ಸರೋವರಗಳು – ಅಮೆರಿಕದ ಮಹಾಸರೋವರ (Great Lakes) ಎನಿಸಿದ್ದವು – ಇಂದು ಕಾರ್ಖಾನೆಯ ಮಲ ವಿಸರ್ಜನೆಯ ಕೊಳಚೆಗುಂಡಿಗಳಾಗಿ ಖಗಮೃಗ ಜೀವನಕ್ಕೂ ನಗರವಾಸಿ ಗ್ರಾಮವಾಸಿಗಳ ಆರೋಗ್ಯಕ್ಕೂ ಅಪಾಯವುಂಟುಮಾಡುವ ವಿಷಮತೆಯ ಹಂತಕ್ಕೆ ಮುಟ್ಟಿವೆ. ನೈಸರ್ಗಿಕ ಸಮತೋಲವನ್ನು (Ecology) ಕೆಡಿಸಿಕೊಂಡ ಅಮೇರಿಕನ್ ನಾಗರಿಕತೆ ಮತ್ತೆ ತಲೆ ತುರಿಸಿಕೊಳ್ಳಹತ್ತಿದೆ. ಈ ಸಂಪದ್ಭರಿತ ( affiluent) ಸಮಾಜವನ್ನು ಇಂದು ಕೊಳೆ ವಿಸರ್ಜನೆ ( effluent) ಸಮಾಜವೆಂದೂ ಅಲ್ಲಿ ಅಣಕಿಸುತ್ತಿದ್ದಾರೆ. ಆದರೆ ನಯಾಗರದ ಜಲಪಾತದ ರುದ್ರಗಂಭೀರ ದೃಶ್ಯದಲ್ಲಿ ಇದೆಲ್ಲ ಮರೆತುಹೋಗುತ್ತದೆ. ಇಡಿ ಸರೋವರವೇ ಅಮೆರಿಕನ್ ಗಡಿಯಲ್ಲಿ ಮಗುಚಿ ಬೀಳುವುದನ್ನು ನೋಡಲು ನೂರಾರು ಸಾವಿರಾರು ಯಾತ್ರಿಕರು – ವಿದೇಶೀಯರಷ್ಟೇ ಸ್ವದೇಶೀಯರೂ – ಅಲ್ಲಿ ನಿತ್ಯ ಹಾಜರು. ನೋಡುವುದಕ್ಕೆ ಏನೆಲ್ಲಾ ಏರ್ಪಾಟು! ಇಡೀ ಸರೋವರದ ದಂಡೆಗುಂಟ ಕಾಲ್ನಡೆ ಸುತ್ತಬಹುದು: ಆಯಾಸವಾದರೆ ಪುಟಾಣಿ ಡೀಸೆಲ್ ರೈಲ್ ಬಸ್ಸಿದೆ, ಅದನ್ನೇರಬಹುದು: ರಾತ್ರಿ ಹೊತ್ತು ಜಲಪಾತಕ್ಕೆ ಬಣ್ಣದ ದೀಪದ ಪ್ರಕಾಶವನ್ನು ಹರಿಯಿಸುತ್ತಾರೆ. ಅದನ್ನ ನೋಡಲು ಕರೆಯಲ್ಲೇ ನಿಲ್ಲಬಹುದು: ಅಥವಾ ಕರೆಗಂಟಿನಿಂದ ಗಾಜುಗೋಪುರದ ತುತ್ತತುದಿಗೆ ಲಿಫ್ಟಿನಲ್ಲೇರಿ 25 ಸೆಂಟ್ಸಿಗೆ ಹುಟ್ಟಿದ್ದನ್ನು ಸಾರ್ಥಕಗೊಳಿಸುವ ವರ್ಣವೈಭವದಲ್ಲಿ ಕಣ್ಣಿಗೆ ಹಬ್ಬ ಒದಗಿಸಬಹುದು. ಉರ್ಕು, ಸೊರ್ಕು ಹೆಚ್ಚಾದವರು ನದಿಯಲ್ಲಿ ಇಳಿದು ಹಡಗು ಹತ್ತಿ ತಡಸಲಿನ ಕೆಳಗಡೆಯಿಂದ ಅಧರ ಸಾಮೀಪ್ಯವನ್ನನುಭವಿಸಬಹುದು. ಸೇತುವೆ ದಾಟಿದರೆ ಕೆನಡಾದೇಶ ಬಂದುಬಿಡುತ್ತದೆ. ಅಲ್ಲಿಂದ

ನಯಾಗರದ ದೃಶ್ಯ ಇನ್ನೊಂದೇ ತೆರ. ಅಮೆರಿಕದ ಹೃದಯವೈಶಾಲ್ಯಕ್ಕೆ ತಕ್ಕುದಾದ ಸರೋವರದ ವಿಸ್ತರಣೆ, ತಡಸಲಿನ ಗಾಂಭೀರ್ಯ; ಅವರ ಆದಮನೀಯ ಉಲ್ಲಾಸದ ಸಂಕೇತ ಈ ನಯಾಗರ ಎಂದುಕೊಂಡಿದ್ದೇನೆ. ಇನ್ನೊಮ್ಮೆ ಹೋದರೆ ಎಂಟು ದಿನ ನಯಾಗರದಲ್ಲೇ ಡೇರೆ ಹೂಡುತ್ತೇನೆ.

ನಯಾಗರದಿಂದ ಬಫೆಲೋಕ್ಕೆ ಬಂದರೆ ಅಲ್ಲಿ ಮತ್ತೆ ದಶ ದಿಕ್ಕುಗಳಿಗೆ ಹೋಗುವ ರಾತ್ರಿ ಬಸ್ಸುಗಳು ಸಂಧಿಸುತ್ತವೆ. ಗ್ರೇಹೌಂಡ್ ಲೈನಿನ ಬಸ್ಸಿನಲ್ಲಿ ಮೇಲುಪ್ಪರಿಗೆ ಟಿಕೇಟು ತೆಗೆದುಕೊಂಡು ರಾತ್ರಿ 12ಕ್ಕೆ ಸುಖಾಸೀನನಾಗಿ ನಯಾಗರದ ನೋಟವನ್ನು ಮೆಲುಕು ಹಾಕುವನಿತರಲ್ಲಿ 'ಹೂ ವಾಂಟ್ಸೆಪಿಲೊ? (who wants a pillow)ಎಂದು ಅನುನಾಸಿಕದಲ್ಲಿ ಒಬ್ಬ ತಲೆದಿಂಬುವಾಲ ಪ್ರಶ್ನೆ ಕೇಳಿದ. ಅರ್ಧ ಡಾಲರಿಗೆ ನಿಮಗೆ ಪ್ರಯಾಣದ ಅವಧಿಗೆ ದಿಂಬುಬಾಡಿಗೆಯ ವ್ಯವಸ್ಥೆ: ನ್ಯೂಯಾರ್ಕಿನಲ್ಲಿ ಇದೇ ದಿಂಬು ಕಂಪೆನಿಯ ಪ್ರತಿನಿಧಿ ನಾವು ಬಿಟ್ಟ ದಿಂಬುಗಳನ್ನು ಹೆಕ್ಕಿ ವಾಪಸು ಮಾಡಬೇಕು. ಖಾಸಗೀ ಸಾಹಸ ಎಂದರೆ ಇದು. ತಲೆದಿಂಬಾಯಿತು. ಇನ್ನು 'ಹೂ ವಾಂಟ್ಸ್ ಪಿಲ್–ಸ್ಲೀಪಿಂಗ್ ಪಿಲ್' ಅಂತ ಕೇಳಿಕೊಂಡ ಇನ್ನೊಬ್ಬ ಸ್ಲೀಪಮೇರಿಕ (ಇಂಕ್) ಕಂಪೆನಿಯ ಪ್ರತಿನಿಧಿ ನಿದ್ದೆಗುಳಿಗೆ ವಿಚಾರಿಸಿಕೊಂಡು ಬರಲಿಲ್ಲವೇಕೆ? ಎಂದುಕೊಂಡೇ ದಣಿದ ಕಾಲು, ತಣಿದ ಕಣ್ಣು ನಿದ್ದೆಹೋದುವು.

### ○ ○ ಪಾಪಪೂರಿತ ಪಟ್ಟಣ

ನ್ಯೂಯಾರ್ಕ್ ಪಾಪಪೂರಿತ ಪಟ್ಟಣವೆಂದು ಎಳವೆಯಲ್ಲಿ ನಾನೋದಿದ 'ಅಂತರಂಗ' ವಾರಪತ್ರಿಕೆ ವರ್ಣಿಸಿತ್ತು. ಅಲ್ಲಿ ನಾನು ಕಾಲಿಟ್ಟದ್ದೇ ಆ ಪಾಪದ ಕೇಂದ್ರಸ್ಥಾನಕ್ಕೆ. ಟೈಮ್ ಸ್ಕ್ವೇರ್‌ಗೆ–ಬ್ರಾಡ್‌ವೇಗೆ ಲಿಂಕನ್ ಟನೆಲ್ ಹಾದು ನಾವು ತಲೆ ಎತ್ತಿದಾಗ ಟೈಮ್ ಕಟ್ಟಡ ಗೊಮ್ಮಟನಂತೆ ನಿಂತಿರುತ್ತದೆ. ನೂರ್ಮಾರು ನಡೆದು ಹೋಟೆಲ್ ಹಾಲ್ಲೆಂಡ್ ಹೊಕ್ಕು ಆರು ಡಾಲರಿನ ಕೋಣೆ ಹಿಡಿದೆ. ಎಂಟನೆಯುಪ್ಪರಿಗೆಯ ಈ ಕೋಣೆ ಬಿಸಿ–ಹಸಿ ನೀರ್ಕೊಳವೆಯ ಸ್ನಾನಗೃಹವನ್ನು ಹೊಂದಿಸಿಕೊಂಡು

ಮೂವತ್ತು ರೂಪಾಯಿ ಬಾಡಿಗೆಗೆ ಸಿಕ್ಕಿದ್ದು ಆಶ್ಚರ್ಯವೆನಿಸಿತು. ಇನ್ನೊಂದು ನೂರು ಮಾರು ನಡೆದರೆ ಹಡ್ಸನ್ ನದಿಯ ಹಡಗು ಹತ್ತಿ ಇಡಿ ಮ್ಯಾನಹಾಟನ್ ದ್ವೀಪವನ್ನು ಬಳಸಿ ನೋಡಬಹುದು ಎಂದು ಮೂರು ಡಾಲರು ತೆತ್ತೆ. ಸುಮಾರು ಒಂದೂವರೆ ತಾಸು ವಿಷಯ ನಿರೂಪ ಣೆಯ ಸಮೇತ ನ್ಯೂಯಾರ್ಕ್ ಸಂದರ್ಶನ ಆರಾಮಾಗಿ ಕೂತು ಮುಗಿಸಿ ಬಿಟ್ಟೆ. ಸ್ವಾತಂತ್ರ್ಯದ ಮೂರ್ತಿಯನ್ನು ಹತ್ತಿರದಲ್ಲೇ ನೋಡಿದೆ. ಒಂದು ಸಾವಿರ – ರೋಗಿಗಳಲ್ಲ – ವೈದ್ಯರುಳ್ಳ ಆಸ್ಪತ್ರೆ ನೋಡಿದೆ. ನ್ಯೂಯಾರ್ಕ್ ನಾಗರಿಕರು ಕುಡಿದು ತಿಂದು ಬಿಸಾಟ ಬಾಟಲಿ ಟಿನ್ನುಗಳು ಬೆಟ್ಟಗಳನ್ನು ಕಂಡೆ, ಕೋಲಂಬಿಯ ವಿಶ್ವವಿದ್ಯಾನಿಲಯದ ಕಗ್ಗಲ್ಲನ್ನು ವೀಕ್ಷಿಸಿದೆ. ಮ್ಯಾಡಿ ಸನ್ ಎವಿನ್ಯೂ, ಫಿಫ್ತ್ ಎವಿನ್ಯೂನಲ್ಲಿ ಶತಪಥ ತುಳಿದೆ. ಮ್ಯೂಸಿಯಂ ಆಫ್ ಮಾಡರ್ನ್ ಆರ್ಟ್‌ನಲ್ಲಿ ಮೂರು ತಾಸು ಕಳೆದೆ, ರಾಕ್‌ಫೆಲರ್ ಸೆಂಟರಿನಲ್ಲಿ ಅಡ್ಡಾಡಿದೆ. ಸಂಜೆಯಾಗುತ್ತಲೆ ಬ್ರಾಡ್‌ವೇ ಮತ್ತೇರಿ ಹುಚ್ಚಾ ಗುವುದನ್ನು ಕಂಡೆ. ಇಲ್ಲಿ ರಾತ್ರ ರಾತ್ರಿಯಲ್ಲಿ – ನಿಯಾನ್ ದೀಪಗಳ ಬೆಡಗಿನಲ್ಲಿ ಬೆಡಗುಗಾತಿಯರ ಆಕರ್ಷಣೆ. ನಾಟಕಮಂದಿರ, ಸಿನಿಮಾ ಮಂದಿರ – ನೆಪಮಾತ್ರ ಸಿನಿಮಾಮಂದಿರ, ಆಪೆರಾ, ನೈಟ್ ಕ್ಲಬ್ – ಇದಾವುದಕ್ಕೂ ನನ್ನ ಹತ್ತಿರ ಕಾಸಿಲ್ಲ; ಆದರೆ ಬೀದಿತಿರುಗಲು ಯಾರ ಕಾಸೂ ಬೇಡ. ರಾತ್ರಿ 10ರ ತನಕ ಅಂಡಲೆದೆ, ಕಾಲೂ ಸೋತಲ್ಲಿ ಕೂತೆ. ಈ ಲಂಕಾಪಟ್ಟಣದಲ್ಲಿ ಪಾಪದ ಕಲ್ಪನೆಯೇ ಯಾರಿಗೂ ಇದ್ದಂತೆ ಕಾಣ ಲಿಲ್ಲ. ಅಯ್ಯೋ ಪಾಪ! ಯಾರಿಗೆ ಯಾರು ಹೇಳಬೇಕು ಈ ಮಾತನ್ನು?

ಮರುದಿನ 17ರಂದು ವಿಶ್ವಸಂಸ್ಥೆಗೆ ಸ್ವತಃ ನನ್ನ ಸಂದರ್ಶನ ಇರಿಸಿ ಕೊಂಡೆ. ಮಾರ್ಗದರ್ಶಿಗಳ ಬೆಂಬಿಡಿದು ಜನರಲ್ ಎಸೆಂಬ್ಲಿ, ಸೆಕ್ಯೂರಿಟಿ ಕೌನ್ಸಿಲ್ ಇ. ಇ. ನೋಡಿದೆ. ಇಲ್ಲಿ ಇಂಥ ಮಾರ್ಗದರ್ಶಕ (Guide) ಕೆಲಸಕ್ಕೆ 175 ಜನರನ್ನಿಟ್ಟಿದ್ದಾರೆ. ಯಾವ ಭಾಷೆಯಲ್ಲಿ ಬೇಕೋ ಆ ಭಾಷೆ ಯಲ್ಲಿ ನಿಮಗೆ ವಿವರಣೆ ಸಿಗುವಂತೆ ಐದು ಭಾಷೆಗಳ ಹತ್ತು ಗುಂಪು ಮಾಡಿ ದ್ದಾರೆ. ನಿಮಗೆ ಬೇಕಾದ ಗುಂಪಿನಲ್ಲಿ ನಿಲ್ಲಿ – ಹತ್ತು ಮಿನಿಟಿನಲ್ಲಿ ನಿಮ್ಮ ಮಾರ್ಗದರ್ಶಿನಿ ನಿಮ್ಮನ್ನು ದಾರಿ ಹಿಡಿಸುತ್ತಾಳೆ. ಯುನೋ ಪುಸ್ತಕ ಭಂಡಾರದಲ್ಲಿ ಒಂದು ಗಂಟೆ ಕಳೆದು, ಅದರ ಹೊರಗಡೆ ಮೂರು ಡಾಲರ್ ಕಳೆದುಕೊಂಡೆ – ಡಾಗ್ ಹ್ಯಾಮರ್‌ಶೀಲ್ಡ್ ಅವರ ಸ್ಮಾರಕ

ನಿರ್ಮಾಣಕ್ಕೆ ಅದು ನನ್ನ ಅಮೌಲ್ಯ ಕೊಡುಗೆ. ಲಿಂಕನ್ ಮಹಾಶಯನ ತರುವಾಯ, ಡಾ. ಆಲ್ಬರ್ಟ್ ಶ್ವಯಿಟ್ಸರ ತರುವಾಯ, ವಿದೇಶೀಯ ಮಹಾಪುರುಷರಲ್ಲಿ ನನಗೆ ಮಹಾತ್ಮನೆಂದು ಕಂಡದ್ದು ಸ್ವೀಡನ್ನಿನ ಈ ಬ್ರಹ್ಮಚಾರಿ ಅರ್ಥಶಾಸ್ತ್ರಜ್ಞ. ವಿನಾಕಾರಣ ಅಕಾಲ ಮೃತ್ಯುವಿಗೆ ತುತ್ತಾದ ಡಾಗ್ ನನ್ನ ಇನ್ನೊಬ್ಬ ಹೀರೋ. ಅವನ ಸ್ಮರಣೆಗೆ ಮೂರು ಡಾಲರು ಹೆಚ್ಚಲ್ಲ.

ನ್ಯೂಯಾರ್ಕಿಗೆ ಹೋದಮೇಲೆ ಎಂಪೈರ್‌ಸ್ಟೇಟ್ ಕಟ್ಟಡ ಹತ್ತದವನು ಮೂರ್ಖನಾಗಲಾರನೆ? ಅದನ್ನು ಹತ್ತಿ ನನ್ನ ಮೂರ್ಖತ್ವವನ್ನು ಅಳಿಸಿ ಕೊಂಡೆ.

## ○ ○ ಮರಳಿ ಲಂಡನಿಗೆ

ಜೂನ್ 18ನೇ ತಾರೀಕು ನ್ಯೂಯಾರ್ಕ್ ಬಿಟ್ಟು ಮರಳಿ ಲಂಡನ್ ಸೇರಿದೆ. ಬರಿಯ ಹತ್ತು ಪೌಂಡ್(135 ರೂಪಾಯಿ)ನಲ್ಲಿ ಹತ್ತು ದಿನ ತಿರುಗಾಟ, ನಾಲ್ಕು ನಾಟಕ – ಇದು ದೊಡ್ಡ ಸಿದ್ಧಿ. ಭಂಡಾರಿಯ ಪುಕ್ಕಟೆ ಆಶ್ರಯವಲ್ಲದಿರುತ್ತಿದ್ದರೆ ಹತ್ತು ಪೌಂಡ್ ಒಂದೇ ದಿನಕ್ಕೆ ಬರಿದಾಗುವ ಸನ್ನಿವೇಶ. ಒಂದು ಶಿಲಿಂಗ್ ಕಾಫಿ, ಎರಡು ಶಿಲಿಂಗ್ ಊಟ, $10\frac{1}{2}$ ಶಿಲಿಂಗ್‌ನ ನಾಟಕ, ಮೂರು ನಾಲ್ಕು ಶಿಲಿಂಗ್ ಪ್ರಯಾಣ ವೆಚ್ಚ, ದಿನ ಕ್ಕೊಂದು ಪೌಂಡಿಗಿಂತ ಖರ್ಚು ಮೀರಬಾರದು – ಇದು ನನ್ನ ಹಟ. ಲಂಡನ್ನಿನ ಟ್ರಾಫಲ್ಗರ್ ಸ್ಕ್ವೇರ್‌ನ ಎಲ್ಲಾ ಪುಸ್ತಕ ಭಂಡಾರಗಳಿಗೂ ನುಗ್ಗಿದೆ. ಊರಿಂದ ಸಿಂಡಿಕೇಟ್ ಬ್ಯಾಂಕಿನ ವರಿಷ್ಠರಾದ ಶ್ರೀ ಟಿ. ಎ. ಪೈ ಅವರು ನನಗೆ ವೆಸ್ಟ್‌ಮಿನ್‌ಸ್ಟರ್ ಬ್ಯಾಂಕಿನ ವ್ಯಾಪಾರಿ ಸುದ್ದಿ (Commercial Intelligence) ಖಾತೆಯ ಒಳಮಾಹಿತಿ ಪಡೆಯಲು ಆಜ್ಞಾಪಿಸಿದ್ದರು. ಎರಡು ದಿನ ಅಲ್ಲಿ ತೆರಳಿ ಸಂಬಂಧಪಟ್ಟ ಅಧಿಕಾರಿಗ ಳೊಡನೆ ವಿಚಾರ ವಿನಿಮಯ ಮಾಡಿದೆ. ನಾನೂ ಆಗ ಸಿಂಡಿಕೇಟ್ ಬ್ಯಾಂಕಿನ ಆರ್ಥಿಕ ಸುದ್ದಿಯ ಮುಖ್ಯಸ್ಥನೆಂದು ಹಚ್ಚಿಕೊಂಡದ್ದರ ಋಣ

ಸಂದಾಯಕ್ಕಾಗಿ ವೆಸ್ಟ್‌ಮಿನ್‌ಸ್ಟರ್‌ನ ಸದರಿ ಖಾತೆಯ (Economic Intelligence) ವರಿಷ್ಠರೊಡನೆ ತಾಸೆರಡು ತಾಸು ಸರಸಸಲ್ಲಾಪ ನಡೆಸಿದೆ. ಉದ್ದ ಟೋಪಿಯ ಲಂಡನಿನ ಬ್ಯಾಂಕರರನ್ನು ಕಾಫಿ ಅಂಗಡಿಗಳಲ್ಲಿ ಸಂಧಿಸಿ ಮಾತಾಡಿದೆ. ಇತಾಲಿಯದಲ್ಲಿ ಅರ್ಥಶಾಸ್ತ್ರ, ನ್ಯೂಯಾರ್ಕಿನ ಬೀದಿಯ ಉದ್ದಗಲ ಮತ್ತು ಲಂಡನಿನ ಬ್ಯಾಂಕ್ ಆಫ್ ಇಂಗ್ಲಂಡ್‌ನ ಒಟ್ಟು ಸುತ್ತಳತೆ—ಇಷ್ಟನ್ನೂ ಬಲ್ಲ ನಾನು ಒರ್ಮಾದರಿ ತಜ್ಞನಾಗಿಬಿಟ್ಟಿರಬೇಕೆಂಬ ಭ್ರಮೆಯಿಂದ ಪೈ ಅವರು ನನ್ನನ್ನು ಸಿಂಡಿಕೇಟ್‌ಗೆ ಎಲ್ಲಾದರೂ ಸೇರಿಸಿಕೊಂಡಿದ್ದರೆ ಇಷ್ಟು ಹೊತ್ತಿಗೆ ನನ್ನ ರಾಷ್ಟ್ರೀಕರಣವಾಗುತ್ತಿತ್ತು. ಆ ಭಾಗ್ಯ ನನ್ನದಾಗಲಿಲ್ಲ. ನಾನು ಲಂಡನಿನಲ್ಲಿ ಇಳಿದದ್ದು ನಾಟಕ ನೋಡುವುದಕ್ಕೆ—ಎಂದು ನಾನು ಪೈ ಅವರಿಗೆ ಬರೆದು ತಿಳಿಸಲಿಲ್ಲವಾದರೂ ನನ್ನ ಒಲವನ್ನು ಬಲ್ಲ ಅವರು ಆ ಮೇಲೆ ನನ್ನ ಉಸಾಬರಿ ಬಿಟ್ಟುಬಿಟ್ಟರು. ಹಾಗಾಗಿ ಸಾಲ ಕೊಡುವ ಸುಖೀ ವೃತ್ತಿಯನ್ನು ಬಿಟ್ಟು ಸಾಲ ಬೇಡುವ ಭಾರತದ ರಾಷ್ಟ್ರೀಯ ವ್ಯವಸಾಯದಲ್ಲಿಯೇ ನಾನು ಕಾಲ ಕಳೆಯುವಂತಾಗಿದೆ.

ಬರ್ನಾರ್ಡ್‌ಶಾ ಅವರ 'ಡಾಕ್ಟರ್ಸ್ ಡೈಲೆಮ್ಮಾ', ಪಿರಾಂಡೆಲ್ಲೋನ 'ಸಿಕ್ಸ್ ಕ್ಯಾರೆಕ್ಟರ್ಸ್', ಶೇಕ್ಸಪಿಯರ್‌ನ 'ಮಿಡ್ಸಮರ್ ನೈಟ್ಸ್ ಡ್ರೀಮ್', ಶಾ ಆಧರಿತ 'ಮೈ ಫೇರ್ ಲೇಡಿ' ಇಷ್ಟನ್ನು ನೋಡಿದೆ. ದಿನಕ್ಕೆ ಹತ್ತಿಪ್ಪತ್ತು ಕಡೆ ಲಂಡನಿನಲ್ಲಿ ನಾಟಕಗಳು ನಡೆಯುತ್ತವೆ. ನಾಟಕ ನೋಡಿಕೊಂಡೇ ಅಲ್ಲಿ ಮೂರು ತಿಂಗಳು ವಾಸ ಮಾಡಬಹುದು; ಅದಕ್ಕಾಗಿಯೇ ಲಂಡನಿಗೆ ಪ್ರವಾಸ ಹೋಗಬಹುದು. 'ಮಿಡ್ಸಮರ್'ನ ನಟರ ಚಾತುರ್ಯಕ್ಕೆ ಶೇಕ್ಸ್‌ಪಿಯರನ ಮಾತು ಇಂದಿನ ಜೀವನದ ಮಾತಿನಂತೆ ಆಧುನಿಕವಾಗಿ ಕಂಡಿತು. 'ಮೈ ಫೇರ್ ಲೇಡಿ' ಎಷ್ಟೋ ವರ್ಷ ಲಂಡನಿನಲ್ಲಿ ನಡೆಯಿತಂತೆ. ಶಾ ಅವರ 'ಡೈಲೆಮ್ಮ' ನೋಡುವಾಗ ನಮ್ಮ ರಾಷ್ಟ್ರಾಧ್ಯಕ್ಷರೂ ನನ್ನ ಹಿಂದೆ ಕೂತಿದ್ದರು; ಅವರ (ಮತ್ತು

ನನ್ನ !) ಗೌರವಾರ್ಥ ಅಂದು ಜನಗಣಮನ ಹಾಡಿಸಿದರು—ನಾಟಕದ ಕೊನೆಗೆ. ಪಿರಾಂಡೆಲ್ಲೊನ 'ಸಿಕ್ಸ್ ಕ್ಯಾರೆಕ್ಟರ್ಸ್' ನಡೆದದ್ದು ಮೇಫೇರ್ ಹೋಟೆಲಿನ ಒಳಗಡೆ ಇರುವ ಪುಟ್ಟ ನಾಟಕ ಮಂದಿರದಲ್ಲಿ. ಪುಟ್ಟದಾದರೂ ಅತ್ಯಂತ ಪರಿಮಾರ್ಜಿತ, ಪರಿಷ್ಕೃತವಾದ ಈ ನಾಟಕ ಮಂದಿರದಲ್ಲಿ ಅಂದು ಜನಸಂದಣಿಯೂ ಇರಲಿಲ್ಲ. ಮುಖ್ಯ ಭೂಮಿಕೆಯಲ್ಲಿ ರಾಲ್ಫ್ ರಿಚಾರ್ಡ್‌ಸನ್ ಅಸಾಧಾರಣವಾಗಿ ನಟಿಸಿದರು. ಬ್ರಿಟಿಷ ಜನಕ್ಕೆ ನಟನೆ ಎಂಬುದು ಒಂದು ಸಂಪ್ರದಾಯ, ಪರಂಪರೆ. ಒಳ್ಳೆಯದನ್ನು ಮೆಚ್ಚುವ ರಸಿಕ ಮಂಡಲ ಇಲ್ಲದೆ ಇಂಥ ಒಳ್ಳೇ ನಟನೆ ಲಭ್ಯವಾಗದು. ಜೇಬು ಖಾಲಿಯಾದ್ದರಿಂದ ಸ್ಟ್ರಾಟ್‌ಫರ್ಡ್‌ಗೆ ಹೋಗುವುದು ಅಶಕ್ಯ; ಆದರೂ ನಾಲ್ಕು ನಾಟಕ ನೋಡಿದೆನಲ್ಲಾ. ನ್ಯಾಶನಲ್ ಗೆಲರಿ, ಟೇಟ್ ಗೆಲರಿ, ಬ್ರಿಟಿಷ್ ಮ್ಯೂಸಿಯಮ್ ಮತ್ತು ಅದರ ಸುತ್ತ ಮುತ್ತಣ ಪುಸ್ತಕದಂಗಡಿ—ಹತ್ತು ದಿನ ಈ ಕಲೆ, ನಾಟಕ, ಗ್ರಂಥ, ಚಿತ್ರ, ಬ್ಯಾಂಕಿಂಗ್ ಕ್ಷೇತ್ರಗಳಲ್ಲಿ ತಿರುತಿರುಗಿ ಮರಳಿ ಆಂಗ್ಲ ಸಾಹಿತ್ಯ ಸ್ನಾತಕನಾದೆ. ಪಾರ್ಲಿಮೆಂಟಿನ ಕ್ಯೂನಲ್ಲಿ ಕಾಮನ್ಸ್ ಹೊಕ್ಕಾಗ ಸಭೆ ಖಾಲಿ, ಸ್ಪೀಕರ್ ಏಳುತ್ತಿದ್ದರು. 'ಹೂ ಗೋಸ್ ಹೋಮ್?' ಕೂಗಾಟ. ಲಾರ್ಡ್ಸ್‌ನಲ್ಲಿ ಇನ್ನೂ ಚರ್ಚೆ ನಡೆಯುತ್ತಿತ್ತು. ನನ್ನ ದುರದೃಷ್ಟವೋ ಏನೋ ಪಠ್ಯ ಗ್ರಂಥಕ್ಕೆ ವಿರುದ್ಧವಾಗಿ ಉಗ್ರುಗ್ರಾಗಿ ಒಬ್ಬ ಮಹಾ ಲಾರ್ಡ್ ತನ್ನೂರಿಗೊಂದು ರಸ್ತೆ ಬೇಕೆಂಬುದನ್ನು ಸಾಧಿಸುತ್ತಿದ್ದ. ವೆಸ್ಟ್‌ಮಿನ್‌ಸ್ಟರ್ ಇಗರ್ಜಿಯಲ್ಲಿ ಇಂಗ್ಲಿಷ್ ಕವಿಗಳ ಮೇಲೆ ನನಗೆ ಕನಿಕರ ಉತ್ಪನ್ನವಾಯಿತು. ಅವರನ್ನೆಲ್ಲ ಮುದ್ದೆಮುದ್ದೆಯಾಗಿ ಗೊಂಬೆಗಳನ್ನಿಟ್ಟಂತೆ ಇಲ್ಲಿ ಇಟ್ಟುಬಿಟ್ಟಿದ್ದರು; ಅಮೇರಿಕದವರಾದರೆ ಇವರಿಗಾಗಿ ಐದು ಮೈಲಿನ ಒಂದು ಮಹಾ ಭವನ ನಿರ್ಮಾಣ ಮಾಡುತ್ತಿದ್ದರು; ಬ್ರಿಟಿಷ ಜನ ಬಹಳ ಜಿಕ್ರಿ ಜನಾಂಗ. ಇದ್ದ ಜಾಗದಲ್ಲೇ ಸತ್ತ ಕವಿಗಳನ್ನೆಲ್ಲ ತುರುಕಿಸಿದ್ದಾರೆ. ವೆಸ್ಟ್‌ಮಿನ್‌ಸ್ಟರ್‌ಗೆ ಇನ್ನೊಂದು ಮಹಡಿ ಏಕೆ ಹಾಕಬಾರದು? . . .

○ ○ ಮರಳಿ ಮನೆಗೆ

29ನೇ ತಾರೀಕಿನ ಅಲಿತಾಲಿಯದಲ್ಲಿ ಕೂತು ಮರುದಿನ ಮುಂಜಾನೆ ಮುಂಬಯಿಯಲ್ಲಿ ಬಂದಿಳಿದಾಗ ನಿ. ವ್ಯಾಸಬಲ್ಲಾಳರು ಮತ್ತು ಎಸ್. ಎನ್. ಮೂಡಬಿದ್ರಿಯವರು ಹಾಜರಿದ್ದರು. ಬ್ರಿಸ್ಟಲ್‌ಗ್ರಿಲ್ಲಿನಲ್ಲಿ ಒಂದು ವಿದೇಶ ಪ್ರವಾಸದ ಭಾಷಣ ಮುಗಿಸಿ, ಮರುದಿನ ಮಂಗಳೂರಿಗೆ ಹೊರಟೆ. ವಿಮಾನ ನಿಲ್ದಾಣಕ್ಕೆ ನನ್ನ ಸಹೋದ್ಯೋಗಿ ಮಿತ್ರರೆಲ್ಲಾ ಬಂದಿದ್ದರು. ಅಲ್ಲಿ ಒಂದು ಪತ್ರಿಕಾ ಸಮ್ಮೇಳನವನ್ನೂ ನಡೆಸಿದೆ. ಆಮೇಲೆ ನಾಲ್ಕಾರು ಕಡೆ ನನ್ನ ಅನುಭವವನ್ನು ಬಿತ್ತರಿಸಬೇಕಾಯಿತು. ಕಾಲಕ್ರಮೇಣ ಎಲ್ಲರೂ ನನ್ನ ವಿದೇಶಯಾತ್ರೆಯನ್ನು ಮರೆತು ಆಮಂತ್ರಣ ಕೊಡುವುದನ್ನು ನಿಲ್ಲಿಸಿದರು. ಸುಮಾರು ಎಂಟು ವರ್ಷದ ತರುವಾಯ ಮತ್ತೆ ನಾನು ಕಾಗದ-ಮಸಿಯ ಬಂಡವಾಳದಿಂದ ಇತಾಲಿಯದ ಚಿತ್ರರಚನೆಗೆ ತೊಡಗಿದ್ದೇನೆ. ಇದೀಗ ಈ ಚಿತ್ರ ಪೂರ್ತಿಯಾಗಿದೆ. ಇದರಲ್ಲಿನ ವಿಚಿತ್ರಗಳಿಗೆಲ್ಲಾ ನಾನೇ ಹೊಣೆ.



ನಾಪೋಲಿಯ ರಮಣೀಯ ದೃಶ್ಯ – ವೆಸುವಿಯೋ ಬೆಟ್ಟದ ಹಿನ್ನೆಲೆ.



ವಿಯಾ ಪಾರ್ಕೊ ಮಾರ್ಗರೀತ – ನನ್ನ ಹೋಟೆಲಿಗೆ ಹೋಗುವ ಏರುದಾರಿ.



ಲೇಫೋಂತಾನೆ – ಆರು ತಿಂಗಳ ಮನೆ.



ಎಡಕ್ಕೆ ಸಿಂಹಳೀಯ ಮೊಹಿದೀನ್–ಬಲಕ್ಕೆ ಪಾಕಿಸ್ತಾನಿ ಹುದಾ–ಕರ್ಸೆದ 'ವೃಂದಾವನ'ದ ಹಿನ್ನೆಲೆ.



ಕರ್ಸೆದ ಅರಮನೆಯಲ್ಲಿ ಹಂಸತೂಲಿಕಾತಲ್ಪ.



ಗೆಳೆಯ ಸಿನ್ಯೊರ್ ಆಪಾ: ಆತನ ವಿಲ್ಲಕ್ಕೆ ಹೋಗುವ ದಾರಿಯಲ್ಲಿ



ಚಾಂಕೊದಿನಾಪೊಲಿಯ ವಿದೇಶ ಖಾತೆಯ ಮುಖ್ಯಸ್ಥ–ಸಿನ್ಯೊರ್ ಕ್ರಾಸ್ತ ನೋವಾ (ಆಪನ ಧಣಿಯ) ಜತೆಯಲ್ಲಿ



ಇಸ್ವೇ ಉದ್ಘಾಟನೆಯಂದು ಕಾಕ್ ಟೇಲ್. ಎಡದಿಂದ ಬಲಕ್ಕೆ: ಕಬೇಸ, ಮಲ್ಕಿ ಯೊನ್ನ, ಡಾ। ಕ್ರಸ್ತರೋಜಾ, ಶ್ರೀಮತಿ ಕ್ರಸ್ತರೋಜ, ಕೌಂಟ್ ವೊನ್ ಬರಾತಿ ಯೇರಿ, ನಾನು ಮತ್ತು ಸುಬ್ಬಯ್ಯ.



ಅಧ್ಯಯನ ಸಂಸ್ಥೆಯ ಮುಂಬಾಗಿಲಲ್ಲಿ ಅಂತಾರಾಷ್ಟ್ರೀಯ ವಿದ್ಯಾರ್ಥಿ ಸಮುದಾಯ.



ಇನ್ನೇ ಉಪನ್ಯಾಸ: ನಿಂತವರು: (ಎಡದಿಂದ ಬಲಕ್ಕೆ) ಡಾ। ಫರ್ರೋಲ ಮತ್ತು ಮುಖ್ಯ ಉಪನ್ಯಾಸಕ. ಮುಂದಿನ ಸಾಲು ಕೂತವರು: ಸರ್ವೆಂಟಸ್ (ಮೆಕ್ಸಿಕೊ), ಒವೆತಾಂಕೊ (ಕೋಸ್ಟರಿಕಾ), ಆಶ್ರಾಫ್ (ಪಾಕಿಸ್ತಾನ), ಅವಾಲಾ (ಕೀನ್ಯ), ನಾನು ಮತ್ತು ಹುದಾ (ಪಾಕಿಸ್ತಾನ).



ಬಾಂಕೊದಿನಾಪೊಲಿಯಲ್ಲಿ ಡಾ. ಲೊಂಗೊ ಅವರೊಡನೆ ಚರ್ಚೆ.



ಹಾಲೆಂಡಿನ ಕ್ಯಾಥೊಲಿಕ್ ವಿಶ್ವವಿದ್ಯಾಲಯದ ಅರ್ಥಶಾಸ್ತ್ರಜ್ಞ, ಪಾದ್ರಿ, ಮತ್ತು ಗೆ. ಕ್ಯಾಸ್ಟ್ರೋ ಜತೆ – ದ. ಇಟಲಿ ಯಾತ್ರೆ.



ಅಮೃತಶಿಲೆಯ ಗವಿ – ನೇತಾಡುವ ಅಲಬಾಸ್ಟರ್. ದಕ್ಷಿಣ ಇಟಾಲಿಯ



ಕ್ಯಾಸ್ಟ್ರೋ ಸಂಗಡ – ನನ್ನ ಅಮೆರಿಕದ ಸಹಸಂಶೋಧಕ.



ಬ್ರಂದಿಸಿಯಲ್ಲಿ ರೋಮನ್ ದಳಗಳ ವಿಜಯ ಸ್ತಂಭ – ವಿಯಾ ಅಪ್ಪಿಯಾದ ನಿಲುದಾಣ.



ಸೊಲ್ಫತಾರಾ: ನಾಪೊಲಿಯ ಹೊರವಲಯದ ಅಗ್ನಿರಸದ ಸರೋವರ.



"ಬೊಂಬೆಯಾಟವಯ್ಯ" – ನಾಪೊಲಿಯ ಕರದಾರಿಯಲ್ಲಿ ಬೊಂಬೆಗಳನ್ನು ಮಕ್ಕಳಿಗೆ ಎತ್ತಿತೋರಿಸುವ ತಂದೆವಿರನ್ನು ನೋಡಿ.



ರೆಜ್ಜೋ ಕಲಾಬ್ರಿಯಾ: ದಕ್ಷಿಣ ಇಟಾಲಿಯದ ವೃಕ್ಷರಹಿತ ಬಂಜರುನೆಲ: ಇಲ್ಲಿ ಅಭಿವೃದ್ಧಿ ಕೆಲಸ ಭರದಿಂದ ಸಾಗಿದೆ.



ದ. ಇಟಾಲಿಯದ ಒಂದು ಹಳ್ಳಿಯ 'ತ್ರುಲ್ಲಿ'ಗಳು – ವಿಶಿಷ್ಟ ತೆರನ ಮಾಡಿನ ಮನೆಗಳು.

ಬಾಗಲೋಡಿ ದೇವರಾಯರೊಡನೆ.





ನಾಪೊಲಿಯ ರಾಷ್ಟ್ರೀಯ ಮ್ಯೂಸಿಯಂನಲ್ಲಿರುವ ಸಾಕ್ರಟಿಸನ ಅಮೃತಶಿಲಾ ಮೂರ್ತಿ.



ಬಾರಿ – ಬ್ರಿಂದಿಸಿ ನಡುವಣ ಹಳ್ಳಿಗಳು – ಮೋಟರುಕಾರಿನಲ್ಲಿ ಚೌಕದಲ್ಲಿ 'ಪಸ ಜ್ಜಾತ' – ನೋಟದ ಓಟ.

ದಕ್ಷಿಣ ಇತಾಲಿಯದ ಹಳ್ಳಿಯ ಸಾಮಾನ್ಯ ನೋಟ – ಹಳೆ ಮನೆಗಳು – ದಾರಿಗಳು.





ಲೊಸಾನೆ – ಊಷಿ ಸರೋವರ ತಟದ ರೆಸ್ಟುರಾದಲ್ಲಿ



ನನ್ನ ಕಣ್ಣು ಉಳಿದ ಜಾಗ – ದಕ್ಷಿಣ ಇತಲಿ ಪ್ರವಾಸ.



ಬೇಸಾಯದ ಮಾಹಿತಿ – ಇಟಾಲಿಯದ ಒಂದು ಹಳ್ಳಿಯಲ್ಲಿ ಇಪ್ಸೇ ತಂಡ.



ಪ್ರತ್ಯಕ್ಷ ಅಧ್ಯಯನದಲ್ಲಿ ಅಂತಾರಾಷ್ಟ್ರೀಯ ಅರ್ಥಶಾಸ್ತ್ರಜ್ಞರು.



ಯುಂಗ್‌ಫ್ರಾ ತುದಿಯಲ್ಲಿ – ನಂದನವನದ ಯಾತ್ರೆ.



ಪೊಲೆಂಡಿನ ಪ್ರೊ। ಬೊಬ್ರೊವಸ್ಕಿ ಮತ್ತು ಇಸ್ವೇ ಗುಂಪು.



ವೆನಿಸಿನ ಗ್ರಾಂಡ್ ಕೆನಾಲ್.

ವೆನಿಸ್: ವಿಶ್ವವಿಖ್ಯಾತ ಸಾನ್‌ಮಾರ್ಕೊ ಚೌಕ. ಇರುಳೆಲ್ಲ ಸಂಗೀತ, ಉಲ್ಲಾಸ.





ರೋಮ್ ನಗರ ಮಧ್ಯದ ವಿಕ್ಟರ್ ಇಮ್ಯಾನ್ಯುವೆಲ್ ಸೌಧ—ಒಂದು ವಿಕೃತ ವಾಸ್ತು.



ರಾಫೆಲನ್ ತೂಗುಚಿತ್ರ—ಕಾನ್‌ಸ್ಟಾಂಟಿನೋಪಲ ಯುದ್ಧ (ವ್ಯಾಟಿಕನ್)



ಯುಂಗ್‌ಫ್ರಾ ಹಾದಿಯಲ್ಲಿ – ಕಿರಿ ರೈಲಿಂದ ಮರಿ ರೈಲಿಗೆ.



ಸ್ವಿಟ್ಝರ್ಲೆಂಡಿನ ಲೊಸಾನೆ ನಗರ.

ರೋಮ್: ರಾಷ್ಟ್ರೀಯ ಹೆದ್ದಾರಿಯ ಒಂದು ನೋಟ.



ಲೂಯಿಜಿ ಆಪಾ – ನನ್ನ ಇಟಾಲಿಯನ್ ಬಂಧು.



ಜನೀವಾದಲ್ಲಿ ಜ್ವಿಂಗ್ಲಿ
ಮೂರ್ತಿಯ ಪದತಲದಲ್ಲಿ.



ತಿಗುಲ್ಲಿಯೋ ಜಲಸಂಧಿಯಲ್ಲಿ ಪಂದ್ಯಕ್ಕೊದಗುವ ದೋಣಿಗಳು.



ಸಿರೆಸಿನ ಕಾಂಪೋ ಟೊಯ್ಯೊಲಾದ ತಂಗುದಾಣ.



ಮನುಷ್ಯ ಜನಾಂಗದ ಭವಿಷ್ಯಕೇತು – ನ್ಯೂಯೋರ್ಕಿನಲ್ಲಿ 'ಯೂನೋ'ಕಟ್ಟಡ.



ಭೋರ್ಗರೆವ ನಯಗಾರಾ.


ಇತಾಲಿಯಾ
ಯಾತ್ರೆಯ ದಾರಿ
ಸ್ವಿಝರ್ಲೆಂಡ
ಫ್ರಾನ್ಸ್
ಯುಗೊಸ್ಲಾವಿಯ
ಇವ್ರೆಯ
ಸ್ಟ್ರೇಸ
ತೊರಿನೊ
ಮಿಲಾನೊ
ಬ್ರೆಶಿಯ
ವೆನಿಸ್
ಬೊಲೊನ್ಯಾ
ಜನೊವ
ಸ್ಪೇಜಿಯಾ
ಪೀಸಾ
ಫ್ಲಾರೆನ್ಸ್
ಸಿಯೇನ

